# ಗೀತಾ ಪ್ರವಚನ

## गीता प्रवचन

ವಿನೋಬಾ

ಅನುವಾದ:
ಸಿದ್ದವನಹಳ್ಳಿ ಕೃಷ್ಣಶರ್ಮ

ಸರ್ವ ಸೇವಾ ಸಂಘ ಪ್ರಕಾಶನ ವಿಭಾಗ
ಚಾಮರಾಜಪೇಟೆ, ಬೆಂಗಳೂರು ೨

# ಎರಡು ಮಾತು

(ಎರಡನೆ ಆವೃತ್ತಿಯಿಂದ)

ಇದು ಗೀತಾ ಪ್ರವಚನದ ಎರಡನೆ ಅಚ್ಚು. ಮೊದಲನೆಯದು ನಾನು ಸೆರೆಮನೆಯಲ್ಲಿರುವಾಗಲೇ ಅಚ್ಚಾಯಿತು. ಮೊದಲು ನಾನದನ್ನು ನೋಡಲಾಗಲಿಲ್ಲ. ಮನಸ್ಸಿಗೆ ಸಮರ್ಪಕವಾಗಿರಲಿಲ್ಲ.

ಗೀತೆಯಂತೆ ಇದೂ ಪ್ರತ್ಯಕ್ಷ ಕರ್ಮಕ್ಷೇತ್ರದಲ್ಲೇ ಪ್ರಕಟವಾಗಿದೆ. ೧೯೩೨ರಲ್ಲಿ ಧುಳೇ ಜೈಲಿನಲ್ಲಿ ಅನೇಕ ಸಂತ ಮಹಂತ-ಸೇವಕರು ಸೇರಿದ್ದರು. ಅವರ ಸೇವೆಗಾಗಿ ಇದು ಹುಟ್ಟಿ ಬಂತು. ಅದರಿಂದ ದಿನಬಳಕೆಯ ಮಾತೇ ಈ ಚರ್ಚೆಯಲ್ಲಿ ಬಂದಿದೆ. ಬಾಳಿನ ಸಂಬಂಧವಿಲ್ಲದ ಯಾವ ವಿಚಾರವೂ ವಾದವೂ ಇದರಲ್ಲಿಲ್ಲ. ಹಳ್ಳಿಗಳಲ್ಲಿ, ಪಟ್ಟಣಗಳಲ್ಲಿ ಇರುವ ಕೂಲಿಕಾರ-ಕೃಷಿಕರಿಗೆ ಕೂಡ ಇದರಿಂದ ಸಾಂತ್ವನ, ಶ್ರಮಪರಿಹಾರ ಆದೀತು ಎಂಬ ವಿಶ್ವಾಸ ನನಗಿದೆ.

ಈ ಪ್ರವಚನದ ನೆಪದಿಂದ ಗೀತೆಯ ಸೇವೆ ಮಾಡುವ ಸುಯೋಗವನ್ನು ದೇವರು ನನಗೆ ಕೊಟ್ಟ. ಅವನ ಅಪಾರ ಕೃಪೆ. ಇದನ್ನು ಬರೆದಿಟ್ಟುಕೊಳ್ಳಲು ಸಾನೇ ಗುರುಜಿಯಂಥ ಸಿದ್ಧಹಸ್ತ ಸತ್ಪುರುಷರು ಲಭಿಸಿದರು. ಕೇಳಲು ಜಮನಾಲಾಲರಂಥ ತಳಮಳದ ಸಾಧಕರು ದೊರೆತರು. ಹಿಂದುಸ್ಥಾನದಲ್ಲಿ ಈ ಪ್ರವಚನ ಎಲ್ಲೆಲ್ಲಿ ಮುಟ್ಟಿದೆಯೋ ಅಲ್ಲಲ್ಲಿ ಹೃದಯಶುದ್ಧಿಯ, ಕ್ರಿಯಾ ಪರಿವರ್ತನದ ಪ್ರೇರಣೆ ಕೊಟ್ಟಿದೆ. ಮನೆಮನೆಯಲ್ಲೂ ಇದರ ಶ್ರವಣ-ಪಠನ-ಮನನ ಆಗಬೇಕೆಂದು ನನ್ನ ಅಭಿಲಾಷೆ. ತುಕಾರಾಮರ ಭಾಷೆಯಲ್ಲಿ—

**ಶಿಕವೂನಿ ಬೋಲ । ಕೇಲೇ ಕೌತುಕ ನವಲ ।**
**ಆಪಣಿಯಾಂ ರಂಜವಿಲೇ । ಬಾಪೇಂ ಮಾಝಿಯಾ ವಿಠ್ಠಲೇ ॥**

ನನ್ನ ತಂದೆ ವಿಠ್ಠಲ ನನಗೆ ಮಾತು ಕಲಿಸಿ ತಾನೇ ಆ ಚಮತ್ಕಾರವನ್ನು ಕಂಡು ಹಿಗ್ಗುತ್ತಿದಾನೆ.

ಪರಂಧಾಮ, ಪವನಾರ್
೨೨-೧-೧೯೫೧.

**ವಿನೋಬಾ.**

# ಬೇರೆ ಬೇರೆ ಭಾಷೆಗಳಲ್ಲಿ ಗೀತಾ ಪ್ರವಚನ

| | ಭಾಷೆ | ಮುದ್ರಣ ಸಂಖ್ಯೆ | ಒಟ್ಟು ಪ್ರತಿ |
|---|---|---|---|
| ೧. | ಹಿಂದಿ | ೧೦ | ೨,೧೧,೦೦೦ |
| ೨. | ಮರಾಠಿ | ೬ | ೧,೦೦,೦೦೦ |
| ೩. | ಗುಜರಾತಿ | ೪ | ೭೦,೦೦೦ |
| ೪. | ಕೊಂಕಣಿ | ೧ | ೫,೦೦೦ |
| ೫. | ಸಿಂಧಿ | ೩ | ೧೦,೦೦೦ |
| ೬. | ಬಂಗಾಳಿ | ೩ | ೨೧,೦೦೦ |
| ೭. | ಉಡಿಯಾ | ೩ | ೧೫,೦೦೦ |
| ೮. | ಉರ್ದು | ೨ | ೧೨,೦೦೦ |
| ೯. | ತೆಲುಗು | ೪ | ೩೧,೦೦೦ |
| ೧೦. | ತಮಿಳು | ೪ | ೭೩,೦೦೦ |
| ೧೧. | ಮಲಯಾಳಿ | ೪ | ೩೨,೫೦೦ |
| ೧೨. | ಕನ್ನಡ | ೫ | ೫೯,೦೦೦ |

# ವಿಷಯ ಕ್ರಮ

# ಗೀತಾ ಪ್ರವಚನ

೧

## ೧. ಮಧ್ಯೇ ಮಹಾಭಾರತಂ

ಒಲವಿನ ತಮ್ಮಂದಿರೆ,

ಇವೊತ್ತಿನಿಂದ ನಾನು ಶ್ರೀಮದ್ ಭಗವದ್ ಗೀತೆಯ ವಿಷಯ ಹೇಳುತ್ತೇನೆ. ಗೀತೆಗೂ ನನಗೂ ಇರುವ ಸಂಬಂಧ ತರ್ಕಕ್ಕೆ ಮೀರಿದ್ದು. ನನ್ನ ಮೈ ತಾಯ ಹಾಲಿನಿಂದ ಬೆಳೆದಿದೆ. ಅದಕ್ಕಿಂತ ಹೆಚ್ಚಾಗಿ ನನ್ನ ಮನಸ್ಸು ಗೀತೆಯ ಹಾಲಿನಿಂದ ಬೆಳೆದಿದೆ. ಎಲ್ಲಿ ಜೀವಾಳದ ಸಂಬಂಧ ಇರುತ್ತದೋ ಅಲ್ಲಿ ತರ್ಕಕ್ಕೆ ಎಡೆಯಿಲ್ಲ. ತರ್ಕವನ್ನುಳಿದು ಶ್ರದ್ಧೆ—ಪ್ರಯೋಗ ಈ ಎರಡು ರೆಕ್ಕೆಗಳನ್ನು ಕೆದರಿ ಗೀತಾಗಗನದಲ್ಲಿ ನಾನು ಯಥಾಶಕ್ತಿ ವಿಹರಿಸುತ್ತೇನೆ. ಬಹುಶಃ ನಾನು ಗೀತೆಯ ವಾತಾವರಣದಲ್ಲೇ ಇದ್ದೇನೆ. ಗೀತೆಯೆಂದರೆ ನನ್ನ ಪ್ರಾಣತತ್ವ. ಗೀತೆಯ ಬಗ್ಗೆ ಯಾರಿಗಾದರೂ ನಾನು ಹೇಳಿದರೆ ಆಗ ಗೀತಾಸಮುದ್ರದ ಮೇಲೆ ತೇಲಾಡುತ್ತಿರುತ್ತೇನೆ. ನಾನೊಬ್ಬನೇ ಇದ್ದರೆ ಆ ಅಮೃತದ ಕಡಲಿನಲ್ಲಿ ಆಳವಾಗಿ ಮುಳುಗಿ ಕುಳಿತಿರುತ್ತೇನೆ. ಇಂಥ ಗೀತಾಮಾತೆಯ ಚರಿತ್ರೆಯನ್ನು ಪ್ರತಿ ಭಾನುವಾರ ನಾನು ಹೇಳಬೇಕೆಂದು ನಿರ್ಧಾರವಾಗಿದೆ.

ಗೀತೆಯನ್ನು ಮಹಾಭಾರತದಲ್ಲಿ ಯೋಜಿಸಿದಾರೆ. ಮಹಾಭಾರತದ ನಟ್ಟನಡುವೆ ಭಾರತದ ಎಲ್ಲೆಡೆಗೂ ಬೆಳಕು ಬೀರುವ ಎತ್ತರವಾದ ದೀಪದಂತೆ ಇದೆ—ಗೀತೆ. ಒಂದು ಕಡೆ ೬ ಪರ್ವ, ಇನ್ನೊಂದು ಕಡೆ ೧೨ ಪರ್ವ, ಇದರ ನಡುವೆ ಒಂದು ಕಡೆ ೭ ಅಕ್ಷೋಹಿಣೀ ಸೇನೆ, ಇನ್ನೊಂದು ಕಡೆ ೧೧ ಅಕ್ಷೋಹಿಣೀ ಸೇನೆ—ಹೀಗೆ ನಟ್ಟನಡುವೆ ಗೀತೆ ಉಪದೇಶಿತವಾಗುತ್ತದೆ.

ಮಹಾಭಾರತ ರಾಮಾಯಣಗಳು ನಮ್ಮ ರಾಷ್ಟ್ರೀಯ ಗ್ರಂಥಗಳು. ಅವುಗಳಲ್ಲಿ ವರ್ಣಿಸಿದ ವ್ಯಕ್ತಿಗಳು ನಮ್ಮ ಬಾಳಿನಲ್ಲಿ ಐಕ್ಯವಾಗಿದಾರೆ.

ರಾಮ–ಸೀತೆ, ಧರ್ಮರಾಯ–ದ್ರೌಪದಿ, ಭೀಷ್ಮ–ಹನುಮಂತರೇ ಮೊದಲಾದವರು ಸಾವಿರಾರು ವರ್ಷಗಳಿಂದ ಸಮಸ್ತ ಭಾರತೀಯ ಜೀವನದ ಮನ ಸೆಳೆದಿದ್ದಾರೆ. ಜಗತ್ತಿನ ಇತರ ಮಹಾ ಕಾವ್ಯಗಳ ಪಾತ್ರಗಳು ಯಾವುವೂ ಹೀಗೆ ಜನಜೀವನದಲ್ಲಿ ಬೆರೆತುಹೋದಂತೆ ಕಾಣುವುದಿಲ್ಲ. ಈ ದೃಷ್ಟಿಯಿಂದ ಮಹಾಭಾರತ ರಾಮಾಯಣಗಳು ನಿಸ್ಸಂದೇಹವಾಗಿ ಅದ್ಭುತ ಗ್ರಂಥಗಳು. ರಾಮಾಯಣ ಮಧುರ ನೀತಿಕಾವ್ಯ, ಮಹಾಭಾರತ ವ್ಯಾಪಕ ಸಮಾಜಶಾಸ್ತ್ರ. ವ್ಯಾಸರು ಒಂದು ಲಕ್ಷ ಸಂಹಿತೆಯನ್ನು ಬರೆದು, ಅಸಂಖ್ಯ ಚಿತ್ರಗಳನ್ನು ಚರಿತ್ರೆಗಳನ್ನು ಚಾರಿತ್ರ್ಯಗಳನ್ನು ಬಹು ಕೌಶಲ ದಿಂದ ಯಥಾವತ್ ರೂಪಿಸಿದ್ದಾರೆ. ಲೋಕದಲ್ಲಿ ಕೇವಲ ನಿರ್ದೋಷ ವಾದುದೆಂದರೆ ದೇವರೊಬ್ಬನೇ. ಹಾಗೆಯೇ ಬರೀ ದೋಷಪೂರ್ಣವಾದುದೂ ಯಾವುದೂ ಇಲ್ಲ. ಇದನ್ನು ಮಹಾಭಾರತ ಸ್ಪಷ್ಟವಾಗಿ ತಿಳಿಸುತ್ತದೆ. ಭೀಷ್ಮ ಯುಧಿಷ್ಠಿರರಂಥವರಲ್ಲಿಯೂ ದೋಷಗಳನ್ನು ತೋರಿಸಲಾಗಿದೆ. ಇದಕ್ಕೆ ಪ್ರತಿಯಾಗಿ ಕರ್ಣ ದುರ್ಯೋಧನರ ಗುಣವನ್ನೂ ಪ್ರಕಟಿಸಿದ್ದಾರೆ. ಮಾನವನ ಬಾಳು ಕರಿ - ಬಿಳಿ ದಾರಗಳಿಂದ ನೇದ ಬಟ್ಟೆ ಎಂಬುದನ್ನು ಮಹಾಭಾರತ ನಿಚ್ಚಳಮಾಡಿ ತಿಳಿಸುತ್ತದೆ. ತಾವು ಅಲಿಪ್ತರಾಗಿದ್ದು ಭಗವಾನ್ ವ್ಯಾಸರು ಈ ವಿರಾಟ್ ಪ್ರಪಂಚದ ನೆರಳು–ಬೆಳಕಿನ ಚಿತ್ರವನ್ನು ತೋರಿಸಿದ್ದಾರೆ. ವ್ಯಾಸರ ಈ ಅಲಿಪ್ತ ಉದಾತ್ತ ಗ್ರಂಥರಚನಾಕೌಶಲದಿಂದ ಮಹಾಭಾರತ ಭಂಗಾರದ ಗಣಿಯಾಗಿದೆ. ಸೋಸಿ ತೆಗೆದು ತೆಕ್ಕೆತುಂಬಾ ಬಂಗಾರವನ್ನು ಒಯ್ಯಬಹುದು.

ವ್ಯಾಸರು ಇಂಥ ಮಹಾಭಾರತವನ್ನೇನೋ ಬರೆದರು, ಆದರೆ ಅವರ ಸಂದೇಶ ಎಂದು ಹೇಳಬೇಕಾದುದು ಅವರಿಗೆ ಏನೂ ಇರಲಿಲ್ಲವೇ ? ತಮ್ಮದು ಈ ಉಪದೇಶ ಎಂದು ಎಲ್ಲಾದರೂ ಹೇಳಿದ್ದಾರೆಯೆ ? ವ್ಯಾಸರಿಗೆ ಎಲ್ಲಿ ಸಮಾಧಿ ಬಂದಿದೆ ? ಬೇರೆ ಬೇರೆ ಕಡೆ ಹೊರೆ ಹೊರೆಯಾಗಿ ತತ್ವಜ್ಞಾನ ಮಹಾಭಾರತದಲ್ಲೆಲ್ಲಾ ಬಂದಿದೆ. ಆದರೆ ಈ ಎಲ್ಲ ತತ್ವಜ್ಞಾನದ ಉಪದೇಶದ ಸಾರಸರ್ವಸ್ವವನ್ನು ಎಲ್ಲಾದರೂ ಒತ್ತಟ್ಟಿಗೆ ವ್ಯಾಸರು ಇಟ್ಟಿಲ್ಲವೆ ? ಇಟ್ಟಿದ್ದಾರೆ. ಸಮಗ್ರ ಭಾರತದ ನವನೀತವನ್ನು ವ್ಯಾಸರು ಭಗವದ್ಗೀತೆಯಲ್ಲಿ ಕೊಟ್ಟಿದ್ದಾರೆ. ಗೀತೆ ವ್ಯಾಸರ ಮುಖ್ಯ ಉಪದೇಶ,

ಅವರ ಮನನದ ನಾರಸಂಗ್ರಹ. ಇದರಿಂದಲೇ 'ಮುನೀನಾಮಪಿ ಅಹಂ ವ್ಯಾಸಃ' ಎಂದು ವಿಭೂತಿಯೋಗದಲ್ಲಿ ಅರ್ಥಪೂರ್ಣವಾಗಿ ಹೇಳಿದೆ. ಪ್ರಾಚೀನಕಾಲದಿಂದಲೂ ಗೀತೆಗೆ ಉಪನಿಷತ್ತು ಎಂಬ ಗೌರವ ಸಂದಿದೆ. ಗೀತೆ ಉಪನಿಷತ್ತುಗಳ ಉಪನಿಷತ್ತು. ಸರ್ವ ಉಪನಿಷತ್ತುಗಳನ್ನು ಹಿಂಡಿ ಗೀತಾರೂಪದಲ್ಲಿ ಆ ಹಾಲನ್ನು ಭಗವಂತ ಲೋಕಕ್ಕೆ ನೀಡಿದಾನೆ. ಅರ್ಜುನ ಬರೀ ನಿಮಿತ್ತಮಾತ್ರ. ಬಾಳಿನ ವಿಕಾಸಕ್ಕೆ ಅಗತ್ಯವಾದ ಪ್ರತಿಯೊಂದು ವಿಚಾರವೂ ಬಹುಶಃ ಗೀತೆಯಲ್ಲಿ ಬಂದೇ ಇದೆ. ಆದುದರಿಂದಲೇ ಗೀತೆ ಧರ್ಮಜ್ಞಾನದ ಕೋಶ ಎಂದು ಅನುಭವಿಗಳು ಯಥಾರ್ಥವಾಗಿ ಹೇಳಿದಾರೆ. ಗೀತೆ ಚಿಕ್ಕದು. ಆದರೆ ಹಿಂದೂಧರ್ಮದ ಮಹಾಗ್ರಂಥ!

ಗೀತೆಯನ್ನು ಹೇಳಿದುದು ಶ್ರೀಕೃಷ್ಣ. ಇದು ಎಲ್ಲರಿಗೂ ಗೊತ್ತಿದೆ. ಈ ಮಹಾ ಉಪದೇಶ ಪಡೆದ ಭಕ್ತ ಅರ್ಜುನ ಅದರಲ್ಲಿ ಬೆರೆತುಹೋದ. ಅಂತೇ ಅವನಿಗೂ ಕೃಷ್ಣ ಎಂಬ ಹೆಸರು ಬಂತು. ಭಗವಂತ - ಭಕ್ತರ ಹೃದ್ಗತವನ್ನು ಪ್ರಕಟಪಡಿಸುವಾಗ ವ್ಯಾಸದೇವ ಪೂರಾ ಕರಗಿಹೋಗಿದಾನೆ. ಲೋಕ ಆತನನ್ನೂ ಕೃಷ್ಣನೆಂದು ಕರೆವಷ್ಟುಮಟ್ಟಿಗೆ ಆಗಿದೆ. ಹೇಳುವವನು ಕೃಷ್ಣ, ಕೇಳುವವನು ಕೃಷ್ಣ, ಕಟ್ಟುವವನು ಕೃಷ್ಣ ಹೀಗೆ ಮೂವರಲ್ಲೂ ಒಂದೇ ಅದ್ವೈತ ಮೂಡಿತು. ಮೂವರಿಗೂ ಸಮಾಧಿ ಹತ್ತಿತು. ಗೀತೆಯನ್ನು ಅಭ್ಯಸಿಸುವಾಗ ಇಂಥ ಏಕಾಗ್ರತೆ ಬರಬೇಕು.

## ೨. ಅರ್ಜುನನ ಭೂಮಿಕೆಯು ಸಂಬಂಧ

ಗೀತೆ ಎರಡನೆಯ ಅಧ್ಯಾಯದಿಂದ ಪೊದಲಾಗಬೇಕಾಗಿತ್ತು ಎಂದು ಎಷ್ಟೋ ಜನರಿಗೆ ಅನಿಸುತ್ತದೆ. ಎರಡನೆಯ ಅಧ್ಯಾಯದ ೧೧ನೇ ಶ್ಲೋಕದಿಂದ ಪ್ರತ್ಯಕ್ಷ ಉಪದೇಶ ಪ್ರಾರಂಭವಾಗುತ್ತದೆ. ಅಲ್ಲಿಂದಲೇ ಗೀತೆ ಪ್ರಾರಂಭ ಎಂದರೆ ಏನು ತಪ್ಪು? ನನಗೊಬ್ಬರು ಹೇಳಿದರು: "ಅಕ್ಷರಗಳಲ್ಲಿ ಅ ಕಾರವೇ ಈಶ್ವರೀ ವಿಭೂತಿ ಎಂದು ದೇವರು ಹೇಳಿದಾನೆ. 'ಅಶೋಚ್ಯಾನನ್ವಶೋಚಸ್ತ್ವಂ' ಎಂಬ ಶ್ಲೋಕದ ಆದಿಯಲ್ಲೂ ಅ ಕಾರವಿದೆ. ಆದ್ದರಿಂದ ಅಲ್ಲಿಂದಲೇ ಗೀತೆ ಪ್ರಾರಂಭವಾಗಿದೆ." ಈ ತರ್ಕವನ್ನು ತಳ್ಳಿಹಾಕಿದರೂ ಇಲ್ಲಿ ಗೀತೆ ಆರಂಭ ಎಂಬುದು ಅನೇಕ ದೃಷ್ಟಿಗಳಿಂದ ಗಮನೀಯವಾಗಿದೆ.

ಆದರೆ ಅದಕ್ಕೆ ಹಿಂದಿನ ಪ್ರಾಸ್ತಾವಿಕ ಭಾಗವೂ ಮಹತ್ವದ್ದೇ. ಅರ್ಜುನ ಯಾವ ಮನೋಭಾವದಲ್ಲಿ ಇದ್ದಾನೆ, ಯಾವ ಮಾತನ್ನು ಹೇಳಲು ಗೀತೆ ಹುಟ್ಟಿತು, ಅದನ್ನು ಆ ಪ್ರಸ್ತಾವನೆ ಓದದೆ ಸರಿಯಾಗಿ ಅರಿಯುವುದು ಕಷ್ಟ.

ಅರ್ಜುನನ ಕ್ಲೈಬ್ಯವನ್ನು ಕಳೆದು, ಅವನನ್ನು ಯುದ್ಧಪ್ರವೃತ್ತ ನನ್ನಾಗಿ ಮಾಡಲು ಗೀತೆ ಹೇಳಲ್ಪಟ್ಟಿತು ಎಂದು ಕೆಲವರು ಹೇಳುತ್ತಾರೆ. ಅವರ ಅಭಿಪ್ರಾಯದಲ್ಲಿ ಗೀತೆ ಕರ್ಮಯೋಗವನ್ನು ಮಾತ್ರ ಹೇಳುವಂಥ ದಲ್ಲ; ಯುದ್ಧ-ಯೋಗವನ್ನು ಹೇಳುವಂಥದು. ವಿಚಾರ ಮಾಡಿದರೆ ಈ ಮಾತಿನಲ್ಲಿರುವ ತಪ್ಪು ಕಾಣಬರುತ್ತದೆ. ೧೮ ಅಕ್ಷೋಹಿಣೀ ಸೇನೆ ಯುದ್ಧಸನ್ನದ್ಧವಾಗಿದೆ. ಆ ಸೇನೆಗೆ ಅರ್ಜುನನನ್ನು ಯೋಗ್ಯನನ್ನಾಗಿ ಮಾಡಿತು ಗೀತೆ ಎಂದೇ ಅಭಿಪ್ರಾಯ? ಅರ್ಜುನ ಹೆದರಿದ, ಆ ಸೇನೆ ಹೆದರಿರಲಿಲ್ಲ. ಇದರಿಂದ ಅರ್ಜುನನಿಗಿಂತ ಆ ಸೇನೆ ಹೆಚ್ಚು ಯೋಗ್ಯ ವಾದುದು ಎನ್ನೋಣವೇ? ಈ ಕಲ್ಪನೆಯೇ ಬಾರದು. ಅರ್ಜುನ ಯುದ್ಧ ಮಾಡಲು ಹಿಂಜರಿದ. ಆದರೆ ಅಂಜಿ ಅಲ್ಲ. ನೂರಾರು ಯುದ್ಧಮಾಡಿದ ಮಹಾವೀರ ಅವನು. ಉತ್ತರ ಗೋಗ್ರಹಣದಲ್ಲಿ ಭೀಷ್ಮ ದ್ರೋಣ ಕರ್ಣ ರನ್ನು ಒಬ್ಬನೇ ಸೋಲಿಸಿದ್ದ. ಸದಾ ವಿಜಯವಂತ, ನರರಲ್ಲಿ ನಿಜವಾದ ನರ ಇವನೇ ಎಂಬ ಕೀರ್ತಿಯಿತ್ತು. ಅವನ ರೋಮರೋಮದಲ್ಲೂ ವೀರವೃತ್ತಿ ತುಳುಕುತ್ತಿತ್ತು. ಅರ್ಜುನನನ್ನು ಹೀನೈಸಲಿಕ್ಕೆಂದು ಕೆಣಕಲೆಂದು ಶ್ರೀಕೃಷ್ಣನೇ ಮೊಟ್ಟಮೊದಲು ಈ ಕ್ಲೈಬ್ಯದ ಆರೋಪವನ್ನು ಹೊರಿಸಿ ದವನು. ಆ ಬಾಣ ಗುರಿಗೆ ತಾಕಲಿಲ್ಲವೆಂದು ಬೇರೆ ದಾರಿ ತೆಗೆದು ಜ್ಞಾನ ವಿಜ್ಞಾನದ ಬಗ್ಗೆ ಅನೇಕ ವ್ಯಾಖ್ಯಾನ ಮಾಡತೊಡಗಿದ. ಅವನ ಕ್ಲೈಬ್ಯ ವನ್ನು ನಿರಸನ ಮಾಡುವುದೇ ಗೀತೆಯ ತಾತ್ಪರ್ಯವಲ್ಲ.

ಇನ್ನೂ ಕೆಲವರು ಹೇಳುತ್ತಾರೆ: ಅರ್ಜುನನ ಅಹಿಂಸಾವೃತ್ತಿಯನ್ನು ಕಳೆದು ಅವನನ್ನು ಯುದ್ಧಪ್ರವೃತ್ತನನ್ನಾಗಿ ಮಾಡಲು ಗೀತೆ ಹೇಳಲ್ಪಟ್ಟಿತು. ಇದೂ ಸರಿಯಲ್ಲವೆಂದು ನನಗನಿಸುತ್ತದೆ. ಇದನ್ನು ತಿಳಿಯಲು ಅರ್ಜುನನ ಮನೋಧರ್ಮವನ್ನು ಪರಿಶೀಲಿಸಬೇಕು. ಇದಕ್ಕೆ ಗೀತೆಯ ಮೊದಲನೆ ಅಧ್ಯಾಯವೂ ಎರಡನೆಯದರೊಳಗೆ ಹೊಕ್ಕಿರುವ ಆ ಭಾಗವೂ ಅತ್ಯಂತ ಪ್ರಯೋಜನಕಾರಿ.

ಅರ್ಜುನ ರಣಾಂಗಣದಲ್ಲಿ ಬಂದು ನಿಂತಾಗ ಕೃತನಿಶ್ಚಯನಾಗಿ ಕರ್ತವ್ಯಜ್ಞಾನವುಳ್ಳವನಾಗಿ ಬಂದು ನಿಂತ. ಅವನ ಸ್ವಭಾವದಲ್ಲಿಯೆ ಇತ್ತು ಕ್ಷಾತ್ರವೃತ್ತಿ. ಯುದ್ಧವನ್ನು ತಡೆಯಲು ಸರ್ವ ಪ್ರಯತ್ನಮಾಡಿದರೂ ಅದು ತಪ್ಪಲಿಲ್ಲ. ತೀರಾ ಕಡಿಮೆ ಬೇಡಿಕೆ, ಕೃಷ್ಣನಂಥವನ ಮಧ್ಯಸ್ಥಿಕೆ, ಎರಡೂ ವ್ಯರ್ಥವಾದುವು. ಅಂಥ ಸಂದರ್ಭದಲ್ಲಿ ದೇಶ ದೇಶದ ರಾಜರನ್ನು ಕಲೆಹಾಕಿ, ಕೃಷ್ಣನನ್ನು ಸಾರಥಿಯಾಗಿ ಪಡೆದು ತಂದು, ರಣಾಂಗಣದಲ್ಲಿ ನಿಂತು ಅರ್ಜುನ ವೀರವೃತ್ತಿಯ ಹುರುಪಿನಿಂದ ಕೃಷ್ಣನಿಗೆ ಹೇಳುತ್ತಾನೆ: 'ಎರಡೂ ಸೇನೆಯ ನಡುವೆ ನನ್ನ ರಥವನ್ನು ನಿಲ್ಲಿಸು. ನನ್ನೊಡನೆ ಯುದ್ಧ ಮಾಡಲು ಯಾರು ಯಾರು ಬಂದು ಸೇರಿದಾರೋ ಅವರ ಮೋರೆಗಳನ್ನಾದರೂ ಒಮ್ಮೆ ನೋಡುತ್ತೇನೆ.' ಕೃಷ್ಣ ಅವನು ಹೇಳಿದಂತೆ ಮಾಡುತ್ತಾನೆ. ಅರ್ಜುನ ನಾಲ್ಕೂ ಕಡೆಗೂ ಕಣ್ಣು ಹೊರಳಿಸಿ ನೋಡುತ್ತಾನೆ. ಅಲ್ಲಿ ಅವನಿಗೆ ಕಂಡದ್ದೇನು? ಎರಡೂ ಕಡೆ ತನ್ನ ಅಣ್ಣ ತಮ್ಮಂದಿರ, ಬಂಧು, ಬಳಗದ ಪ್ರಚಂಡ ಸಮೂಹ ಸೇರಿದೆ. ತಾತ, ತಂದೆ, ಮಕ್ಕಳು, ಮೊಮ್ಮಕ್ಕಳು, ಹೀಗೆ ನಾಲ್ಕು ತಲೆಮಾರಿನ ಜನ ಮರಣ–ಮಾರಣದ ಕೊನೆಯ ನಿರ್ಧಾರ ಮಾಡಿ ಸೇರಿದಂತೆ ಅವನಿಗೆ ಕಾಣುತ್ತದೆ. ಅದಕ್ಕೆ ಮೊದಲು ಅವನಿಗೆ ಈ ಚಿತ್ರ ಹೊಳೆದಿರಲಿಲ್ಲವೆಂದಲ್ಲ. ಆದರೆ ಕಣ್ಣಾರೆ ಕಂಡಾಗ ಅದರ ಪರಿಣಾಮವೆ ಬೇರೆ. ಈ ಸ್ವಜನ ಸಮೂಹವನ್ನು ನೋಡಿ ಅವನ ಎದೆ ತಳಮಳಿಸಿ ಹೋಯಿತು. ಅವನಿಗೆ ಬಹಳ ಕೆಡಕು ಎನಿಸಿತು. ಅಂದಿನವರೆಗೆ ಅವನು ಎಷ್ಟೋ ಯುದ್ಧ ಮಾಡಿದ್ದ, ಎಷ್ಟೋ ವೀರರನ್ನು ಕೊಂದಿದ್ದ. ಆಗ ಅವನಿಗೆ ಕೆಡುಕೆನಿಸಿರಲಿಲ್ಲ, ಅವನ ಗಾಂಡೀವ ಜಾರಿ ಬೀಳಲಿಲ್ಲ, ಅವನ ಮೈ ನಡುಗಲಿಲ್ಲ, ಅವನ ಕಣ್ಣು ತೇವವಾಗಲಿಲ್ಲ. ಅಂಥದು ಈಗೇನು ಬಂತು? ಈಗ ಹೀಗೇಕೆ? ಅಶೋಕನ ಹಾಗೆ ಇವನಲ್ಲೂ ಅಹಿಂಸೆಯ ಉದಯವಾಯಿತೆ? ಇಲ್ಲ. ಇದೆಲ್ಲ ಬರೀ ಸ್ವಜನಾಸಕ್ತಿ. ತನ್ನಿದಿರಿನಲ್ಲಿ ಇದೇ ಗಳಿಗೆಯಲ್ಲಿ ಗುರು–ಬಂಧು–ಬಳಗ ಅಲ್ಲದೆ ಬೇರೆ ವೈರಿಗಳಿದ್ದಿದ್ದರೆ ಅವರ ತಲೆಗಳನ್ನು ನಿಸ್ಸಂಕೋಚವಾಗಿ ಅವನು ಚಂಡಾಡುತ್ತಿದ್ದ. ಆದರೆ ಆಸಕ್ತಿಜನ್ಯಮೋಹ ಅವನ ಕರ್ತವ್ಯನಿಷ್ಠೆಯನ್ನು ನುಂಗಿತು. ಸಾಲದುದಕ್ಕೆ ತತ್ವಜ್ಞಾನವನ್ನು ಬೇರೆ ಜೋಡಿಸಿದ. ಮೋಹ

ಗ್ರಸ್ತನಾದರೂ ಪೂರ್ಣ ಕರ್ತವ್ಯಭ್ರಷ್ಟನಾಗುವುದು ಕರ್ತವ್ಯನಿಷ್ಠನಾದವನ ಮನಸ್ಸಿಗೆ ಒಗ್ಗದು. ಅದಕ್ಕೆ ಅವನು ಯಾವುದಾದರೂ ಒಂದು ಸದ್ವಿಚಾರದ ಮುಸುಕು ಹಾಕುತ್ತಾನೆ. ಅರ್ಜುನನದೂ ಹೀಗೇ ಆಯಿತು ಯುದ್ಧವೇ ಪಾಪಕಾರ್ಯ ಎಂದು ಅರ್ಜುನ ಸುಳ್ಳು ವಾದ ಮಾಡಿದ ಯುದ್ಧದಿಂದ ಕುಲಕ್ಷಯವಾದೀತು, ಧರ್ಮ ಲೋಪಿಸೀತು, ಸ್ವೈರಾಚಾರ ಹರಡೀತು, ವ್ಯಭಿಚಾರ ಹಬ್ಬೀತು, ಬರಗಾಲ ಕವಿದೀತು, ಸಮಾಜ ಸಂಕಟದಲ್ಲಿ ಮುಳುಗೀತು—ಹೀಗೆ ಏನೇನೋ ಹೇಳಿ ಶ್ರೀಕೃಷ್ಣನನ್ನು ಒಪ್ಪಿಸಲು ಪ್ರಯತ್ನಿಸಿದ.

ಇಲ್ಲಿ ನನಗೊಬ್ಬ ನ್ಯಾಯಾಧೀಶನ ಸಂಗತಿ ನೆನಪಾಗುತ್ತದೆ. ಒಬ್ಬ ನ್ಯಾಯಾಧೀಶ ಇದ್ದ. ನೂರಾರು ಜನ ಅಪರಾಧಿಗಳಿಗೆ ಅವನು ಮರಣಶಿಕ್ಷೆ ಕೊಟ್ಟಿದ್ದ. ಒಂದು ದಿನ ಅವನ ಮಗನನ್ನೇ ಕೊಲೆಗಡುಕ ಎಂದು ಹಿಡಿದು ತಂದು ಇವನ ಇದಿರಿಗೆ ನಿಲ್ಲಿಸಿದರು. ಅವನ ಮೇಲೆ ಅಪರಾಧ ಸಿದ್ಧವಾಗಿ, ತಾನೇ ಅವನಿಗೆ ಶಿಕ್ಷೆ ಕೊಡಬೇಕಾದ ಪ್ರಸಂಗ ಬಂತು. ಆಗ ಆ ನ್ಯಾಯಾಧೀಶ ಹಿಂತುಳಿದ. ಬುದ್ಧಿವಾದ ಹೇಳತೊಡಗಿದ : 'ಮರಣ ಶಿಕ್ಷೆ ಕೇವಲ ಅಮಾನುಷವಾದುದು. ಇಂಥ ಶಿಕ್ಷೆ ಕೊಡುವುದು ಮನುಷ್ಯನಿಗೆ ಭೂಷಣ ವಲ್ಲ. ಅಪರಾಧಿ ಇಂದಲ್ಲ ನಾಳೆ ಉತ್ತಮನಾದಾನೆಂಬ ಆಸೆಯನ್ನು ಇದು ಚಿವುಟಿಹಾಕುತ್ತದೆ. ಕೊಲೆ ಮಾಡಿದವನು ಭಾವನಾವಶನಾಗಿ ಉದ್ರೇಕದಲ್ಲಿ ಕೊಲೆ ಮಾಡಿದ. ಆದರೆ ಅವನ ಕಣ್ಣೊಳಗಿನ ಕೆಂಪು ಇಳಿದಮೇಲೆ ಅವನನ್ನು ಗಲ್ಲಿಗೆ ನೇತುಹಾಕಿ ಕೊಲ್ಲುವುದು ಮಾನವತ್ವಕ್ಕೇ ಕಳಂಕ, ನಾಚಿಕೆಗೇಡು.' ಇತ್ಯಾದಿಯಾಗಿ ನ್ಯಾಯಾಧೀಶ ಹೇಳತೊಡಗಿದ. ಮಗ ಇದಿರಿಗೆ ಬಾರದಿದ್ದರೆ ಆ ನ್ಯಾಯಾಧೀಶ ಸಾಯುವತನಕ ಮರಣ ಶಿಕ್ಷೆ ಯನ್ನು ಸಂತೋಷವಾಗಿ ಕೊಡುತ್ತಲೇ ಇದ್ದ. ಮಗನ ಮೇಲಿನ ಮೋಹ ದಿಂದ ಹಾಗೆ ಹೇಳಿದ. ಆ ಮಾತು ಒಳಗಿನಿಂದ ಬಂದುದಲ್ಲ. ಇವನು ನನ್ನ ಮಗ ಎಂಬ ಆಸಕ್ತಿಯಿಂದ ಹುಟ್ಟಿದ ಮಾತು ಅದು.

ಅರ್ಜುನನದೂ ಈ ನ್ಯಾಯಾಧೀಶನ ಗತಿಯಾಯಿತು. ಅವನು ಮಾಡಿದ ತರ್ಕ ತಪ್ಪಲ್ಲ. ಕಳೆದ ಮಹಾ ಯುದ್ಧದ ತರುವಾಯ ಲೋಕ ಇದೇ ಪರಿಣಾಮವನ್ನು ಕಂಡಿತು. ಆದರೆ ಅರ್ಜುನ ಹೇಳಿದುದು

ತತ್ವಜ್ಞಾನವಲ್ಲ, ಪ್ರಜ್ಞಾವಾದ. ಕೃಷ್ಣನಿಗೆ ಇದು ಗೊತ್ತು. ಅದಕ್ಕೇ ಅವನು ಈ ತರ್ಕಕ್ಕೆ ಗಮನವನ್ನೇ ಕೊಡದೆ ನೇರಾಗಿ ಅವನ ಮೋಹನಾಶದ ಉಪಾಯವನ್ನು ಹುಡುಕಿದ. ಅರ್ಜುನ ನಿಜವಾಗಿಯೂ ಅಹಿಂಸಾವಾದಿ ಯಾಗಿದ್ದರೆ ಜ್ಞಾನವಿಜ್ಞಾನದ ಬಗ್ಗೆ ಯಾರು ಎಷ್ಟೇ ಹೇಳಲಿ ತನ್ನ ಮೂಲ ಪ್ರಶ್ನೆಗೆ ಉತ್ತರ ಸಿಗದೆ ಅವನು ಸುಮ್ಮನಾಗುತ್ತಿರಲಿಲ್ಲ. ಇಡೀ ಗೀತೆಯಲ್ಲಿ ಅರ್ಜುನನ ಈ ಪ್ರಶ್ನೆಗೆ ಉತ್ತರವಿಲ್ಲ. ಅವನಿಗೇನೋ ಶಂಕಾಸಮಾಧಾನ ವಾಯಿತು. ಇದೆಲ್ಲದರ ಅರ್ಥ ಇಷ್ಟೇ—ಅರ್ಜುನ ಅಹಿಂಸಾವೃತ್ತಿಯವ ನಲ್ಲ; ಯುದ್ಧಪ್ರವೃತ್ತಿಯವನು. ಯುದ್ಧ ಅವನಿಗೆ ಸ್ವಭಾವಪ್ರಾಪ್ತ ಕಾರ್ಯ, ಅಪರಿಹಾರ್ಯ ಕರ್ಮ. ಮೋಹದಿಂದ ಅವನು ತನ್ನ ಕರ್ತವ್ಯ ವನ್ನು ಬಿಟ್ಟುಕೊಡಲು ನೋಡಿದ. ಈ ಮೋಹದ ಮೇಲೆಯೆ ಗೀತೆಯ ಗದಾಘಾತ.

## ೩. ಗೀತೆಯ ಪ್ರಯೋಜನ : ಸ್ವಧರ್ಮವಿರೋಧಿ ಮೋಹದ ನಿರಸನ

ಅಹಿಂಸೆಯೇ ಅಲ್ಲ, ಸನ್ಯಾಸದ ಶಬ್ದಜಾಲವನ್ನೂ ಅರ್ಜುನ ಬಳಸ ತೊಡಗಿದ್ದ. ಈ ನೆತ್ತರು ಬಳಿದ ಕ್ಷಾತ್ರಕ್ಕಿಂತ ಸನ್ಯಾಸವೇ ಲೇಸು ಎಂದ ಅರ್ಜುನ. ಆದರೆ ಅದು ಅರ್ಜುನನ ಸ್ವಧರ್ಮವೆ? ಅದು ಅವನ ವೃತ್ತಿಯೆ? ಸನ್ಯಾಸಿಯ ವೇಷವನ್ನೇನೊ ಸುಲಭವಾಗಿ ಧರಿಸಬಹುದು. ಆದರೆ ಸನ್ಯಾಸಿಯ ಮನಸ್ಸು ಎಲ್ಲಿಂದ ಬಂಬೇಕು? ಸನ್ಯಾಸಿ ವೇಷದಿಂದ ಅರ್ಜುನ ಅಡವಿ ಸೇರಿದರೂ ಅಲ್ಲಿ ಚಿಗರಿಯ ಬೇಟೆಯಾಡುತ್ತಿದ್ದ. ಭಗವಂತ ಸ್ಪಷ್ಟವಾಗಿಯೇ ಹೇಳಿದ· 'ಅರ್ಜುನ, ಯುದ್ಧ ಬೇಡವೆನ್ನುತ್ತೀಯಾ. ಇದು ಬರಿಯ ಭ್ರಾಂತಿ. ಇಂದಿನವರೆಗೆ ನಿನಗೆ ಮೈಗೂಡಿರುವ ಸ್ವಭಾವ ನಿನ್ನಿಂದ ಯುದ್ಧ ಮಾಡಿಸದೆ ಬಿಟ್ಟೀತೆ?'

ಅರ್ಜುನನಿಗೆ ಸ್ವಧರ್ಮ ವಿಗುಣವಾಗಿ ಕಂಡಿತು. ಆದರೇನು? ಎಷ್ಟೇ ವಿಗುಣವಾದರೂ ಸ್ವಧರ್ಮದಿಂದಲೇ ಮನುಷ್ಯ ತನ್ನ ವಿಕಾಸವನ್ನು ಸಾಧಿಸಬೇಕು. ಅದರಿಂದಲೇ ಅವನಿಗೆ ವಿಕಾಸ ಸಾಧ್ಯ. ಇದರಲ್ಲಿ ಅಭಿಮಾನದ ಸೊಂಕು ಇಲ್ಲ. ಇದು ವಿಕಾಸದ ಸೂತ್ರ ಹಿರಿದೆಂದು ಸ್ವಧರ್ಮವನ್ನು ಹಿಡಿಯಬೇಕಾಗಿಲ್ಲ; ಕಿರಿದೆಂದು ಜರಿಯಬೇಕಾಗಿಲ್ಲ.

ನಿಜವಾಗಿ ಅದು ಹಿರಿದೂ ಅಲ್ಲ, ಕಿರಿದೂ ಅಲ್ಲ. ಅದು ನನಗೆ ಒಗ್ಗುವಂಥದು. 'ಶ್ರೇಯಾನ್ ಸ್ವಧರ್ಮೋ ವಿಗುಣಃ'. ಗೀತೆಯ ಈ ಶ್ಲೋಕದಲ್ಲಿ ಬರುವ ಧರ್ಮಶಬ್ದದ ಅರ್ಥ ಹಿಂದೂ ಧರ್ಮ, ಮುಸಲ್ಮಾನ ಧರ್ಮ, ಕ್ರಿಸ್ತಾನ ಧರ್ಮ, ಹೀಗಲ್ಲ. ಪ್ರತಿಯೊಬ್ಬನಿಗೂ ಅವನವನ ಧರ್ಮ ಬೇರೆ ಬೇರೆಯಾಗಿ ಇದೆ. ನನ್ನಿದಿರಿಗಿರುವ ೨೦೦ ಜನರಿಗೆ ೨೦೦ ಧರ್ಮ ಇವೆ. ನನ್ನ ಧರ್ಮವೇ ಹತ್ತು ವರ್ಷದ ಹಿಂದೆ ಇದ್ದುದು ಈಗಿಲ್ಲ. ಈಗಿನದು ಹತ್ತು ವರ್ಷದ ತರುವಾಯ ಇರಲಿಕ್ಕಿಲ್ಲ. ಚಿಂತನೆ ಅನುಭವಗಳಿಂದ ಧರ್ಮ ಬದಲಾಗುತ್ತದೆ, ಹಳತು ಕಳೆದು ಹೊಸತು ಬರುತ್ತದೆ. ಹಠದಿಂದ ಏನೂ ಮಾಡಬೇಕಾದುದಿಲ್ಲ.

ಹೆರವರ ಧರ್ಮ ಶ್ರೇಷ್ಠವೇ ಆಗಿ ಕಂಡರೂ ಅದನ್ನು ಅವಲಂಬಿಸಿದರೆ ನನಗೆ ಕಲ್ಯಾಣವಲ್ಲ. ಸೂರ್ಯನ ಬೆಳಕು ನನಗೆ ಪ್ರಿಯ. ಆ ಪ್ರಕಾಶದಿಂದ ನಾನು ಬೆಳೆಯುತ್ತೇನೆ. ಸೂರ್ಯ ನನಗೆ ವಂದನೀಯ. ಆದರೆ ನಾನು ನೆಲವನ್ನು ಬಿಟ್ಟು ಸೂರ್ಯನ ಬಳಿಗೆ ಹೋದರೆ ಸುಟ್ಟು ಬೂದಿಯಾದೇನು. ಭೂಮಿಯ ಮೇಲೆ ಇರುವುದು ವಿಗುಣವೆ ಇದ್ದೀತು. ಸೂರ್ಯನ ಮುಂದೆ ಭೂಮಿ ತುಚ್ಛವೇ ಇದ್ದೀತು; ಅದಕ್ಕೆ ಸ್ವಯಂ ಪ್ರಕಾಶವಿಲ್ಲ; ಆದರೆ ಸೂರ್ಯನ ಬಳಿ ಸಾರಿ ಆ ಬಿಸಿಯನ್ನು ತಡೆಯುವ ಬಲ ನನಗೆ ಇಲ್ಲದಿರುವ ತನಕ ಭೂಮಿಯ ಮೇಲೆ ಇದ್ದು ನನ್ನ ವಿಕಾಸ ಮಾಡಿಕೊಳ್ಳಬೇಕು. 'ನೀರಿಗಿಂತ ಹಾಲು ಅಮೌಲ್ಯ, ಹಾಲಿನಲ್ಲಿ ಇರು' ಎಂದು ಮೀನಿಗೆ ಯಾರಾದರೂ ಹೇಳಿದರೆ ಮೀನು ಅದನ್ನು ಒಪ್ಪೀತೆ? ಮೀನು ನೀರಿನಲ್ಲಿ ಬದುಕೀತು, ಹಾಲಿನಲ್ಲಿ ಸತ್ತೀತು.

ಹೆರವರ ಧರ್ಮ ಸುಲಭವಾದರೂ ಸಂಗ್ರಾಹ್ಯವಲ್ಲ. ಅನೇಕ ಸಲ ಸುಲಭವೆಂದು ಕಾಂಬುದು ಬರಿಯ ತೋರಿಕೆ. ಸಂಸಾರದಲ್ಲಿ ಹೆಂಡತಿ ಮಕ್ಕಳ ಪೋಷಣೆ ಮಾಡುವ ತಾಪತ್ರಯ ಕಷ್ಟವಾದುದೆಂದು ಗೃಹಸ್ಥರು ಸನ್ಯಾಸ ತೆಗೆದುಕೊಂಡರೆ ಅದು ಬರೀ ವೇಷ; ಅದು ಭಾರವಾದೀತು. ಅವಕಾಶ ಸಿಕ್ಕರೆ ಸಾಕು ಅದರ ವಾಸನೆ ಉಕ್ಕುತ್ತದೆ. ಸಂಸಾರದ ಹೊರೆ ಭಾರವೆಂದು ಅಡವಿಗೆ ಹೋದವನು ಅಲ್ಲಿಯೂ ಒಂದು ಗುಡಿಸಲು ಕಟ್ಟುತ್ತಾನೆ. ಅದರ ರಕ್ಷಣೆಗಾಗಿ ಒಂದು ಬೇಲಿ ಹಾಕುತ್ತಾನೆ. ಹೀಗೆ

ಮಾಡುಮಾಡುತ್ತಾ ಸಂಸಾರದ ಎಲ್ಲ ಕೀಟಲೆಯೂ ಅವನ ಪಾಲಿಗೆ ಬರುತ್ತದೆ. ನಿಜವಾಗಿ ವೈರಾಗ್ಯವೃತ್ತಿಯಿದ್ದವರಿಗೆ ಸನ್ಯಾಸ ಕಠಿನವಲ್ಲ. ಸನ್ಯಾಸ ಸುಲಭವಾದುದು ಎಂದು ಸ್ಮೃತಿವಚನವೇ ಇದೆ. ಮುಖ್ಯವಾದ ಅಂಶ ವೃತ್ತಿ. ಅವನವನ ನೈಜವೃತ್ತಿಯಂತೆ ಅವನವನ ಧರ್ಮ, ಶ್ರೇಷ್ಠ-ಕನಿಷ್ಠ, ಸುಲಭ-ಕಷ್ಟ ಅದರಲ್ಲಿಲ್ಲ. ನಿಜವಾದ ವಿಕಾಸವಾಗಬೇಕು, ಸತ್ಯವಾದ ಪರಿಣತಿಯಾಗಬೇಕು.

ಕೆಲವರು ಭಾವುಕರು ಕೇಳಿಯಾರು—'ಯುದ್ಧಕ್ಕಿಂತಲೂ ಸನ್ಯಾಸ ಹೆಚ್ಚಿನದಾಗಿದ್ದರೆ ಭಗವಂತ ಅರ್ಜುನನನ್ನು ಸನ್ಯಾಸಿಯಾಗಿ ಏಕೆ ಮಾಡಲಿಲ್ಲ? ಅವನಿಗೆ ಅದು ಸಾಧ್ಯವಾಗಿತ್ತೆ?' ಅವನಿಗೆ ಯಾವುದೂ ಅಸಾಧ್ಯವಿರಲಿಲ್ಲ. ಆದರೆ ಅದರಲ್ಲಿ ಅರ್ಜುನನಿಗೇನು ಪುರುಷಾರ್ಥಸಿದ್ಧಿ? ಭಗವಂತ ಎಂದರೆ ಸ್ವಾತಂತ್ರ್ಯ. ಪ್ರತಿಯೊಬ್ಬನೂ ತಾನೇ ಪ್ರಯತ್ನಿಸಬೇಕು. ಅದೇ ಸವಿ. ಚಿಕ್ಕ ಮಕ್ಕಳಿಗೆ ತಾವೇ ಚಿತ್ರ ಗೀಚುವುದೆಂದರೆ ಆನಂದ. ಅವನ ಕೈಹಿಡಿದು ತಿದ್ದಿಸಿದರೆ ಅವನಿಗದು ಸೇರದು. ಉಪಾಧ್ಯಾಯನೇ ಹುಡುಗನಿಗೆ ಲೆಕ್ಕಮಾಡಿಕೊಟ್ಟರೆ ಹುಡುಗನ ಬುದ್ಧಿ ಬೆಳೆಯುವುದು ಹೇಗೆ? ತಂದೆ ತಾಯಿ ಗುರುಗಳು ಸೂಚನೆ ಕೊಡಲಿ. ಪರಮೇಶ್ವರ ಒಳಗಿನಿಂದಲೇ ಸೂಚನೆ ಕೊಡುತ್ತಾನೆ. ಇದಕ್ಕಿಂತ ಹೆಚ್ಚು ಏನೂ ಮಾಡ. ಕುಂಬಾರನಂತೆ ದೇವರೇ ಕುಟ್ಟಿ ಬಡಿದು ಎಳೆದು ಪ್ರತಿಯೊಬ್ಬರನ್ನೂ ಮಡಕೆ ಮಾಡತೊಡಗಿದರೆ ಅದರಲ್ಲೇನು ಸ್ವಾರಸ್ಯ? ನಾವು ಗಡಿಗೆ-ಮಡಕೆಯಲ್ಲ; ನಾವು ಚಿನ್ಮಯರು.

ಇದೆಲ್ಲ ವಿವರಣೆಯಿಂದ ಒಂದು ಮಾತು ನಿಮಗೆ ಮನದಟ್ಟಾಗಿರಬೇಕು. ಸ್ವಧರ್ಮಕ್ಕೆ ಅಡ್ಡಿಬರುವ ಮೋಹವನ್ನು ಕಳೆಯುವುದೇ ಗೀತೆಯ ಜನ್ಮದ ಉದ್ದೇಶ್ಯ. ಅರ್ಜುನ ಧರ್ಮಸಮ್ಮೂಢನಾದ. ಸ್ವಧರ್ಮದ ಬಗ್ಗೆ ಅವನು ಮೋಹಪರವಶನಾದ ಕೃಷ್ಣ ಕೊಟ್ಟ ಮೊದಲನೆ ಏಟಿಗೇ ಅರ್ಜುನ ಈ ಮಾತನ್ನು ಒಪ್ಪಿಕೊಂಡ. ಆ ಮೋಹ, ಮಮತೆ, ಆಸಕ್ತಿಯನ್ನು ದೂರಮಾಡುವುದೇ ಗೀತೆಯ ಮುಖ್ಯ ಕಾರ್ಯ. ಗೀತೆಯನ್ನೆಲ್ಲ ಹೇಳಿದ ಮೇಲೆ ಕೃಷ್ಣ ಕೇಳುವ ಪ್ರಶ್ನೆಯೇನು? 'ಅರ್ಜುನ, ಮೋಹ ಹೋಯಿತೆ?' ಅರ್ಜುನ ಹೇಳಿದ—'ದೇವ, ಮೋಹ ನಾಶವಾಯಿತು. ಸ್ವಧರ್ಮದ

ಅರಿವಾಯಿತು.' ಗೀತೆ ಹೀಗೆ ಮೊದಲಾಗಿ ಮುಗಿಯುವುದರಿಂದ ಮೋಹ ನಿರಾಕರಣೆಯೇ ಅದರ ಫಲ. ಗೀತೆಯದೇ ಅಲ್ಲ, ಮಹಾಭಾರತದ್ದೂ ಇದೇ ಉದ್ದೇಶ್ಯ. ವ್ಯಾಸರು ಭಾರತದ ಪ್ರಾರಂಭದಲ್ಲೇ ಹೇಳಿದಾರೆ— 'ಲೋಗರ ಮನಸ್ಸಿನ ಮೋಹವನ್ನು ದೂರಮಾಡಲೆಂದೇ ನಾನೀ ಇತಿಹಾಸ ಪ್ರದೀಪವನ್ನು ಹತ್ತಿಸುತ್ತಿದೇನೆ.'

## ೪. ಋಜುಬುದ್ಧಿಯ ಅಧಿಕಾರ

ಮುಂದೆ ಬರುವ ಸಮಗ್ರಗೀತೆಯನ್ನು ಅರ್ಥಮಾಡಿಕೊಳ್ಳಲು ಅರ್ಜುನನ ಭೂಮಿಕೆ ನಮಗೆ ಉಪಕಾರಿಯಾಗಿದೆ ಇದಕ್ಕಾಗಿ ನಾವು ಅವನಿಗೆ ಕೃತಜ್ಞರಾಗಿರಬೇಕು. ಇದಲ್ಲದೆ ಇನ್ನೂ ಇದೆ ಅವನ ಉಪಕಾರ ಅರ್ಜುನನ ಈ ಮನೋವೃತ್ತಿಯಲ್ಲಿ ಅತ್ಯಂತ ಋಜುತೆ ಕಾಣಬರುತ್ತದೆ. ಅರ್ಜುನ ಎಂದರೇನೇ ಋಜು ಅಥವಾ ಸರಳ ಸ್ವಭಾವಿ ಅವನ ಮನಸ್ಸಿನಲ್ಲಿ ಹುಟ್ಟಿದ ವಿಕಾರ ವಿಚಾರ ಎಲ್ಲವನ್ನೂ ಬಿಚ್ಚುಮನದಿಂದ ಅವನು ಕೃಷ್ಣನ ಇದಿರಿಗೆ ಹೇಳಿದ. ಏನನ್ನೂ ಮುಚ್ಚಿಡಲಿಲ್ಲ. ಕಡೆಗೆ ಶ್ರೀಕೃಷ್ಣನನ್ನು ಶರಣುಹೋದ. ನಿಜವಾಗಿ ಅರ್ಜುನ ಮೊದಲೇ ಕೃಷ್ಣಶರಣ. ಕೃಷ್ಣನನ್ನು ಸಾರಥಿಯಾಗಿ ಮಾಡಿಕೊಂಡು ತನ್ನ ಕುದುರೆಗಳ ಲಗಾಮನ್ನು ಅವನ ಕೈಗೆ ಕೊಟ್ಟಾಗಲೇ ತನ್ನ ಮನಸ್ಸಿನ ಲಗಾಮನ್ನೂ ಅವನ ಕೈಗೆ ಕೊಡಲು ಸಿದ್ಧನಾದ ನಾವೂ ಹಾಗೇ ಮಾಡೋಣ. ಅರ್ಜುನನ ಬಳಿ ಕೃಷ್ಣ ಇದ್ದ. ನಾವೆಲ್ಲಿಂದ ತರೋಣ ಕೃಷ್ಣನನ್ನು ಎಂದೀರಿ? ಕೃಷ್ಣ ಎಂಬ ವ್ಯಕ್ತಿಯೊಬ್ಬ ಇದ್ದ ಎಂಬ ಐತಿಹಾಸಿಕ ಭ್ರಾಂತಿಗೆ ಸಿಗಬೇಡಿ. ಅಂತ ರ್ಯಾಮಿಯ ರೂಪದಿಂದ ಕೃಷ್ಣ ಪ್ರತಿಯೊಬ್ಬರ ಹೃದಯದಲ್ಲೂ ವಿರಾಜ ಮಾನನಾಗಿದಾನೆ. ಸಮೀಪಾತಿಸಮೀಪ ಎಂದರೆ ಅವನೇ. ನಮ್ಮ ಹೃದಯದ ಎಲ್ಲ ಕಳವಳವನ್ನು ಅವನಿದಿರಿಗೆ ತೆರೆದಿಟ್ಟು 'ದೇವ, ನಾ ನಿನಗೆ ಶರಣು ಬಂದೆ. ನೀನು ನನಗೆ ಅನನ್ಯ ಗುರು. ನನಗೆ ದಾರಿ ತೋರು.* ನೀ ತೋರಿದ ದಾರಿಯಲ್ಲಿ ನಾ ನಡೆವೆ' ಎನ್ನೋಣ. ಹೀಗೆ ನಡೆದರೆ ಪಾರ್ಥಸಾರಥಿ ನಮ್ಮ ಸಾರಥ್ಯವನ್ನು ಮಾಡಿಯಾನು. ತನ್ನ ಶ್ರೀಮುಖ ದಿಂದ ನಮಗೆ ಗೀತೆಯನ್ನು ಕೇಳಿಸಿಯಾನು. ನಮಗೆ ಗೆಲವು ಕೊಟ್ಟಾನು.

ಭಾನುವಾರ, ೨೧-೨-೩೨.

---

* ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ.

## ೫. ಗೀತೆಯ ಪರಿಭಾಷೆ

ಕಳೆದ ಸಲ ಅರ್ಜುನನ ವಿಷಾದಯೋಗವನ್ನು ಕಂಡೆವು. ಅರ್ಜುನ ನಂಥ ಋಜುಸ್ವಭಾವಿಗೆ, ಹರಿಶರಣನಿಗೆ ವಿಷಾದವೂ ಯೋಗವಾಗುತ್ತದೆ. ಇದನ್ನೇ ಹೃದಯಮಂಥನವೆನ್ನುತ್ತೇವೆ. ಈ ಪ್ರಸಂಗಕ್ಕೆ ಅರ್ಜುನ-ವಿಷಾದಯೋಗ ಎನ್ನದೆ ವಿಷಾದಯೋಗ ಎಂಬ ಸಾಧಾರಣ ಹೆಸರನ್ನು ಕೊಟ್ಟಿದೇನೆ. ಗೀತೆಯಲ್ಲಿ ಅರ್ಜುನ ಬರೀ ನಿಮಿತ್ತ. ಪಂಢರಪುರದಲ್ಲಿ ಪುಂಡಲೀಕನಿಗಾಗಿ ಪಾಂಡುರಂಗನ ಅವತಾರವಾಗಲಿಲ್ಲ. ಪುಂಡಲೀಕನ ನೆಪದಿಂದ ಜಡಜೀವಿಗಳಾದ ನಮ್ಮನ್ನು ಉದ್ಧರಿಸಲು ಸಾವಿರಾರು ವರ್ಷದಿಂದ ಪಾಂಡುರಂಗ ನಿಂತಿದಾನೆ. ಇದೇ ರೀತಿ ಅರ್ಜುನನ ನೆಪದಿಂದ ಗೀತಾದಾನವಾಗಿದ್ದರೂ ಅದು ಎಲ್ಲರಿಗೂ ಅನ್ವಯಿಸುತ್ತದೆಂದು ಗೀತೆಯ ಮೊದಲ ಅಧ್ಯಾಯಕ್ಕೆ ಸಾಮಾನ್ಯ ವಿಷಾದಯೋಗವೆಂಬ ಹೆಸರೇ ಸರಿ. ಇಲ್ಲಿಂದ ಗೀತಾವೃಕ್ಷ ಬೆಳೆದು ಹೆಮ್ಮರವಾಗಿ ಕಡೆಯ ಅಧ್ಯಾಯದಲ್ಲಿ ಪ್ರಸಾದಯೋಗದ ಫಲ ಬಿಡುತ್ತದೆ. ದೇವರ ಇಚ್ಛೆಯಿದ್ದರೆ ನಾವು ಜೈಲಿನ ಅವಧಿಯೊಳಗಾಗಿ ಅಲ್ಲಿಯವರೆಗೆ ತಲಪುತ್ತೇವೆ.

ಎರಡನೆ ಅಧ್ಯಾಯದಿಂದ ಗೀತೆಯ ಉಪದೇಶ ಪ್ರಾರಂಭ. ಆದಿಯಲ್ಲೇ ಭಗವಂತ ಬಾಳಿನ ಮಹಾಸಿದ್ಧಾಂತವನ್ನು ಹೇಳುತ್ತಾನೆ. ಬಾಳು ಯಾವ ತತ್ವದ ಮೇಲೆ ನೆಲೆನಿಂತಿದೆಯೋ ಆ ಬಾಳತತ್ವ ಮೊದಲು ಗಂಟಲಲ್ಲಿ ಇಳಿದರೆ ಮುಂದಿನ ದಾರಿ ಸುಗಮವಾದೀತು ಎಂಬ ದೃಷ್ಟಿ ಇದು. ಗೀತೆಯ ಎರಡನೆ ಅಧ್ಯಾಯದೊಳಗಿನ ಸಾಂಖ್ಯ–ಬುದ್ಧಿ ಈ ಶಬ್ದದ ಅರ್ಥ ಜೀವನದ ಮೂಲ ಸಿದ್ಧಾಂತ ಎನ್ನುತ್ತೇನೆ. ಈ ಮೂಲ ಸಿದ್ಧಾಂತವನ್ನೀಗ ನಾವು ನೋಡಬೇಕು. ಆದರೆ ಅದಕ್ಕೆ ಮೊದಲು ಸಾಂಖ್ಯ ಶಬ್ದದ ಈ ಸಂದರ್ಭ ದಲ್ಲಿ ಗೀತೆಯ ಪಾರಿಭಾಷಿಕ ಶಬ್ದಗಳ ಅರ್ಥದ ಬಗ್ಗೆ ಸ್ವಲ್ಪ ವಿವರಣೆ ಒಳಿತಾದೀತು.

ಗೀತೆಯಲ್ಲಿ ಹಳೆಯ ಶಾಸ್ತ್ರೀಯ ಶಬ್ದಗಳಿಗೆ ಹೊಸ ಅರ್ಥ ಕೊಡುವ ರೂಢಿಯಿದೆ. ಹಳೆಯ ಶಬ್ದಕ್ಕೆ ಹೊಸ ಅರ್ಥ ತೊಡಿಸುವುದು ವಿಚಾರ

ಕ್ರಾಂತಿಯ ಅಹಿಂಸಕ ರೀತಿ. ಇದರಲ್ಲಿ ವ್ಯಾಸರದು ಪಳಗಿದ ಕೈ. ಅದರಿಂದ ಗೀತೆಯ ಶಬ್ದಗಳಿಗೆ ವ್ಯಾಪಕ ಸಾಮರ್ಥ್ಯ ದೊರೆತು ಗೀತೆ ಹೊಚ್ಚ ಹೊಸದಾಗಿ ಕಳಕಳಿಸಿತು. ಅನೇಕ ಜನ ವಿಚಾರಿಗಳಿಗೆ ತಮ್ಮ ತಮ್ಮ ಅಗತ್ಯ, ಅನುಭವಗಳಿಗೆ ತಕ್ಕಂತೆ ಬೇರೆಬೇರೆ ಅರ್ಥ ಜೋಡಿಸಿಕೊಳ್ಳಲು ಅನುವಾಯಿತು. ಇವೆಲ್ಲ ಅರ್ಥಗಳೂ ಆಯಾ ಮನೋವೃತ್ತಿಗೆ ಸರಿ. ಇದರಲ್ಲಿ ಯಾವುದನ್ನೂ ವಿರೋಧಿಸುವ ಅಗತ್ಯವಿಲ್ಲದೆಯೆ ನಾವು ಸ್ವತಂತ್ರವಾಗಿ ಅರ್ಥಮಾಡಬಹುದು.

ಈ ಬಗ್ಗೆ ಉಪನಿಷತ್ತುಗಳಲ್ಲಿ ಒಂದು ಸ್ವಾರಸ್ಯವಾದ ಸಂಗತಿಯಿದೆ. ಒಮ್ಮೆ ದೇವ ಮಾನವ ದಾನವರೆಲ್ಲರೂ ಪ್ರಜಾಪತಿಯ ಬಳಿಗೆ ಉಪದೇಶಕ್ಕಾಗಿ ಹೋದರು. ಪ್ರಜಾಪತಿ ಎಲ್ಲರಿಗೂ 'ದ' ಎಂಬ ಒಂದೇ ಅಕ್ಷರವನ್ನು ಹೇಳಿದ. ದೇವತೆಗಳೆಂದರು—'ನಾವು ದೇವತೆಗಳು ಕಾಮಿಗಳು. ಭೋಗದ ಚಾಳಿಯುಳ್ಳವರು. 'ದ' ಎಂಬಕ್ಷರ ಹೇಳಿ ದಮನಮಾಡಿ ಎಂದು ಪ್ರಜಾಪತಿ ನಮಗೆ ಬೋಧಿಸಿದ.' ದಾನವರೆಂದರು—'ನಾವು ದಾನವರು ಕ್ರೋಧಿಗಳು, ದಯೆಯೇ ಇಲ್ಲದವರು. 'ದ' ಎಂಬಕ್ಷರ ಹೇಳಿ ದಯಾವಂತರಾಗಿ ಎಂದು ಪ್ರಜಾಪತಿ ನಮಗೆ ಉಪದೇಶಿಸಿದ.' ಮಾನವರೆಂದರು—'ಮಾನವರು ನಾವು ಲೋಭಿಗಳು. ಸಂಚಯದ ಬೆನ್ನು ಹತ್ತಿ ಹುಚ್ಚರಾದವರು. 'ದ' ಎಂಬಕ್ಷರ ಹೇಳಿ ದಾನಮಾಡಿ ಎಂದು ಪ್ರಜಾಪತಿ ಬೋಧಿಸಿದ ನಮಗೆ.' ಪ್ರಜಾಪತಿ ಎಲ್ಲರ ಅರ್ಥವನ್ನೂ ಸರಿ ಎಂದ. ಏಕೆಂದರೆ, ಎಲ್ಲರೂ ತಮ್ಮ ಸ್ವಾನುಭವದಿಂದ ಆ ಅರ್ಥ ಪಡೆದಿದ್ದರು. ಗೀತೆಯ ಪರಿಭಾಷೆಗೆ ಅರ್ಥ ಮಾಡುವಾಗ ಉಪನಿಷತ್ತಿನ ಈ ಕತೆ ನೆನಪಿರಲಿ.

### ೬. ಜೀವನ ಸಿದ್ಧಾಂತ : ದೇಹದ ಸ್ವಧರ್ಮಾಚರಣೆ

ಎರಡನೆ ಅಧ್ಯಾಯದಲ್ಲಿ ಜೀವನದ ಮೂರು ಮಹಾ ಸಿದ್ಧಾಂತಗಳನ್ನು ನಿರ್ದೇಶಿಸಲಾಗಿದೆ. ಒಂದು—ಆತ್ಮದ ಅಮರತೆ, ಅಖಂಡತೆ; ಎರಡು—ದೇಹದ ಕ್ಷುದ್ರತೆ; ಮೂರು—ಸ್ವಧರ್ಮದ ಅಬಾಧಿತತೆ. ಈ ಮೂರರಲ್ಲಿ ಸ್ವಧರ್ಮದ ಸಿದ್ಧಾಂತ ಕರ್ತವ್ಯರೂಪವಾದುದು; ಉಳಿದೆರಡೂ ಜ್ಞಾತವ್ಯ. ಸ್ವಧರ್ಮದ ಬಗ್ಗೆ ಮೊದಲೇ ಸ್ವಲ್ಪ ಹೇಳಿದ್ದೆ.

ಇದು ನಿಸರ್ಗಪ್ರಾಪ್ತವಾದುದು; ಹುಡುಕಿಕೊಂಡು ಹೋಗಬೇಕಾಗಿಲ್ಲ. ನಾನು ಮುಗಿಲಿನಿಂದ ಇಳಿಬೀಳಲಿಲ್ಲ. ಮಣ್ಣಿಂದ ಒಡಮೂಡಲಿಲ್ಲ. ನಾವು ಹುಟ್ಟುವ ಮೊದಲು ಸಮಾಜವಿತ್ತು. ತಂದೆತಾಯಿ ಇದ್ದರು. ನೆರೆಹೊರೆ ಯಿತ್ತು. ಇಂಥ ಪ್ರವಾಹದಲ್ಲಿ ನಾವು ಹುಟ್ಟುತ್ತೇವೆ. ನಾವು ಯಾರ ಹೊಟ್ಟೆಯಲ್ಲಿ ಹುಟ್ಟುತ್ತೇವೋ ಆ ತಾಯಿತಂದೆಗಳ ಸೇವೆಮಾಡುವ ಕರ್ತವ್ಯ ಹುಟ್ಟಿನಿಂದಲೇ ನಮ್ಮದು. ನಾವು ಹುಟ್ಟಿದ ಸಮಾಜದ ಸೇವೆ ಆ ಓಘ ದಿಂದಲೇ ನಮಗೆ ಬಂದದ್ದು. ನಮ್ಮ ಹುಟ್ಟಿನ ಜೊತೆಗೆ ಸ್ವಧರ್ಮವೂ ಹುಟ್ಟುತ್ತದೆ. ಹುಟ್ಟುವ ಮೊದಲೇ ನಮ್ಮ ಸ್ವಧರ್ಮ ರೂಪುಗೊಂಡು ಸಿದ್ಧವಾಗಿರುತ್ತದೆ ಎನ್ನಬಹುದು. ಏಕೆಂದರೆ, ನಮ್ಮ ಹುಟ್ಟಿಗೆ ಅದೇ ಕಾರಣ. ಅದನ್ನು ಪೂರ್ಣಗೊಳಿಸಲಿಕ್ಕೇ ನಮ್ಮ ಹುಟ್ಟು. ಸ್ವಧರ್ಮ ಹೆಂಡತಿಯಂತೆ ಎಂದು ಕೆಲವರು ಹೋಲಿಸುತ್ತಾರೆ. ಹೆಂಡತಿಯ ಸಂಬಂಧ ಅವಿಚ್ಛೇದ್ಯವಿದ್ದಂತೆ ಸ್ವಧರ್ಮವೂ ಅವಿಚ್ಛೇದ್ಯವೆಂದು ಹೇಳುತ್ತಾರೆ. ಈ ಉಪಮಾನ ಗೌಣವೆಂದು ನನಗನಿಸುತ್ತದೆ. ಸ್ವಧರ್ಮ ತಾಯಿಯಂತೆ ಎಂದೇನು. ಈ ಜನ್ಮದಲ್ಲಿ ಇಂಥ ತಾಯಿ ಬೇಕು ಎಂದು ಆರಿಸಲುಂಟೆ ನನಗೆ? ಅದೆಲ್ಲವೂ ಮೊದಲೇ ಏರ್ಪಾಡಾಗಿದೆ. ಆ ಏರ್ಪಾಡು ಹೇಗೇ ಇರಲಿ. ನಾನದನ್ನು ಮುರಿಯಲಾರೆ. ಸ್ವಧರ್ಮದ್ದೂ ಇದೇ ಬಗೆ. ಸ್ವಧರ್ಮ ವಿನಾ ಬೇರಾವ ಆಶ್ರಯವೂ ಲೋಕದಲ್ಲಿ ನಮಗಿಲ್ಲ. ಸ್ವಧರ್ಮ ವನ್ನು ತಪ್ಪಿಸುವುದೆಂದರೆ ತನ್ನನ್ನೇ ಕಳೆದುಕೊಂಡಂತೆ. ಆತ್ಮಘಾತಕತನ. ಸ್ವಧರ್ಮದ ಆಸರೆಯಲ್ಲೆ ನಾವು ಮುಂಬರಿಯಲು ಸಾಧ್ಯ. ಅದರಿಂದಲೇ ಅದನ್ನು ಯಾವಾಗಲೂ ಯಾರೂ ಬಿಡಬಾರದು. ಇದು ಒಂದು ಜೀವನದ ಮೂಲ ಸೂತ್ರ.

ಸ್ವಧರ್ಮ ಎಷ್ಟು ಸಹಜಪ್ರಾಪ್ತವೆಂದರೆ, ಸಹಜವಾಗಿಯೇ ಮನುಷ್ಯ ಅದನ್ನು ನಡೆಸುವಂತೆ ಇದೆ. ಆದರೆ ಅನೇಕ ಬಗೆಯ ಮೋಹಗಳಿಂದ ಹಾಗೆ ಆಗುವುದಿಲ್ಲ; ಬಹಳ ಕಷ್ಟವಾಗುತ್ತದೆ. ಅದರಲ್ಲಿ ವಿಷ ಬೆರೆತು ಕೊಂಡುಬಿಡುತ್ತದೆ. ಸ್ವಧರ್ಮದ ಹಾದಿಯಲ್ಲಿ ಮುಳ್ಳು ಚೆಲ್ಲುವ ಮೋಹದ ರೂಪ ಅಸಂಖ್ಯ. ಆ ರೂಪರಾಶಿಯನ್ನೆಲ್ಲ ಪರಿಶೀಲಿಸಿದರೆ ಮುಖ್ಯವಾದ ಒಂದು ಅಂಶ ಕಂಡುಬರುತ್ತದೆ. ಸಂಕುಚಿತ ದೇಹಬುದ್ಧಿ; ನಾನು ನನ್ನ

ಬಳಗ ಇಷ್ಟೇ ನನ್ನ ಲೋಕ; ಉಳಿದವರೆಲ್ಲ ಹಗೆ ಎಂಬ ಭೇದಬುದ್ಧಿಗೆ ಇದು ಬೀಜ ನಾನು ನನ್ನದು ಎಂಬುವನು ತನ್ನ ಶರೀರವನ್ನು ಮಾತ್ರ ನೋಡುತ್ತಾನೆ. ದೇಹ, ಬುದ್ಧಿ ಈ ಇಬ್ಬಗೆಯ ವೇಚಿಗೆ ಸಿಕ್ಕಿ ಪರಿಪರಿಯ ಕೂಪಗಳನ್ನು ಮಾಡಿಕೊಳ್ಳುತ್ತೇವೆ. ಬಹುಶಃ ಎಲ್ಲರೂ ಇದನ್ನೇ ಮಾಡುತ್ತಿರುತ್ತಾರೆ. ಕೆಲವರದು ಸಣ್ಣ ಕೂಪ, ಕೆಲವರದು ದೊಡ್ಡದು. ಅಂತೂ ಕೂಪ. ಈ ಮೈಯ ಚರ್ಮದಷ್ಟೇ ಅದರ ಆಳ. ಇಷ್ಟೇ. ಕೆಲವರು ಕುಟುಂಬಾಭಿಮಾನದ ಕೂಪ ಮಾಡಿಕೊಂಡರೆ ಕೆಲವರು ದೇಶಾಭಿಮಾನದ್ದು. ಬ್ರಾಹ್ಮಣ–ಬ್ರಾಹ್ಮಣೇತರ, ಹಿಂದೂ–ಮುಸಲ್ಮಾನ, ಒಂದಲ್ಲ ಎರಡಲ್ಲ ಕೊನೆಯಿಲ್ಲದ ವಿಭೇದ. ಎತ್ತ ನೋಡಿದರತ್ತ ಅದುವೇ ಅದು. ಜೈಲಿನಲ್ಲೂ ರಾಜಕೀಯ ಕೈದಿ, ಇತರ ಕೈದಿ ಎಂಬ ವಿಭಾಗ. ಈ ಭೇದಗಳಿಲ್ಲದೆ ಬದುಕುವುದೇ ಕಷ್ಟ. ಆದರೆ ಇದರ ಪರಿಣಾಮವೋ? ಒಂದೇ. ಹೀನ ವಿಕಾರದ ಪ್ರಾಣಿ, ಸ್ವಧರ್ಮರೂಪ ಆರೋಗ್ಯದ ನಾಶ.

## ೭. ಜೀವನ ಸಿದ್ಧಾಂತ: ದೇಹಾತೀತ ಆತ್ಮದ ಭಾಸ

ಇಂಥ ಪ್ರಸಂಗದಲ್ಲಿ ಸ್ವಧರ್ಮನಿಷ್ಠೆಯೊಂದೇ ಸಾಲದು. ಅದಕ್ಕಾಗಿ ಉಳಿದೆರಡು ಸೂತ್ರಗಳನ್ನೂ ಲಕ್ಷ್ಯದಲ್ಲಿಡಬೇಕು. ನಾನು ಈ ಸಾವುಗುಳಿ ಮೈಯಲ್ಲ; ಈ ಮೈ ಕೇವಲ ಮೇಲಿನ ಹೊದಿಕೆ: ಇದು ಒಂದು ಸಿದ್ಧಾಂತ. ನಾನು ಎಂದಿಗೂ ಸಾಯದ ಅಖಂಡ, ವ್ಯಾಪಕ ಆತ್ಮ ಇನ್ನೊಂದು. ಇವೆರಡೂ ಸೇರಿ ಒಂದು ಪೂರ್ಣ ತತ್ವಜ್ಞಾನ.

ಈ ತತ್ವಜ್ಞಾನ ಗೀತೆಗೆ ಎಷ್ಟು ಅಗತ್ಯವೆನಿಸಿದೆಯೆಂದರೆ, ಮೊದಲು ಈ ತತ್ವವನ್ನು ಆವಾಹನೆಮಾಡಿ ತರುವಾಯ ಸ್ವಧರ್ಮದ ಅವತಾರವನ್ನು ಮಾಡಿಸುತ್ತದೆ. ತತ್ವಜ್ಞಾನದ ಈ ಶ್ಲೋಕ ಮೊದಲಿಗೇ ಏಕೆ ಎನ್ನುತ್ತಾರೆ ಕೆಲವರು. ಗೀತೆಯಲ್ಲಿ ಸ್ಥಾನಪಲ್ಲಟಮಾಡಲಾರದ ಶ್ಲೋಕ ಯಾವುದಾದರೂ ಇದ್ದರೆ ಈ ಶ್ಲೋಕವೇ ಅನಿಸುತ್ತದೆ.

ಇಷ್ಟು ತತ್ವಜ್ಞಾನ ಮನಸ್ಸಿನಲ್ಲಿ ನೆಲೆಯೂರಿದರೆ ಸ್ವಧರ್ಮ ಸ್ವಲ್ಪವೂ ಕಷ್ಟವಾಗಲಿಕ್ಕಿಲ್ಲ. ಅಷ್ಟೇ ಅಲ್ಲ. ಸ್ವಧರ್ಮವನ್ನು ಬಿಟ್ಟು ಬೇರೇನಾದರೂ ಮಾಡಲು ಕಷ್ಟವಾದೀತು. ಆತ್ಮತತ್ವದ ಅಖಂಡತೆ, ದೇಹದ ಕ್ಷುದ್ರತೆ

ಗಳನ್ನು ಅರಿಯುವುದು ಕಷ್ಟವೇನಲ್ಲ. ಏಕೆಂದರೆ ಇವೆರಡೂ ಸತ್ಯ. ಆದರೆ ಆ ಬಗ್ಗೆ ವಿಚಾರ ಮಾಡಬೇಕು. ಬಾರಿಬಾರಿಗೂ ಅದನ್ನು ಮನದಲ್ಲಿ ಮೆಲಕು ಹಾಕಬೇಕು. ಮೈಯ ಮಹತ್ವವನ್ನು ತಗ್ಗಿಸಿ ಆತ್ಮದ ಮಹತ್ವ ವನ್ನು ಹೆಚ್ಚಿಸುವ ಈ ಕಲೆಯನ್ನು ನಾವು ಕಲಿಯಬೇಕು. ಈ ಮೈ ಗಳಿಗೆ ಗಳಿಗೆಗೆ ಬದಲಾಗುತ್ತಲಿದೆ. ಬಾಲ್ಯ, ತಾರುಣ್ಯ, ವಾರ್ಧಿಕ್ಯ, ಈ ಚಕ್ರ ಎಲ್ಲರಿಗೂ ಅನುಭವವುಂಟು. ಆಧುನಿಕ ಶಾಸ್ತ್ರದ ಪ್ರಕಾರ ಏಳು ವರ್ಷಕ್ಕೊಮ್ಮೆ ಶರೀರ ಬದಲಾಗುತ್ತದೆ. ಹಳೆಯ ರಕ್ತ ಒಂದು ತೊಟ್ಟೂ ಇರದು. ಹನ್ನೆರಡು ವರ್ಷಕ್ಕೆ ಹಳೆಯ ಮೈ ಸತ್ತುಹೋಯಿತು ಎಂದು ಭಾವಿಸುತ್ತಿದ್ದರು ನಮ್ಮ ಹಿರಿಯರು. ಅದಕ್ಕೇ ಪ್ರಾಯಶ್ಚಿತ್ತ, ತಪಶ್ಚರ್ಯೆ ಅಧ್ಯಯನಗಳನ್ನು ೧೨ ವರ್ಷ ಪರ್ಯಂತ ವಿಧಿಸುತ್ತಿದ್ದರು. ಅನೇಕ ವರ್ಷದನಂತರ ಮಗನನ್ನೇ ತಾಯಿ ಗುರುತಿಸಲಾರದಾದಳೆಂಬುದನ್ನು ನಾವು ಕೇಳಿದೇವೆ. ಹೀಗೆ ಪ್ರತಿಕ್ಷಣವೂ ಬದಲಿಸುತ್ತ ಪ್ರತಿಕ್ಷಣವೂ ಸಾಯುತ್ತ ಇರುವ ಮೈಯೇ ನಿನ್ನ ರೂಪು? ಹಗಲೂ ಇರುಳೂ ಯಾವುದ ರಲ್ಲಿ ಮಲಮೂತ್ರಗಳ ಚರಂಡಿ ಹರಿಯುತ್ತಿದೆಯೋ, ನಿನ್ನಂಥ ಗಟ್ಟಿಗ ತೊಳೆ ತೊಳೆದರೂ ಯಾವುದರ ಅಶುಚಿ ಹೋಗದಿದೆಯೋ, ಅದು ನೀನೇ? ಅದು ಅಸ್ವಚ್ಛ. ನೀನು ಅದನ್ನು ಸ್ವಚ್ಛಮಾಡುವವನು. ಅದು ರೋಗಿ, ನೀನು ಮದ್ದು ಕೊಡುವವನು. ಅದು ಮೂರೂವರೆ ಮೊಳದಗಲ ನೆಲದಲ್ಲಿ ಬಿದ್ದಿದ್ದರೆ ನೀನೋ ತ್ರಿಭುವನ ವಿಹಾರಿ. ಅದು ನಿತ್ಯಪರಿವರ್ತನ ಶೀಲ. ನೀನು ಆ ಪರಿವರ್ತನೆಯನ್ನು ನೋಡುವವನು. ಅದು ಸಾಯುವ ಸಾಮಗ್ರಿ, ನೀನು ಅದರ ಸಾವಿನ ವ್ಯವಸ್ಥಾಪಕ. ನಿನಗೂ ಅದಕ್ಕೂ ಇರುವ ಭೇದ ಇಷ್ಟು ಸ್ಪಷ್ಟವಾಗಿರಲು ನೀನು ಸಂಕುಚಿತ ಹೇಗಾದೆ? ನಿನಗೂ ಮೈಗೂ ಸಂಬಂಧ ಎಂದರೇನು, ಮೈ ಸತ್ತರೆ ಅಳುವುದೇನು? ಭಗವಂತ ಕೇಳುತ್ತಾನೆ: 'ದೇಹ ನಾಶವಾದರೆ ಅಳಬೇಕೆ?'

ದೇಹ ಬಟ್ಟೆಯ ಹಾಗೆ ಇದೆ. ಹಳೆಯದು ಹರಿದರೆ ಹೊಸ ಬಟ್ಟೆ ತೆಗೆದುಕೊಳ್ಳುತ್ತೇವೆ. ಒಂದೇ ಒಂದು ದೇಹಕ್ಕೇ ಕಡೆತನಕ ಆತ್ಮ ಅಂಟಿ ಕೊಂಡುಬಿಟ್ಟಿದ್ದರೆ ಆತ್ಮದ ಬಾಳೇ ಸಾಗುತ್ತಿರಲಿಲ್ಲ. ಎಲ್ಲಾ ವಿಕಾಸವೂ ನಿಲ್ಲುತ್ತಿತ್ತು. ಆನಂದವೇ ಇಲ್ಲದಾಗುತ್ತಿತ್ತು. ಜ್ಞಾನದ ಹೊಳೆ ಬತ್ತಿ

ಹೋಗುತ್ತಿತ್ತು. ಎಂತಲೇ ದೇಹದ ನಾಶ ಶೋಚನೀಯವಲ್ಲ. ಆತ್ಮದ ನಾಶವಾಗಿದ್ದರೆ ಬಹಳ ಶೋಚನೀಯವಾಗುತ್ತಿತ್ತು. ಆದರೆ ನಮ್ಮ ಪುಣ್ಯ, ಆತ್ಮ ಅವಿನಾಶಿ. ಆತ್ಮ ಅಖಂಡವಾಗಿ ಹರಿಯುತ್ತಿರುವ ಹೊಳೆ. ಅದರಲ್ಲಿ ಎಷ್ಟೋ ವ್ಯೆ ತೇಲಿ ಬರುತ್ತವೆ, ಹೋಗುತ್ತವೆ. ಎಂತಲೇ ವ್ಯೆಯ ಮಲಕು–ಕಲಕಿನಲ್ಲಿ ಸಿಕ್ಕಿ ಅಳುವುದಾಗಲಿ, ಇದು ನನ್ನದು ಅದು ಹೆರವರದು ಎಂದು ತುಂಡು ಮಾಡಿಕೊಳ್ಳುವುದಾಗಲಿ ಶುದ್ಧ ತಪ್ಪು. ಬ್ರಹ್ಮಾಂಡ ಅಂದವಾಗಿ ನೇಯ್ದ ಸೊಗಸಾದ ಬಟ್ಟೆಯಂತೆ. ಚಿಕ್ಕಮಕ್ಕಳು ಕತ್ತರಿ ಹಿಡಿದು ಬಟ್ಟೆಯನ್ನು ಕತ್ತರಿಸುವಂತೆ ವ್ಯೆಯೆಂಬ ಕತ್ತರಿ ಹಿಡಿದು ವಿಶ್ವಾತ್ಮವನ್ನು ತುಂಡುತುಂಡಾಗಿ ಕತ್ತರಿಸುವುದು ಎಂಥ ಹುಡುಗತನ? ಎಂಥ ಹಿಂಸೆ?

ಬ್ರಹ್ಮವಿದ್ಯೆಗೆ ಜನುಮಕೊಟ್ಟ ಭರತಭೂಮಿಯಲ್ಲೆ ಬರೀ ಹಿರಿದು–ಕಿರಿದು ಬಣ್ಣ–ಜಾತಿ ಭೇದಗಳ ಗುಲ್ಲು ಕಾಣುತ್ತಿದೆಯಲ್ಲ, ಎಂಥ ದುಃಖದ ಸಂಗತಿ! ಸಾವಿಗೆ ಇಲ್ಲಿರುವಷ್ಟು ಅಂಜಿಕೆ ಎಲ್ಲೂ ಕಾಣಲಿಕ್ಕಿಲ್ಲ. ಇದೆಲ್ಲ ಬಹು ದೀರ್ಘಕಾಲದ ಪರಾಧೀನತೆಯ ಫಲ. ನಿಸ್ಸಂದೇಹವಾಗಿ. ಆದರೆ ಪರಾಧೀನತೆಗೆ ಇದೂ ಒಂದು ಕಾರಣವೆಂಬುದನ್ನು ಮರೆಯಲಾಗದು.

ನಮಗೆ ಸಾವಿನ ಹೆಸರು ಕೂಡ ಸೈರಿಸದ ಹಾಗೆ ಆಗಿದೆ. ಸಾವಿನ ಹೆಸರು ಹೇಳಿದರೆ ಅಮಂಗಲ ಎನಿಸಿದೆ.

ಎಲವೊ ಸಾವು ಎನ್ನಲಂಜುತೀ, ಸತ್ತರೆ ಬಿದ್ದುಬಿದ್ದು ಅಳುತೀ*

ಎಂದು ಜ್ಞಾನದೇವರು ದುಃಖದಿಂದ ಬರೆಯಬೇಕಾಯಿತು. ಯಾರಾದರೂ ಸತ್ತರೆ ಎಷ್ಟು ಅಳು? ಎಷ್ಟು ರಂಬಾಟ? ಅದೆಲ್ಲವೂ ಕರ್ತವ್ಯ ಎಂದು ನಾವು ತಿಳಿದಿದೇವೆ. ಕೂಲಿಕೊಟ್ಟು ಅಳಹುಚ್ಚುವವರೆಗೂ ಹೋಗಿದೇವೆ. ಸಾವು ಸಮೀಪಿಸಿದರೂ ರೋಗಿಗೆ ನಾವು ಅದನ್ನು ಹೇಳುವುದಿಲ್ಲ. ವೈದ್ಯರು ರೋಗಿ ಬದುಕುವುದಿಲ್ಲ ಎಂದು ಹೇಳಿದರೂ ನಾವು ಮಾತ್ರ ರೋಗಿಯನ್ನು ಭ್ರಾಂತಿಯಲ್ಲೆ ಇಡುತ್ತೇವೆ. ವೈದ್ಯರು ಇದನ್ನು ಸ್ಪಷ್ಟವಾಗಿ ಹೇಳರು; ಕಡೆತನಕ ಮದ್ದು ಕೊಡುತ್ತಲೇ ಇರುವುದನ್ನು ಬಿಡರು. ನಿಜ

* ಅಗಾ ಮರ ಹಾ ಬೋಲ ನ ಸಾಹತೀ! ಆಣಿ ಮೇಲಿಯಾ ತರೀ ರಡತೀ ||

ಹೇಳಿ ದೇವರ ಸ್ಮರಣೆಯ ದಾರಿಗೆ ರೋಗಿಯ ಮನಸ್ಸನ್ನು ತಿರುಗಿಸಿದರೆ ಎಷ್ಟು ಉಪಕಾರವಾದೀತು? ಆದರೆ ಇದರಿಂದ ಧಕ್ಕೆ ತಗಲಿದಂತಾಗಿ ಗಡಿಗೆ ಮೊದಲೇ ಒಡೆದರೆ? ಆಮೇಲೆ ಒಡೆವ ಗಡಿಗೆ ಮೊದಲೇ ಒಡೆದೀತು ಹೇಗೆ? ಒಂದುವೇಳೆ ಗಂಟೆ ಎರಡುಗಂಟೆಯ ತರುವಾಯ ಒಡೆಯಬೇಕಾದ ಗಡಿಗೆ ಮೊದಲೇ ಒಡೆದರೆ ತಾನೆ ಏನು? ಇದರ ಅರ್ಥ ನಾವು ಕಠೋರರರೂ ಪ್ರೇಮಶೂನ್ಯರೂ ಆಗಬೇಕೆಂದಲ್ಲ. ಆದರೆ ದೇಹಾಸಕ್ತಿ ಪ್ರೇಮವಲ್ಲ. ನೋಡಿದರೆ, ದೇಹಾಸಕ್ತಿ ಅಳಿಯದೆ ನಿಜವಾದ ಪ್ರೇಮ ಮೂಡುವುದೇ ಇಲ್ಲ.

ದೇಹಾಸಕ್ತಿ ಹೋದರೇನೇ ಈ ದೇಹವು ಸೇವೆಯ ಸಾಧನ ಎಂಬುದು ಅರಿವಾಗುತ್ತದೆ. ಆಗ ದೇಹಕ್ಕೆ ಸರಿಯಾದ ಪ್ರತಿಷ್ಠೆ ಸಿಕ್ಕೀತು. ಈಗ ದೇಹಪೂಜೆಯೇ ನಮಗೆ ಗುರಿಯಾಗಿದೆ. ಸ್ವಧರ್ಮಪಾಲನೆ ನಮ್ಮ ಗುರಿ ಎಂಬುದನ್ನು ಮರೆತಿದೇವೆ. ಸ್ವಧರ್ಮಾಚರಣೆಗಾಗಿ ಮೈಯನ್ನು ಕಾಪಾಡಬೇಕು; ಅದಕ್ಕೆ ತಿನ್ನಲೂ ಕುಡಿಯಲೂ ಕೊಡಬೇಕು. ಆದರೆ ನಾಲಿಗೆಯ ಚಪಲವನ್ನು ತೀರಿಸಬೇಕಾಗಿಲ್ಲ. ಬಡಿಸುವ ಸೌಟಿಗೆ ಶ್ರೀಖಂಡವೇನು ಚಟ್ನಿಯೇನು? ಎರಡೂ ಒಂದೇ. ನಾಲಿಗೆಗೆ ಹಾಗೆ ಆಗಬೇಕು. ನಾಲಿಗೆಗೆ ರಸಜ್ಞಾನವಿರಲಿ, ಅದರ ಸುಖದುಃಖ ಬೇಡ. ಶರೀರಕ್ಕೆ ಅದರ ಬಾಡಿಗೆಯನ್ನದಕ್ಕೆ ಕೊಟ್ಟರೆ ಸಾಕು. ರಾಟೆಯಿಂದ ನೂಲು ತೆಗೆಯಬೇಕಾಗಿದೆ ಎಂದು ಅದಕ್ಕೆ ಎಣ್ಣೆ ಹಾಕಬೇಕಾಗುತ್ತದೆ. ಹಾಗೇ ಮೈಯಿಂದ ಕೆಲಸ ಮಾಡಿಸಿಕೊಳ್ಳಬೇಕಾಗಿದೆ ಎಂದು ಅದಕ್ಕೆ ಉರವಲು ಹಾಕಬೇಕು. ಹೀಗೆ ದೇಹವನ್ನು ಬಳಸಿದರೆ ಮೂಲತಃ ಅದು ಕ್ಷುದ್ರವಿದ್ದರೂ ಅದಕ್ಕೆ ಬೆಲೆ ಬರುತ್ತದೆ; ಅದಕ್ಕೆ ಪ್ರತಿಷ್ಠೆ ಲಭಿಸುತ್ತದೆ.

ದೇಹವನ್ನು ಉಪಕರಣವೆಂದು ಬಳಸದೆ ನಾವು ಮೈಯನ್ನು ದೊಡ್ಡದು ಮಾಡಿ ಅದರಲ್ಲಿ ಮುಳುಗಿ ಆತ್ಮವನ್ನು ಕುಗ್ಗಿಸುತ್ತೇವೆ. ಅದರಿಂದ ಮೊದಲೇ ಕ್ಷುದ್ರವಾದ ಮೈ ಮತ್ತಷ್ಟು ಕ್ಷುದ್ರವಾಗುತ್ತದೆ. ಅಂತೇ ಸಂತರು ನಿರ್ಧಾರವಾಗಿ ಹೇಳಿದಾರೆ :

> ದೇಹ ದೇಹ ಸಂಬಂಧ ನಿಂದ್ಯ
> ಶ್ವಾನಸೂಕರ ಇವು ವಂದ್ಯ*

---

* ದೇಹ ಆಣಿ ದೇಹಸಂಬಂಧೇ ನಿಂದಾವೀ । ಇತರೇಂ ವಂದಾವೀ ಶ್ವಾನಸೂಕರೇ ॥

2

ಮೈಗೆ ಸಂಬಂಧಿಸಿದುದನ್ನು ಮೂರುಹೊತ್ತೂ ಪೂಜಿಸಲೇಕೆ? ಉಳಿದು ದನ್ನು ಗುರುತಿಸಲು ಕಲಿ. ಹೀಗೆ ಸಾಧುಗಳು ವ್ಯಾಪಕವಾಗುವ ಬಗೆಯನ್ನು ಹೇಳುತ್ತಾರೆ. ನಮ್ಮ ಆಪ್ತೇಷ್ಟರ, ಬಂಧುಮಿತ್ರರ ವಿನಾ ಉಳಿದವರ ಬಳಿಗೆ ನಮ್ಮ ಆತ್ಮವನ್ನು ತೆಗೆದುಕೊಂಡು ಹೋಗುತ್ತೇವೆಯೆ? ‘ಜೀವದಲ್ಲಿ ಜೀವ ಬೆರೆಸು, ಆತ್ಮದೊಂದಿಗೆ ಆತ್ಮವ ಕಲೆಸು’* ಎಂದು ನಾವು ನಡೆಯು ತ್ತೇವೆಯೆ? ನಮ್ಮ ಆತ್ಮಹಂಸಕ್ಕೆ ಈ ಪಂಜರದ ಹೊರಗಣ ಗಾಳಿಯನ್ನು ತೋರಿಸುತ್ತೇವೆಯೇ? ನಾನು ನನ್ನದು ಎಂಬ ಗೆರೆ ದಾಟಿ ಇವೊತ್ತು ಹೊಸದಾಗಿ ಹತ್ತು ಜನರ ಗುರುತು ಮಾಡಿಕೊಂಡೆ; ನಾಳೆ ಹದಿನೈದು; ನಾಡಿದ್ದು ಐವತ್ತು. ಹೀಗೆ ಇಡೀ ವಿಶ್ವವನ್ನೇ ನನ್ನದಾಗಿ ಮಾಡಿ ಕೊಂಡೇನು ಎಂಬ ಭಾವನೆ ಬಂದೀತೇನು ನಮಗೆ? ಸೆರೆಯಲ್ಲಿದ್ದಾಗ ನಮ್ಮ ಮನೆಯವರಿಗೆ ಕಾಗದ ಬರೆಯುತ್ತೇವೆ. ಏನದರಲ್ಲಿ ವಿಶೇಷ? ಸೆರೆಯಿಂದ ಬಿಡುಗಡೆಯಾದ ರಾಜಕೀಯ ಕೈದಿಗಲ್ಲದೆ ಕಳವುಮಾಡಿದ ಕೈದಿಗೆ ಪತ್ರ ಬರೆಯುತ್ತೇವೇನು?

ನಮ್ಮ ಆತ್ಮ ವ್ಯಾಪಕವಾಗಲು ಸದಾ ಚಡಪಡಿಸುತ್ತಿರುತ್ತದೆ. ಅದಕ್ಕೆ ಇಡೀ ಜಗತ್ತನ್ನೆ ಹಬ್ಬಿಕೊಳ್ಳಬೇಕೆಂಬ ಬಯಕೆಯಿರುತ್ತದೆ. ಆದರೆ ನಾವು ಅದನ್ನು ಕಟ್ಟಿಹಾಕುತ್ತೇವೆ. ಸೆರೆ ಹಾಕಿದೇವೆ. ನಮಗೆ ಅದರ ನೆನಪೇ ಆಗದು. ಮುಂಜಾನೆಯಿಂದ ಸಂಜೆಯತನಕ ದೇಹಸೇವೆಯೆ. ಈ ಮೈ ಎಷ್ಟು ಬಲಿಯಿತು, ಎಷ್ಟು ಸೊರಗಿತು ಎಂಬುದೇ ನಮ್ಮ ಚಿಂತೆ, ಬೇರಾವುದರಲ್ಲೂ ಆನಂದವಿಲ್ಲವೆಂಬಂತೆ. ಭೋಗದ ಆನಂದ, ರುಚಿಯ ಆನಂದ ಪಶುವಿಗೆ ಉಂಟು. ತ್ಯಾಗದಾನಂದವನ್ನು ರುಚಿಯ ನಿಗ್ರಹದಾನಂದವನ್ನು ತಿಳಿಯಬೇಡವೇನು? ನಾವು ಹಸಿವಿನಿಂದ ತಳಮಳಿಸು ತ್ತಿರುವಾಗ ನಮ್ಮ ಎಲೆಯನ್ನು ಹಸಿದ ಪರರಿಗೆ ನೀಡುವುದರಲ್ಲಿ ಏನು ಆನಂದವಿದೆಯೋ ಅನುಭವಿಸಿ ನೋಡು. ಅದರ ರುಚಿ ನೋಡಬಾರದೆ? ಮಗುವಿಗಾಗಿ ತಾಯಿ ತನ್ನನ್ನು ತೇದಾಗ ಆಕೆಗೆ ಈ ರುಚಿ ಸ್ವಲ್ಪ ಅನುಭವ ವಾಗುತ್ತದೆ. ನನ್ನದು ಎಂದು ಮನುಷ್ಯ ಗೆರೆ ಹಾಕಿಕೊಂಡಾಗಲೂ ಆತ್ಮವಿಕಾಸದ ರುಚಿ ಸವಿಯುವ ಉದ್ದೇಶ್ಯ ಅವನಿಗೆ ತಿಳಿಯದೆಯೆ

---

* ಜೀವ ಜೀವಾಂತ ಘಾಲಾವಾ। ಆತ್ಮಾ ಆತ್ಮ್ಯಾಂತ ಮಿಸಳಾವಾ ॥

ಅದರಲ್ಲಿಯೂ ಅಡಗಿರುತ್ತದೆ. ಅವನ ಮೈಯಲ್ಲಿ ಬಂಧಿತವಾದ ಆತ್ಮ ಸ್ವಲ್ಪಮಟ್ಟಿಗೆ ಕೆಲವು ಹೊತ್ತು ಹೊರಗೆ ಹರಿಯುತ್ತದೆ. ಹೊರಗೆ ಹರಿಯು ವುದು ಎಂದರೆ ಹೇಗೆ? ಸೆರೆಮನೆಯ ಕೋಣೆಯಲ್ಲಿರುವ ಕೈದಿಗಳು ಅಂಗಳಕ್ಕೆ ಬಂದಂತೆ. ಆದರೆ ಆತ್ಮದ ಕೆಲಸ ಇಲ್ಲಿಗೇ ಮುಗಿಯದು. ಆತ್ಮಕ್ಕೆ ಮುಕ್ತಾನಂದ ಬೇಕು.

ಸಾರಾಂಶ: ೧. ಅಧರ್ಮ ಪರಧರ್ಮಗಳು ಅಡ್ಡದಾರಿ. ಅವನ್ನು ಬಿಟ್ಟು, ಸಾಧಕರು ಸ್ವಧರ್ಮದ ಸಹಜ, ಸರಳಮಾರ್ಗವನ್ನು ಹಿಡಿಯಬೇಕು. ಸ್ವಧರ್ಮದ ಸೆರಗನ್ನು ಎಂದೂ ಬಿಡಬಾರದು. ೨. ದೇಹ ಕ್ಷಣಭಂಗುರ. ಇದನ್ನು ತಿಳಿದು ಸ್ವಧರ್ಮಕ್ಕಾಗಿ ಅದನ್ನು ಬಳಸಬೇಕು. ಸ್ವಧರ್ಮಕ್ಕಾಗಿ ಅದನ್ನು ಬಿಸುಡಲೂ ಬೇಕು. ೩. ಆತ್ಮ ಅಖಂಡ, ವ್ಯಾಪಕ. ಇದರ ಅರಿವನ್ನು ಸದಾ ಜಾಗೃತವಿಟ್ಟುಕೊಂಡು, ಮನಸ್ಸಿನಿಂದ ಸ್ವ-ಪರಭೇದವನ್ನು ಕಿತ್ತೊಗೆಯಬೇಕು. ಜೀವನದ ಈ ಮುಖ್ಯ ಸಿದ್ಧಾಂತವನ್ನು ಭಗವಂತ ಹೇಳಿದಾನೆ. ಇದನ್ನು ಆಚರಿಸುವ ಮನುಷ್ಯ ಒಂದಲ್ಲೊಂದು ದಿನ 'ನರದೇಹದಿಂದಲೇ ಸಚ್ಚಿದಾನಂದ ಪದವಿ' ಪಡೆದಾನು.

## ೮. ಎರಡನ್ನೂ ಮೇಳಗೂಡಿಸುವ ಯುಕ್ತಿ: ಫಲತ್ಯಾಗ

ಭಗವಂತ ಹೀಗೆ ಸಿದ್ಧಾಂತ ಹೇಳಿದುದೇನೋ ನಿಜ. ಆದರೆ ಹೇಳಿದ ಮಾತ್ರಕ್ಕೆ ಕೆಲಸವಾದಂತಾಯಿತೆ? ಗೀತೆಯ ಈ ಸಿದ್ಧಾಂತ ಹಿಂದೆಯೇ ಉಪನಿಷತ್ತು ಸ್ಮೃತಿಗಳಲ್ಲಿ ಬಂದಿತ್ತು. ಅದನ್ನೇ ಗೀತೆ ಮತ್ತೆ ಹೇಳಿದುದ ರಲ್ಲಿ ಅಪೂರ್ವತೆಯೇನಿಲ್ಲ. ಈ ಸಿದ್ಧಾಂತವನ್ನು ಆಚರಿಸುವುದು ಹೇಗೆ ಎಂಬುದನ್ನು ಹೇಳಿದುದೇ ಗೀತೆಯ ಅಪೂರ್ವತೆ. ಈ ಮಹಾ ಸಮಸ್ಯೆ ಯನ್ನು ಬಿಡಿಸುವುದರಲ್ಲೇ ಗೀತೆಯ ಕುಶಲತೆ!

ಬಾಳಿನ ಸಿದ್ಧಾಂತವನ್ನು ಆಚರಣೆಗೆ ತರುವ ಉಪಾಯ, ಕಲೆ— ಅದೇ ಯೋಗ. ಸಾಂಖ್ಯವೆಂದರೆ ಸಿದ್ಧಾಂತ, ಶಾಸ್ತ್ರ; ಯೋಗ ಎಂದರೆ ಕಲೆ. 'ಯೋಗಿ ಸಾಧಿಸಿದ ಜೀವನಕಲೆ'* ಎಂದು ಜ್ಞಾನದೇವರು ಹೇಳಿ ದಾರೆ. ಸಾಂಖ್ಯ — ಯೋಗ, ಶಾಸ್ತ್ರ — ಕಲೆ ಎರಡರಲ್ಲೂ ಗೀತೆ ಪರಿಪೂರ್ಣ.

---

* 'ಯೋಗಿಯಾಂ ಸಾಧಲೀ ಜೀವನಕಲಾ'.

ಶಾಸ್ತ್ರ—ಕಲೆ ಎರಡೂ ಸೇರಿದರೆ ಜೀವನಸೌಂದರ್ಯ ಅರಳುತ್ತದೆ. ಬರೀ ಶಾಸ್ತ್ರ ಗಾಳಿಗೋಪುರ. ಸಂಗೀತಶಾಸ್ತ್ರವನ್ನು ಅಭ್ಯಾಸಮಾಡಿದರೂ ಕಂಠದಿಂದ ಹಾಡುಹೇಳುವ ಕಲೆ ಬಾರದಿದ್ದರೆ ನಾದಬ್ರಹ್ಮದ ಸಿದ್ಧಿಯಾಗದು. ಅದಕ್ಕೇ ಭಗವಂತ ಶಾಸ್ತ್ರದ ಜೊತೆಗೆ ಅದರ ವಿನಿಯೋಗವನ್ನು ಅರಿಯುವ ಕಲೆಯನ್ನು ತಿಳಿಸಿದಾನೆ. ಇದಾವುದು ಈ ಮಹಾಕಲೆ? ದೇಹವನ್ನು ತುಚ್ಛವೆಂದು, ಆತ್ಮವನ್ನು ಅಮರ—ಅಖಂಡವೆಂದು ತಿಳಿದು ಸ್ವಧರ್ಮವನ್ನಾಚರಿಸುವ ಕಲೆ—ಇದಾವುದು?

ಕರ್ಮಮಾಡುವವನ ವೃತ್ತಿ ದ್ವಿಮುಖ. ನಾವು ಕರ್ಮಮಾಡಿದ ಮೇಲೆ ಅದರ ಫಲವನ್ನು ನಾವೇ ಸವಿಯಬೇಕು; ಅದು ನಮ್ಮ ಹಕ್ಕು ಎಂಬುದು ಒಂದು. ತದ್ವಿರುದ್ಧವಾಗಿ ನಮಗೆ ಫಲ ಸಿಗದಿದ್ದರೆ ನಾವು ಕರ್ಮವನ್ನೇ ಮಾಡುವುದಿಲ್ಲ—ಎಂಬುದು ಇನ್ನೊಂದು. ಗೀತೆ ಇವೆರಡನ್ನೂ ಬಿಟ್ಟು ಮೂರನೆಯ ವೃತ್ತಿಯನ್ನು ಹೇಳುತ್ತದೆ: 'ಕರ್ಮಮಾಡು; ಫಲದ ಹಕ್ಕನ್ನು ಬಿಡು' ಎನ್ನುತ್ತದೆ ಗೀತೆ. ಕರ್ಮಮಾಡಿದವನಿಗೆ ಫಲದ ಹಕ್ಕು ಇದ್ದೇ ಇದೆ. ನೀನದನ್ನು ನೀನಾಗಿ ಬಿಟ್ಟುಕೊಡು. ರಜೋಗುಣ ಹೇಳುತ್ತದೆ—'ತೆಗೆದುಕೊಳ್ಳುವುದಿದ್ದರೆ ಫಲ ಸಮೇತ ತೆಗೆದುಕೊಳ್ಳುತ್ತೇನೆ.' ತಮೋಗುಣ ಹೇಳುತ್ತದೆ—'ಬಿಡುವುದೇ ಇದ್ದರೆ ಕರ್ಮಸಮೇತ ಬಿಟ್ಟೇನು.' ಎರಡೂ ಅಣ್ಣ ತಮ್ಮ. ಎರಡನ್ನೂ ಮೀರಿ ಶುದ್ಧ ಸತ್ವಗುಣಿಯಾಗು. ಕರ್ಮಮಾಡಿ ಫಲವನ್ನು ಬಿಡು; ಫಲವನ್ನು ಬಿಟ್ಟು ಕರ್ಮಮಾಡು. ಮೊದಲಿಗಾಗಲಿ ಕಡೆಗಾಗಲಿ ಎಲ್ಲೂ ಫಲಾಶೆ ಮಾಡಬೇಡ.

ಫಲದಾಸೆ ಬಿಡೆಂದುದರ ಜೊತೆಗೆ ಕರ್ಮ ದಕ್ಷ, ಉತ್ಕೃಷ್ಟ ಆಗಬೇಕು ಎಂದು ಗೀತೆ ಅಪ್ಪಣೆಮಾಡುತ್ತದೆ. ಸಕಾಮಿಯ ಕರ್ಮಕ್ಕಿಂತ ನಿಷ್ಕಾಮಿಯ ಕರ್ಮ ಹೆಚ್ಚು ಒಳ್ಳೆಯದಾಗಬೇಕು. ಈ ಆಸೆ ಯೋಗ್ಯವಾದುದು. ಸಕಾಮಿಗೆ ಫಲಾಸಕ್ತಿಯಿಂದ ಅದರ ಕನಸು ಕಾಂಬುದರಲ್ಲಿ ಕಾಲ ನಷ್ಟ, ಶಕ್ತಿ ನಷ್ಟ ಸ್ವಲ್ಪಮಟ್ಟಿಗೆ ಆಗುತ್ತದೆ. ಫಲೇಚ್ಛೆಯಿಲ್ಲದವನಿಗೆ ಕರ್ಮಮಾಡಲಿಕ್ಕೆ ಪ್ರತಿಕ್ಷಣವೂ ಸಿಗುತ್ತದೆ. ಹೊಳೆಗೆ ಬಿಡುವೆಲ್ಲಿ? ಗಾಳಿಗೆ ತೆರವೆಲ್ಲಿ? ಸೂರ್ಯನಿಗೆ ಸದಾ ಬೆಳಗುವುದೊಂದೇ ಗೊತ್ತು. ಇದೇ ರೀತಿ ನಿಷ್ಕಾಮ ಕರ್ಮಿಗೆ ಸದಾ ಸೇವೆಮಾಡುವುದೊಂದೇ ಗೊತ್ತು. ಹೀಗೆ

ನಿರಂತರ ಕರ್ಮಶೀಲನಾದವನ ಕರ್ಮವಲ್ಲದೆ ಮತ್ತಾವ ಕರ್ಮ ಉತ್ಕೃಷ್ಟ ವಾದೀತು? ಚಿತ್ತದ ಸಮತೆ ದೊಡ್ಡ ಕುಶಲಗುಣ. ನಿಷ್ಕಾಮಪುರುಷನಿಗೆ ಅದು ಸ್ವಂತ ಸೊತ್ತು. ಒಂದುವೇಳೆ ಅವನು ಕೆಲವು ಹೊರಗಿನ ವ್ಯವಹಾರ ಗಳಿಗೆ ಕೈಹಾಕಿದರೂ ಸಮಚಿತ್ತ, ಹಸ್ತಕೌಶಲಗಳೆರಡೂ ಸೇರಿ ಕೆಲಸ ಹೆಚ್ಚು ಅಂದವಾದೀತೆಂಬುದು ಸ್ಪಷ್ಟ. ಸಕಾಮಿ ನಿಷ್ಕಾಮಿಗಳ ಕರ್ಮ ದೃಷ್ಟಿಯಲ್ಲಿರುವ ವ್ಯತ್ಯಾಸ ನಿಷ್ಕಾಮಿಗೇ ಹೆಚ್ಚು ಅನುಕೂಲ. ಸಕಾಮಿ ಸ್ವಾರ್ಥದೃಷ್ಟಿಯಿಂದ ಕರ್ಮವನ್ನು ನೋಡುತ್ತಾನೆ. ನನ್ನ ಕರ್ಮ, ನನ್ನದು ಫಲ ಎಂಬುದರಿಂದ ಕರ್ಮದಲ್ಲಿ ಸ್ವಲ್ಪ ಅಸಡ್ಡೆಯಾದರೂ ಅವನಿಗೆ ನೈತಿಕ ದೋಷ ತಿಳಿಯದು. ಬಹಳಾದರೆ ವ್ಯಾವಹಾರಿಕ ದೋಷ ಕಂಡೀತು. ನಿಷ್ಕಾಮಕರ್ಮಿಗೆ ತನ್ನ ಕರ್ಮದಲ್ಲಿ ನೈತಿಕ ಕರ್ತವ್ಯ ಬುದ್ಧಿ ಯಿರುವುದರಿಂದ ಅದರಲ್ಲಿ ಕಿಂಚಿತ್ತೂ ಊನವಿರಬಾರದೆಂದು ಜಾಗರೂಕ ನಾಗಿರುತ್ತಾನೆ. ಅಂತಲೇ ಅವನ ಕರ್ಮ ಹೆಚ್ಚು ನಿರ್ದೋಷವಾಗಿದ್ದೀತು. ಹೇಗೆ ನೋಡಿದರೂ ಫಲತ್ಯಾಗ ಅತ್ಯಂತ ಯಶಸ್ವಿಯಾದ ಕುಶಲ ತತ್ತ್ವ ಎಂಬುದು ಸಿದ್ಧವಾಗುತ್ತದೆ. ಅದರಿಂದಲೇ ಫಲತ್ಯಾಗವನ್ನು ಯೋಗ ಅಥವಾ ಜೀವನಕಲೆ ಎನ್ನುವುದು.

ನಿಷ್ಕಾಮಕರ್ಮದ ಮಾತನ್ನು ಬದಿಗೆ ಸರಿಸಿದರೂ ಪ್ರತ್ಯಕ್ಷವಾಗಿ ಕರ್ಮದಲ್ಲಿ ಇರುವ ಆನಂದ ಅದರ ಫಲದಲ್ಲಿ ಇಲ್ಲ. ಸ್ವಕರ್ಮ ಮಾಡುವಾಗಿರುವ ತನ್ಮಯತೆ ಒಂದು ಆನಂದದ ಬುಗ್ಗೆ. ಚಿತ್ರಕಾರನಿಗೆ ನೀನು ಚಿತ್ರ ತೆಗೆಯಬೇಡ, ಸುಮ್ಮನಿದ್ದರೆ ಬೇಕಾದಷ್ಟು ಹಣ ಕೊಡುತ್ತೇವೆ ಎನ್ನಿ; ಅವನು ಒಪ್ಪಲಾರ. ಬೇಸಾಯಗಾರನಿಗೆ ನೀನು ಉಳಬೇಡ, ಬಿತ್ತಬೇಡ, ದನ ಕಾಯಬೇಡ, ಕಪಿಲೆ ಹೊಡೆಯಬೇಡ, ನಿನಗೆ ಬೇಕಾದಷ್ಟು ಕಾಳು ಕೊಡುತ್ತೇವೆ ಎನ್ನಿ; ಅವನು ನಿಜವಾದ ಒಕ್ಕಲಿಗ ನಾದರೆ ಅವನಿಗೆ ಅದು ರುಚಿಸಲಿಕ್ಕಿಲ್ಲ. ಒಕ್ಕಲಿಗ ಬೆಳಗ್ಗೆ ಎದ್ದು ಹೊಲಕ್ಕೆ ಹೋಗುತ್ತಾನೆ. ಸೂರ್ಯನಾರಾಯಣ ಅವನನ್ನು ಸ್ವಾಗತಿಸುತ್ತಾನೆ. ಹಕ್ಕಿಗಳು ಅವನಿಗಾಗಿ ಹಾಡು ಹಾಡುತ್ತವೆ. ದನಕರು ಅವನನ್ನು ಬಳಸಿ ನಿಲ್ಲುತ್ತವೆ. ಅವನು ಕಾತರದಿಂದ ಅವುಗಳ ಮೈ ನೀವುತ್ತಾನೆ. ತಾನು ನೆಟ್ಟ ಗಿಡ ಬಳ್ಳಿಯನ್ನು ನೋಡುತ್ತಾನೆ. ಇದೆಲ್ಲ ಕೆಲಸದಲ್ಲಿ ಒಂದು ಬಗೆಯ

ಸಾತ್ವಿಕಾನಂದವಿದೆ. ಆ ಆನಂದವೇ ಆ ಕರ್ಮದ ಮುಖ್ಯ ನಿಜಫಲ. ಹಾಗೆ ಲೆಕ್ಕ ಹಾಕಿದರೆ ಅದರ ಬಾಹ್ಯಫಲ ಬಹಳ ಚಿಲ್ಲರೆ, ಗೌಣ.

ಕರ್ಮಫಲದಿಂದ ಮನುಷ್ಯನ ಕಣ್ಣನ್ನು ಬೇರೆ ನೆಳೆದಾಗಲೇ ಗೀತೆ ಈ ಯುಕ್ತಿಯಿಂದ ಕರ್ಮದಲ್ಲಿನ ತನ್ಮಯತೆಯನ್ನು ಶತಗುಣವಾಗಿ ಮಾಡುತ್ತದೆ. ಫಲಾಸಕ್ತಿಯಿಲ್ಲದವನ ಕರ್ಮದ ತನ್ಮಯತೆ ಸಮಾಧಿಯ ಮಟ್ಟದ್ದು. ಅದರಿಂದ ಅದರ ಆನಂದ ಉಳಿದುದಕ್ಕಿಂತ ಶತಗುಣವಾಗುತ್ತದೆ. ವಿಚಾರಿಸಿ ನೋಡಿದರೆ ನಿಷ್ಕಾಮಕರ್ಮವೇ ಒಂದು ಮಹಾಫಲ. 'ಮರಕ್ಕೆ ಹಣ್ಣುಂಟು, ಹಣ್ಣಿಗೇನು ಫಲವುಂಟು' ಎಂದು ಸರಿಯಾಗಿ ಕೇಳಿದಾರೆ ಜ್ಞಾನದೇವರು. ಈ ದೇಹವೃಕ್ಷಕ್ಕೆ ನಿಷ್ಕಾಮ ಸ್ವಧರ್ಮಾಚರಣೆಯಂಥ ಚಲೋ ಹಣ್ಣು ದೊರೆತಮೇಲೆ ಇನ್ನೇನು ಬೇಕು? ಏಕೆ ಬಯಸಬೇಕು? ಒಕ್ಕಲಿಗ ಹೊಲದಲ್ಲಿ ಗೋಧಿ ಬೆಳೆದು ಅದನ್ನು ಮಾರಿ ಜೋಳದ ರೊಟ್ಟಿಯನ್ನು ಏಕೆ ತಿಂದಾನು? ಬಾಳೆಯ ತೋಟ ಬೆಳೆಸಿ ಬಾಳೆಹಣ್ಣು ಮಾರಿ ಮೆಣಸಿನಕಾಯಿ ತಿಂದವರುಂಟೆ? ಬಾಳೆಯ ಹಣ್ಣನ್ನೇ ತಿನ್ನಯ್ಯಾ, ತಿನ್ನು. ಆದರೆ ಲೋಕಕ್ಕೆ ಇದು ಒಪ್ಪಿಗೆಯಿಲ್ಲ. ಬಾಳೆಯಹಣ್ಣನ್ನು ತಿನ್ನುವ ಭಾಗ್ಯವಿದ್ದೂ ಲೋಕ ಮೆಣಸಿನಕಾಯಿ ತಿನ್ನಬಯಸುತ್ತದೆ. ಹಾಗೆ ಮಾಡಬೇಡಿ ಎಂದು ಗೀತೆ ಹೇಳುತ್ತದೆ. ಕರ್ಮವನ್ನೇ ತಿನ್ನು, ಕರ್ಮವನ್ನೇ ಕುಡಿ, ಕರ್ಮವನ್ನು ಅರಗಿಸಿಕೋ. ಕರ್ಮಮಾಡುವುದರಲ್ಲೆ ಎಲ್ಲವೂ ಬಂತು. ಹುಡುಗ ಆಟದ ಆನಂದಕ್ಕಾಗಿ ಆಡುತ್ತಾನೆ. ಅದರಿಂದ ವ್ಯಾಯಾಮದ ಫಲ ಅವನಿಗೆ ಸಹಜವಾಗಿ ಸಿಕ್ಕುತ್ತದೆ. ಅವನಿಗೆ ಆ ಫಲದ ಕಡೆ ಗಮನವಿಲ್ಲ. ಅವನ ಆನಂದವೆಲ್ಲಾ ಆ ಆಟದಲ್ಲೇ!

## ೯. ಫಲತ್ಯಾಗದ ಎರಡು ಉದಾಹರಣೆ

ಸಾಧುಸಂತರು ತಮ್ಮ ಬಾಳಿನಲ್ಲಿ ಇದನ್ನು ತೋರಿಸಿದಾರೆ. ತುಕಾರಾಮರ ಭಕ್ತಿಯನ್ನು ಕಂಡು ಶಿವಾಜಿಗೆ ಅವರಲ್ಲಿ ಬಹಳ ಆದರ ಹುಟ್ಟಿತು. ಒಂದು ಸಲ ಅವರ ಮನೆಗೆ ಪಲ್ಲಕ್ಕಿ ಮುಂತಾದುದನ್ನು ಕಳಿಸಿ ಸ್ವಾಗತಿಸಿದ. ಈ ಸಮಾರಂಭವನ್ನು ನೋಡಿ ತುಕಾರಾಮರಿಗೆ ಬಲು ನೋವಾಯಿತು. ತಮ್ಮ ಮನಸ್ಸಿನಲ್ಲಿ ಅವರು ಯೋಚಿಸಿದರು: 'ಇದೇಯೆ ನನ್ನ ಭಕ್ತಿಗೆ

ಫಲ? ಇದಕ್ಕಾಗಿಯೇ ನಾನು ದೇವರಲ್ಲಿ ಭಕ್ತಿಯಿಟ್ಟದ್ದು?' ಮಾನ ಮರ್ಯಾದೆಯ ಫಲವನ್ನು ಕೈಯಲ್ಲಿಟ್ಟು ದೇವರು ತನ್ನನ್ನು ದೂರಕ್ಕೆ ನೂಕುತ್ತಿದಾನೆಂದು ಅವರಿಗೆ ಅನಿಸಿತು.*

ನೂಕುವೆಯಾ ಅರಿತು ಅಂತರಂಗ<br>
ನೀನೆಂಥ ಖೋಡಿ ಪಾಂಡುರಂಗ ।

'ದೇವರೆ, ನಿನ್ನೀ ಚೆಲ್ಲಾಟ ಸರಿಯಲ್ಲ. ಈ ಕಿರುಕುಳ ಕೊಟ್ಟು ನನ್ನನ್ನು ಸರಿಸ ಬಯಸುತ್ತೀಯಾ? ಈ ಪೀಡೆಯೂ ಒಮ್ಮೆ ಕಳೆದು ಹೋಗಲಿ ಎನ್ನುತ್ತೀಯೇನೋ. ನಾನೇನು ಅಪಕ್ವನಲ್ಲ. ನಿನ್ನ ಕಾಲನ್ನು ಬಿಗಿಯಾಗಿ ಹಿಡಿದುಕೊತೇನು ನಾನು' ಎಂದು ಅವರು ಗೋಳಾಡಿದರು. ಭಕ್ತಿ ಭಕ್ತನ ಸ್ವಧರ್ಮ. ಭಕ್ತಿಯಲ್ಲಿ ಬೇರೆ ಬೇರೆ ಫಲಾಭಿಲಾಷೆಯನ್ನು ಕೊನರಿಸದಿರುವುದೇ ಜೀವನಕಲೆ.

ಪುಂಡಲೀಕನ ಚರಿತ್ರೆ ಫಲತ್ಯಾಗಕ್ಕಿಂತಲೂ ಹೆಚ್ಚಿನ ಆಳವನ್ನು ತೋರಿಸುತ್ತದೆ. ಪುಂಡಲೀಕ ತಂದೆತಾಯಿಗಳ ಸೇವೆ ಮಾಡುತ್ತಿದ್ದ. ಆ ಸೇವೆಗೆ ಮೆಚ್ಚಿ ಪಾಂಡುರಂಗ ಅವನ ಬಳಿಗೆ ಓಡಿಬಂದ. ಆದರೆ ಪಾಂಡುರಂಗನ ಮೋಹಕ್ಕೆ ಸಿಕ್ಕಿ ತಾನು ಮಾಡುವ ಸೇವೆಯನ್ನು ಬಿಡಲು ಅವನು ಒಪ್ಪಲಿಲ್ಲ. ತಾಯಿತಂದೆಯ ಸೇವೆ ಎಂದರೆ ಅವನಿಗೆ ಜೀವಾಳದ ಈಶ್ವರ ಭಕ್ತಿ. ಪರರನ್ನು ಕೊಳ್ಳೆಹೊಡೆದು ತಂದೆತಾಯಿಯನ್ನು ಸುಖಪಡಿಸಿಯಾನು ಒಬ್ಬ. ಅನ್ಯದೇಶಕ್ಕೆ ದ್ರೋಹ ಬಗೆದು ಸ್ವದೇಶದ ಏಳಿಗೆ ಬಯಸಿಯಾನು ಒಬ್ಬ ದೇಶಸೇವಕ. ಅವರಿಬ್ಬರಿಗೂ ಭಕ್ತಿಯಿಲ್ಲ, ಆಸಕ್ತಿ. ಪುಂಡಲೀಕ ಅಂಥ ಆಸಕ್ತನಲ್ಲ. ಇದಿರಿಗೆ ಬಂದು ನಿಂತ ಮಾತ್ರಕ್ಕೆ ಅವನೇಯೇ ಪರಮೇಶ್ವರ? ಆ ರೂಪು ಕಾಣುವ ಮೊದಲು ಸೃಷ್ಟಿ ಜೀವಹೀನವಾಗಿತ್ತೆ? ಪುಂಡಲೀಕ ಹೇಳಿದ—'ದೇವರೆ, ನೀನು ನನ್ನನ್ನು ಕಾಣಲು ಬಂದುದು ತಿಳಿಯಿತು. ನಾನು **ಊ** ಸಿದ್ಧಾಂತವಾದಿ. ನೀನು ದೇವರು ಎಂಬುದನ್ನು ನಾನೊಪ್ಪೆ. ನೀನೂ ದೇವರೇ, ನನ್ನ ತಾಯಿತಂದೆಯೂ ದೇವರೇ. ಇವರ ಸೇವೆಯಲ್ಲಿ ನಾನಿರುವಾಗ ನಿನ್ನ ಕಡೆ ಗಮನ ಕೊಡಲಾರೆ. ಇದಕ್ಕಾಗಿ

---

* 'ಜಾಣೂನಿ ಅಂತರ । ಟಾಳಿಶೀಲ ಕರಕರ ।<br>
ತುಜ ಲಾಗಲೀ ಹೇ ಖೋಡಿ । ಪಾಂಡುರಂಗ ಬಹುಕುಡಿ ।'

ನನ್ನನ್ನು ಮನ್ನಿಸು.' ಹೀಗೆಂದು ದೇವರು ನಿಂತಿರಲಿಕ್ಕೆಂದು ಒಂದು ಇಟ್ಟಿಗೆಯನ್ನು ಚಾಚಿದ. ತನ್ನ ಸೇವಾಕಾರ್ಯದಲ್ಲಿ ತಾನು ಮುಳುಗಿದ. ತುಕಾರಾಮರು ಕೌತುಕದಿಂದಲೂ ವಿನೋದದಿಂದಲೂ ಹೇಳುತ್ತಾರೆ.*

ಪುಂಡಲೀಕನು ಮಾಡಿದ ಈ ಉಪಾಯ ಫಲತ್ಯಾಗ ಸಿದ್ಧಾಂತದ ಒಂದು ಅಂಗ. ಫಲತ್ಯಾಗಿ ಪುರುಷನ ಕರ್ಮಸಮಾಧಿ ಗಹನವೂ ಅವನ ವೃತ್ತಿ ವ್ಯಾಪಕವೂ ಉದಾರವೂ ಸಮವೂ ಆಗಿರುತ್ತದೆ. ಅದರಿಂದ ಅವನು ನಾನಾ ತತ್ವಗಳ ಗೊಂದಲದಲ್ಲಿ ಸಿಗ; ತನ್ನ ತತ್ವ ಬಿಡ. ಇದೇ 'ನಾನ್ಯದಸ್ತೀತಿ ವಾದಿನಃ.' ಅದೂ ಇರಲಿ ಇದೂ ಇರಲಿ, ನನಗೇನೋ ಇದೇ ಇರಲಿ ಎಂಬುದು ಅವನ ವಿನಯ, ನಿಶ್ಚಯ.

ಒಂದು ಸಲ ಒಬ್ಬ ಗೃಹಸ್ಥ ಒಬ್ಬ ಸಾಧುವಿನ ಬಳಿಗೆ ಹೋಗಿ, ಮೋಕ್ಷಕ್ಕಾಗಿ ಮನೆ ಬಿಡಲೇಬೇಕೆ ಎಂದು ಕೇಳಿದ. ಸಾಧು ಹೇಳಿದ: 'ಯಾರು ಹೇಳಿದರು? ಜನಕನಂಥವನು ಅರಮನೆಯಲ್ಲಿದ್ದೇ ಮೋಕ್ಷ ಗಳಿಸಿದ. ನೀನೇಕೆ ಮನೆ ಬಿಡಬೇಕು?' ಇನ್ನೊಬ್ಬ ಭೆಟ್ಟಿಯಾಗಿ ಸಾಧು ವನ್ನು ಕೇಳಿದ: 'ಮನೆ ಬಿಡದಿದ್ದರೆ ಮೋಕ್ಷ ಸಿಗದೇ?' 'ಯಾರು ಹೇಳಿದರು? ಮನೆಯೊಳಗೇ ಕೂತು ಸುಖದಲ್ಲಿ ಮುಳುಗಿ ಮೋಕ್ಷ ಪಡೆವು ದಾದರೆ ಶುಕನೇನು ಹೆಡ್ಡನೆ ಮನೆ ಬಿಡಲಿಕ್ಕೆ?' ಈ ಇಬ್ಬರೂ ಗೃಹಸ್ಥರು ಒಂದೆಡೆ ಸೇರಿದರು. ಒಬ್ಬ ಹೇಳಿದ: 'ಮನೆ ಬಿಡಲಿಕ್ಕೆ ಹೇಳಿದರು ಸಾಧು.' ಇನ್ನೊಬ್ಬನೆಂದ: 'ಮನೆ ಬಿಡುವ ಅಗತ್ಯವಿಲ್ಲೆಂದರು.' ಇಬ್ಬರೂ ಮತ್ತೆ ಸಾಧುವಿನ ಬಳಿಗೆ ಬಂದರು. ಆತ ಹೇಳಿದ: 'ಎರಡೂ ಸರಿ ಅವರವರ ವೃತ್ತಿಯಂತೆ ಅವರವರ ದಾರಿ. ಅವರವರ ಪ್ರಶ್ನೆಯಂತೆ ಅವರವರಿಗೆ ಉತ್ತರ. ಮನೆ ಬಿಡಬೇಕಾಗಿಲ್ಲವೆಂಬುದೂ ನಿಜ, ಬಿಡಬೇಕೆಂಬುದೂ ನಿಜ.' ಇದರ ಹೆಸರು **ಊ** ಸಿದ್ಧಾಂತ.

ಪುಂಡಲೀಕನ ಉದಾಹರಣೆಯಿಂದ ಫಲತ್ಯಾಗ ಯಾವ ಮಜಲಿ ಗೊಯ್ಯುತ್ತದೆ ಎಂಬುದು ತಿಳಿಯುತ್ತದೆ. ದೇವರು ತುಕಾರಾಮನಿಗೆ ತೋರಿದ ಆಸೆಗಿಂತ ಪುಂಡಲೀಕನಿಗೆ ತೋರಿದುದು ಅತ್ಯಂತ ಮೋಹಕ

---

* ಕಾರೇ ಪ್ರೇಮೋ ಮಾತಲಾಸೀ। ಉಭೀಕೇಲೇ ವಿಠ್ಠಲಾಸೀ,
ಏಸಾ ಕಸಾರೇ ತೂ ಧೀಟ। ಮಾಗೇ ಭಿರ್ಕಾವಿಲೀ ವೀಟ॥

ಎನ್ನಬೇಕು. ಆದರೆ ಅಂಥದಕ್ಕೂ ಅವನು ಮೋಸಹೋಗಲಿಲ್ಲ. ಒಮ್ಮೆ ಸಾಧನೆ ನಿರ್ಧಾರವಾದಮೇಲೆ ಕಡೆತನಕ ಸಾಧನೆ ನಡೆಯಬೇಕು. ಸಾಧನೆ ನಡೆಯುತ್ತಿರುವಾಗ, ಕರ್ತವ್ಯ ಮಾಡುತ್ತಿರುವಾಗ, ದೇವರೇ ಇದಿರಿಗೆ ಬಂದರೂ ಸಾಧನೆ ಸಡಿಲಾಗಬಾರದು. ಕರ್ತವ್ಯ ಬಿಡಬಾರದು. ಮೈ ಇರುವುದು ಸಾಧನೆಗಾಗಿಯೇ. ದೇವರ ದರ್ಶನ ನಮ್ಮ ಕೈಯೊಳಗಿನ ಮಾತು. ಅದೆಲ್ಲಿ ಹೋದೀತು ?*

ಇದನ್ನು ಪೂರ್ಣಗೊಳಿಸಲೆಂದೇ ಈ ಜನ್ಮ. 'ಮಾ ತೇ ಸಂಗೋಸ್ತ್ವ-ಕರ್ಮಣಿ'—ಈ ಗೀತಾವಾಕ್ಯದ ಅರ್ಥ, ನಿಷ್ಕಾಮ ಕರ್ಮಮಾಡುವವನಿಗೆ ಅಕರ್ಮದ ಎಂದರೆ ಅಂತಿಮ ಕರ್ಮಮುಕ್ತಿಯ ಅಥವಾ ಮೋಕ್ಷದ ಆಸೆ ಇರಲಾಗದು ಎನ್ನುವವರೆಗೂ ಇದೆ. ವಾಸನಾಮುಕ್ತಿಯೆ ಮೋಕ್ಷ. ಮತ್ತೆ ಮೋಕ್ಷಕ್ಕೇಕೆ ವಾಸನೆ ? ಫಲತ್ಯಾಗದಿಂದ ಈ ಮಜಲನ್ನು ಮುಟ್ಟಿದರೆ ಜೀವನಕಲೆಯ ಪೂರ್ಣಿಮೆಯನ್ನು ಸಾಧಿಸಿದಂತೆ.

## ೧೦. ಆದರ್ಶ ಗುರುಮೂರ್ತಿ

ಶಾಸ್ತ್ರ ಹೇಳುತ್ತದೆ, ಕಲೆ ತಿಳಿಸುತ್ತದೆ ; ಆದರೂ ಸಂಪೂರ್ಣ ಚಿತ್ರ ಕಣ್ಣ ಮುಂದೆ ಬಾರದು. ಶಾಸ್ತ್ರ ನಿರ್ಗುಣ, ಕಲೆ ಸಗುಣ. ಸಗುಣವಾದುದು ಸಾಕಾರವಾಗದೆ ವ್ಯಕ್ತವಾಗದು. ನಿರ್ಗುಣ ಬರೀ ಗಾಳಿಯಲ್ಲಿ ಇರುವಂತೆ ನಿರಾಕಾರ ಸಗುಣವೂ ಸಾಧ್ಯ. ಗುಣ ಯಾರಲ್ಲಿ ಮೂರ್ತಿಮತ್ತಾಗಿದೆಯೋ ಆ ಗುಣಿಯ ದರ್ಶನವೇ ಇದರ ಉಪಾಯ. ಎಂತಲೇ ಅರ್ಜುನ ಹೇಳುತ್ತಾನೆ—'ದೇವ, ಬಾಳಿನ ಮುಖ್ಯ ಸಿದ್ಧಾಂತವನ್ನು ಹೇಳಿದೆ. ಅದನ್ನು ಹೇಗೆ ಆಚರಿಸಬೇಕೋ ಆ ಕಲೆಯನ್ನು ಹೇಳಿದೆ. ಆದರೂ ನನಗೆ ನಿಚ್ಚಳವಾಗಿ ಹೊಳೆಯಲಿಲ್ಲ. ನನಗೆ ಅದರ ಸ್ವರೂಪವನ್ನು ಕೇಳುವ ಬಯಕೆಯಾಗಿದೆ. ಸ್ಥಿರಬುದ್ಧಿಯಾದ ಸಾಂಖ್ಯನಿಷ್ಠನ, ಫಲತ್ಯಾಗಯೋಗ-ಸಿದ್ಧನ ಲಕ್ಷಣವೇನೋ ಹೇಳುತ್ತೀಯಾ ? ಫಲತ್ಯಾಗದ ಪೂರ್ಣ ಗಾಢತೆಯುಳ್ಳ, ಕರ್ಮಸಮಾಧಿ ಮಗ್ನನಾದ, ನಿರ್ಧರದ ಮಹಾಮೇರುವಾದ,

* ಸರ್ವಾತ್ಮಕಪಣ ಮಾಝೋ ಹಿರೋನಿ ನೇತೋ ಕೋಣ್ ? ಮನೀಂ ಭಕ್ತೀ ಜೇ ಆವಡೀ ।

ಸ್ಥಿತಪ್ರಜ್ಞನೆನಿಸಿದವನ ನುಡಿ ಹೇಗೆ, ನಡೆ ಹೇಗೆ, ಇರವು ಹೇಗೆ? ಎಲ್ಲಾ ಹೇಳು. ಅವನ ಮೂರ್ತಿ ಎಂಥದು? ಅವನನ್ನು ಗುರುತಿಸುವುದು ಹೇಗೆ?'

ಇದಕ್ಕಾಗಿ ಎರಡನೆ ಅಧ್ಯಾಯದ ಕೊನೆಯಲ್ಲಿ ೧೮ ಶ್ಲೋಕಗಳಲ್ಲಿ ಭಗವಂತ ಸ್ಥಿತಪ್ರಜ್ಞನ ಗಂಭೀರೋದಾತ್ತ ಚರಿತ್ರವನ್ನು ವರ್ಣಿಸಿದಾನೆ. ಈ ಹದಿನೆಂಟು ಶ್ಲೋಕ ಗೀತೆಯ ಹದಿನೆಂಟು ಅಧ್ಯಾಯಗಳ ಸಾರ. ಸ್ಥಿತಪ್ರಜ್ಞನೆ ಗೀತೆಯ ಆದರ್ಶಮೂರ್ತಿ. ಆ ಶಬ್ದವೇ ಗೀತೆಯ ಸ್ವತಂತ್ರ ಸೃಷ್ಟಿ. ಮುಂದೆ ಐದನೆ ಅಧ್ಯಾಯದಲ್ಲಿ ಜೀವನ್ಮುಕ್ತನ, ಹನ್ನೆರಡರಲ್ಲಿ ಭಕ್ತನ, ಹದಿನಾಲ್ಕರಲ್ಲಿ ಗುಣಾತೀತನ, ಹದಿನೆಂಟರಲ್ಲಿ ಜ್ಞಾನನಿಷ್ಠನ ವರ್ಣನೆ ಬಂದಿದೆ. ಇವೆಲ್ಲದರಲ್ಲಿ ಸ್ಥಿತಪ್ರಜ್ಞನ ವರ್ಣನೆಯೇ ಹೆಚ್ಚು ವಿವರವಾಗಿ ವಿಸ್ತಾರವಾಗಿ ಬಂದಿದೆ. ಅದರಲ್ಲಿ ಸಿದ್ಧಲಕ್ಷಣಗಳೂ, ಸಾಧಕ ಲಕ್ಷಣಗಳೂ ಜೊತೆಯಲ್ಲೇ ಇವೆ. ಸಾವಿರಾರು ಮಂದಿ ಸತ್ಯಾಗ್ರಹಿಗಳು—ಗಂಡು ಹೆಣ್ಣು—ಸಂಜೆಯ ಪ್ರಾರ್ಥನೆಯಲ್ಲಿ ಈ ಲಕ್ಷಣಗಳನ್ನು ಹೇಳುತ್ತಾರೆ. ಹಳ್ಳಿ ಹಳ್ಳಿಗೂ ಮನೆ ಮನೆಗೂ ಈ ಸಂದೇಶ ತಲಪಿದರೆ ಎಷ್ಟು ಆನಂದ ವಾದೀತು. ಮೊದಲು ನಮ್ಮ ಹೃದಯದಲ್ಲಿ ಅದು ನೆಟ್ಟರೆ ತಾನೆ ಹೊರಗೆ ಅದು ಹರಿದೀತು. ದಿನವೂ ಹೇಳುವ ವಿಷಯ ಬರೀ ಯಾಂತ್ರಿಕವಾದರೆ ಮನಸ್ಸಿನಲ್ಲಿ ನೆಟ್ಟುದು ಹುಸಿಯಾದೀತು. ಇದು ನಿತ್ಯಪಾಠದ್ದಲ್ಲ ದೋಷ; ಮನನ ವಿಲ್ಲದುದು. ನಿತ್ಯಪಾಠದ ಜೊತೆಗೆ ನಿತ್ಯಮನನ, ನಿತ್ಯ ಆತ್ಮಪರೀಕ್ಷೆ ಅಗತ್ಯ.

ಸ್ಥಿತಪ್ರಜ್ಞ ಎಂದರೆ ಸ್ಥಿರಬುದ್ಧಿಯುಳ್ಳವನು. ಆ ಹೆಸರೇ ಇದನ್ನು ಹೇಳುತ್ತದೆ. ಆದರೆ ಸಂಯಮವಿಲ್ಲದೆ ಬುದ್ಧಿ ಸ್ಥಿರವಾದೀತು ಹೇಗೆ? ಅಂತೇ ಸ್ಥಿತಪ್ರಜ್ಞ ಎಂದರೆ ಸಂಯಮದ ಮೂರ್ತಿ ಎಂದು ವರ್ಣಿಸಿದೆ. ಆತ್ಮದೊಳಗೆ ಬುದ್ಧಿ, ಒಳ ಹೊರಗಿನ ಇಂದ್ರಿಯಗಳು ಬುದ್ಧಿಯೊಳಗೆ: ಇದು ಸಂಯಮದ ಅರ್ಥ. ಸರ್ವೇಂದ್ರಿಯಗಳಿಗೂ ಕಡಿವಾಣ ಹಾಕಿ ಅವನ್ನು ಕರ್ಮಯೋಗದಲ್ಲಿ ಓಡಿಸುವವನು ಸ್ಥಿತಪ್ರಜ್ಞ. ಇಂದ್ರಿಯಗಳೆಂಬ ಎತ್ತುಗಳಿಂದ ಅವನು ಸ್ವಧರ್ಮಾಚರಣೆಯ ಹೊಲವನ್ನು ಗೆಯ್ಯುತ್ತಾನೆ. ತನ್ನ ಉಸಿರನ್ನೆಲ್ಲ ಪರಮಾರ್ಥದಲ್ಲಿ ಕಳೆಯುತ್ತಾನೆ.

ಇಂದ್ರಿಯ ಸಂಯಮ ಸುಲಭವಲ್ಲ. ಇಂದ್ರಿಯಗಳನ್ನು ಬಳಸದೆಯೇ ಇರುವುದು ಒಂದು ಬಗೆಯಲ್ಲಿ ಸುಲಭವಾದೀತು. ಮೌನ, ನಿರಾಹಾರಗಳು

ಅಷ್ಟು ಕಠಿನವಲ್ಲ. ಇಂದ್ರಿಯಗಳನ್ನು ಬೇಕಾಬಿಟ್ಟಿಯಾಗಿ ಬಿಡುವುದು ಎಲ್ಲರಿಗೂ ಸುಲಭ. ಆದರೆ ಅಪಾಯ ಕಂಡಾಗ ಆಮೆ ತನ್ನ ಅಂಗಾಂಗ ಗಳನ್ನೆಲ್ಲ ಒಳಕ್ಕೆ ಸೆಳೆದುಕೊಳ್ಳುವಂತೆ, ನಿರಪಾಯವಾದಲ್ಲಿ ಅವನ್ನು ಬಳಸುವಂತೆ, ವಿಷಯೋಪಭೋಗದಲ್ಲಿ ಇಂದ್ರಿಯಗಳನ್ನು ಸ್ತಂಭಿಸುವುದು, ಪರಮಾರ್ಥದಲ್ಲಿ ಅವನ್ನು ಉಪಯೋಗಿಸುವುದು ಸಂಯಮ. ಇದಕ್ಕೆ ಬಹಳ ಪ್ರಯತ್ನ, ಜ್ಞಾನ ಬೇಕು. ಇಷ್ಟು ಮಾಡಿದರೂ ಅದು ಸರ್ವದಾ ಸಾಧ್ಯವಾದೀತೆಂದು ಹೇಳುವಂತಿಲ್ಲ. ಹಾಗಿದ್ದರೆ ನಿರಾಶರಾಗಬೇಕೆ? ಕೂಡದು. ಸಾಧಕ ಎಂದೂ ನಿರಾಶನಾಗಬಾರದು. ಸಾಧಕ ಎಲ್ಲ ಉಪಾಯವನ್ನೂ ಮಾಡಿ ಕಡಮೆಬಿದ್ದಲ್ಲಿ ಭಕ್ತಿಯನ್ನು ಜೋಡಿಸಬೇಕು. ಇಂಥ ಅಮೌಲ್ಯ ಸೂಚನೆಯನ್ನು ಭಗವಂತ ಈ ಸ್ಥಿತಪ್ರಜ್ಞನ ಲಕ್ಷಣದಲ್ಲಿ ಅಡಗಿಸಿಟ್ಟಿದ್ದಾನೆ. ಸ್ವಲ್ಪೇ ಆರಿಸಿದ ಶಬ್ದಗಳಲ್ಲಿ ಸಂಗ್ರಹವಾಗಿದೆ ಈ ಸೂಚನೆ. ಹೊರೆ ಹೊರೆ ವ್ಯಾಖ್ಯಾನಗಳಿಗಿಂತ ಅದರ ಬೆಲೆ ಹೆಚ್ಚು. ಏಕೆಂದರೆ, ಎಲ್ಲಿ ಭಕ್ತಿ ನೇಮದಂತೆ ಬೇಕಾಗುತ್ತದೆಯೋ ಅಲ್ಲೇ ಅದನ್ನು ತಂದು ಇಡಲಾಗಿದೆ. ಸ್ಥಿತಪ್ರಜ್ಞನ ಸವಿಸ್ತರ ವರ್ಣನೆ ಇಲ್ಲಿ ಬೇಕಾಗಿಲ್ಲ. ನಮ್ಮ ಸಾಧನಾವಸರದಲ್ಲಿ ಭಕ್ತಿಯ ಸ್ಥಾನವನ್ನು ಮರೆಯಬಾರದೆಂದು ಅತ್ತ ನಮ್ಮ ಮನಸ್ಸನ್ನು ಸೆಳೆದಿದಾರೆ. ನಿಜವಾಗಿ ಯಾರು ಈಗ ಸ್ಥಿತ-ಪ್ರಜ್ಞರೋ ಶ್ರೀಹರಿಯೇ ಬಲ್ಲ. ಸೇವಾಪರಾಯಣ ಸ್ಥಿತಪ್ರಜ್ಞ ಎಂದು ಸದಾ ಪುಂಡಲೀಕನ ಮೂರ್ತಿ ನನ್ನ ಕಣ್ಣೆದಿರು ಬಂದು ನಿಲ್ಲುತ್ತದೆ. ಅದನ್ನೇ ನಾನು ಹೇಳಿದೇನೆ.

ಸ್ಥಿತಪ್ರಜ್ಞನ ಲಕ್ಷಣ ಮುಗಿಯಿತು. ಎರಡನೆ ಅಧ್ಯಾಯ ಮುಗಿಯಿತು.

ಸಾಂಖ್ಯಬುದ್ಧಿ (ನಿರ್ಗುಣ) + (ಸಗುಣ) ಯೋಗಬುದ್ಧಿ + (ಸಾಕಾರ) ಸ್ಥಿತಪ್ರಜ್ಞ



ಸಂಪೂರ್ಣ ಜೀವನಶಾಸ್ತ್ರ

ಇದರ ಫಲ ಬ್ರಹ್ಮನಿರ್ವಾಣ ಅಥವಾ ಮೋಕ್ಷವಲ್ಲದೆ ಬೇರೇನಿದ್ದೀತು?

ಭಾನುವಾರ, ೨೮-೨-೩೨

೩

## ೧೧. ಫಲತ್ಯಾಗಿಗೆ ಅನಂತಫಲ

ಎರಡನೆ ಅಧ್ಯಾಯದಲ್ಲಿ ಸಂಪೂರ್ಣ ಜೀವನಶಾಸ್ತ್ರವನ್ನು ನೋಡಿದೆವು. ಮೂರನೆಯದರಲ್ಲಿ ಅದರದೇ ಸ್ಪಷ್ಟೀಕರಣವಿದೆ. ಮೊದಲು ತತ್ವವನ್ನು ನೋಡಿದೆವು. ಈಗದರ ವಿವರ. ಹಿಂದಿನ ಅಧ್ಯಾಯದಲ್ಲಿ ಕರ್ಮಯೋಗದ ವಿವೇಚನೆ ಬಂದಿತ್ತು. ಕರ್ಮಯೋಗದಲ್ಲಿ ಮಹತ್ವದ ಫಲತ್ಯಾಗವುಂಟು. ಆದರೆ ಫಲಸಿದ್ಧಿ ಇದೆಯೋ ಇಲ್ಲವೋ? ಮೂರನೆ ಅಧ್ಯಾಯ ಇದಕ್ಕೆ ಉತ್ತರ ಕೊಡುತ್ತದೆ—ಫಲತ್ಯಾಗಿಯಾದ ಕರ್ಮಯೋಗಿಗೆ ಅನಂತಫಲ.

ನನಗೆ ಲಕ್ಷ್ಮಿಯ ಸಂಗತಿ ನೆನಪಾಗುತ್ತದೆ. ಆಕೆಯ ಸ್ವಯಂವರ ನಡೆದಿತ್ತು. ದೇವ ದಾನವರೆಲ್ಲ ಆಸೆಯಿಂದ ಬಂದಿದ್ದರು. ಲಕ್ಷ್ಮಿ ಪಣವನ್ನು ಹೊರಪಡಿಸಿರಲಿಲ್ಲ. ಸಭಾಮಂಟಪಕ್ಕೆ ಬಂದು 'ಯಾರಿಗೆ ನನ್ನ ಮೇಲೆ ಇಷ್ಟವಿಲ್ಲವೋ ಅವರಿಗೆ ಮಾಲೆ ಹಾಕುತ್ತೇನೆ' ಎಂದಳು. ಎಲ್ಲರಿಗೂ ಲಾಲಸೆಯೇ. ಲಕ್ಷ್ಮಿ ತನ್ನ ಆಸೆಯಿಲ್ಲದ ವರನನ್ನು ಹುಡುಕಿದಳು. ಶೇಷನ ಮೇಲೆ ಶಾಂತವಾಗಿ ಮಲಗಿದ್ದ ವಿಷ್ಣುವಿನ ಮೂರ್ತಿ ಆಕೆಯ ಕಣ್ಣಿಗೆ ಬಿತ್ತು. ಅವನ ಕೊರಲಿಗೆ ಮಾಲೆಹಾಕಿ ಅವನ ಪದತಲದಲ್ಲಿ ಇನ್ನೂ ಕೂತಿದಾಳೆ. 'ಬೇಡದವಗಾದಾಳು ತೊತ್ತು ಭಾಗ್ಯಲಕ್ಷ್ಮಿ.'* ಇದೇ ಕೌಶಲ!

ಸಾಮಾನ್ಯ ಮನುಷ್ಯ ತನ್ನ ಫಲದ ಸುತ್ತ ಬೇಲಿ ಕಟ್ಟುತ್ತಾನೆ. ಇದರಿಂದ ಅನಂತವಾಗಿ ಸಿಗುವ ಫಲವನ್ನು ಕಳೆದುಕೊಳ್ಳುತ್ತಾನೆ. ಸಾಮಾನ್ಯ ಮನುಷ್ಯ ಅಪಾರ ಕರ್ಮಮಾಡಿ ಅಲ್ಪ ಫಲ ಗಳಿಸುತ್ತಾನೆ. ಅದೇ ಕರ್ಮಯೋಗಿ ಸ್ವಲ್ಪ ಕರ್ಮಮಾಡಿ ಅನಂತಫಲ ಗಳಿಸುತ್ತಾನೆ. ಈ ವ್ಯತ್ಯಾಸ ಒಂದೇ ಒಂದು ಭಾವನೆಯಿಂದ ಆಗುತ್ತದೆ. ಟಾಲ್‌ಸ್ಟಾಯ್ ಒಂದೆಡೆ ಹೇಳಿದಾನೆ: "ಲೋಕ ಕ್ರಿಸ್ತನ ತ್ಯಾಗವನ್ನು ಸ್ತುತಿಸುತ್ತದೆ. ಆದರೆ ಸಂಸಾರಿ ಜೀವ ದಿನವೂ ಎಷ್ಟು ನೆತ್ತರು ಇಂಗಿಸುತ್ತದೆ, ಕಡುಕಷ್ಟ

---

* ನ ಮಾಗೇ ತಯಾಚೀ ರಮಾ ಹೋಯ್ ದಾಸೀ।

ಸಹಿಸುತ್ತದೆ! ಎರಡೆರಡು ಕತ್ತೆಯ ಹೊರೆ ಹೊತ್ತು ಬದುಕು ನೀಗಿಸುವ ಈ ಸಂಸಾರಿಜೀವ ಕ್ರಿಸ್ತನಿಗಿಂತ ಎಷ್ಟು ಹೆಚ್ಚು ಕಷ್ಟ, ಎಷ್ಟು ಸಂಕಟ ಅನುಭವಿಸುತ್ತದೋ, ಇದರಲ್ಲಿ ಅರ್ಧದಷ್ಟನ್ನಾದರೂ ದೇವರಿಗಾಗಿ ಸೈರಿಸಿದರೆ ಕ್ರಿಸ್ತನೇ ಆದೀತು ಈ ಜೀವ!"

ಸಂಸಾರಿಯ ತಪಸ್ಸು ದೊಡ್ಡದು. ಆದರೆ ಅದು ಕ್ಷುದ್ರ ಫಲಕ್ಕಾಗಿ. ವಾಸನೆಯಿದ್ದಂತೆ ಫಲ. ನಮ್ಮ ಪದಾರ್ಥಕ್ಕೆ ನಾವು ಕೊಟ್ಟಷ್ಟು ಬೆಲೆಯನ್ನು ಜನ ಕೊಡರು. ಸುಧಾಮ ದೇವರ ಬಳಿಗೆ ಅವಲಕ್ಕಿ ಕೊಂಡೊಯ್ದ. ಆ ಹಿಡಿ ಅವಲಕ್ಕಿ ಒಂದು ಬಿಡಿಕಾಸಿನದೂ ಅಲ್ಲ. ಆದರೆ ಸುಧಾಮನಿಗೆ ಅದು ಬೆಲೆಯಿಲ್ಲದ್ದು. ಆ ಅವಲಕ್ಕಿಯಲ್ಲಿ ಭಕ್ತಿ ತುಂಬಿತ್ತು. ಅದು ಮಂತ್ರಿಸಿದ ಅವಲಕ್ಕಿ. ಆ ಅವಲಕ್ಕಿಯಲ್ಲಿ ಕಣ ಕಣದಲ್ಲೂ ಭಾವನೆಯಿತ್ತು. ಪದಾರ್ಥ ಚಿಕ್ಕದು. ಆದರೂ ಮಂತ್ರ ಅದನ್ನು ದೊಡ್ಡದು ಮಾಡಿತು. ನೋಟುಗಳ ತೂಕ ಎಷ್ಟು? ಸುಟ್ಟರೆ ಒಂದು ಹನಿ ನೀರೂ ಕಾಯಲಿಕ್ಕಿಲ್ಲ. ಆದರೆ ಅದರ ಮೇಲೆ ಮುದ್ರೆಯಿದೆ. ಆ ಮುದ್ರೆಯಿಂದ ಅದರ ಬೆಲೆ. ಕರ್ಮಯೋಗದ ಜಾಣ್ಮೆ ಇದೇ. ಕರ್ಮ ನೋಟು ಇದ್ದಂತೆ. ಭಾವನೆಯ ಮುದ್ರೆಗೆ ಬೆಲೆಯುಂಟು. ಬರೀ ಕರ್ಮಕ್ಕೆ ಬೆಲೆಯಿಲ್ಲ. ಇದೊಂದು ಬಗೆಯಲ್ಲಿ ಮೂರ್ತಿಪೂಜೆಯ ರಹಸ್ಯ. ಮೂರ್ತಿಪೂಜೆಯ ಕಲ್ಪನೆ ಅತ್ಯಂತ ಸುಂದರವಾದುದು. ವಿಗ್ರಹವನ್ನು ತುಂಡುಮಾಡಬಲ್ಲವರಾರು? ಮೊದಲು ತುಂಡು ತುಣುಕಾಗಿದ್ದುದೇ ತಾನೆ ಈ ವಿಗ್ರಹ. ನಾನದರಲ್ಲಿ ಜೀವ ತುಂಬಿದೆ. ನನ್ನ ಭಾವನೆ ತುಂಬಿತು. ಭಾವನೆಯನ್ನು ತುಂಡು ಮಾಡಲು ಸಾಧ್ಯವೆ? ಕಲ್ಲು ತುಂಡಾದೀತು, ಭಾವನೆಯಲ್ಲ. ವಿಗ್ರಹದಿಂದ ನನ್ನ ಭಾವನೆ ಮಾಯವಾದರೆ ಅದು ಬರೀ ಕಲ್ಲಾಗಿ ತುಂಡಾಗುತ್ತದೆ.

ಕರ್ಮ ಎಂದರೆ ಕಲ್ಲು, ಕಾಗದ. ತಾಯಿ ಸೊಟ್ಟಸೊಟ್ಟನಾಗಿ ನಾಲ್ಕು ಸಾಲು ಕಾಗದದ ಮೇಲೆ ಬರೆದು ಕಳಿಸಿದರು ಎನ್ನಿ. ಇನ್ನೊಬ್ಬರು ಐವತ್ತು ಹಾಳೆ ಏನಾದರೂ ಬರೆದು ಅರ್ಧ ಸೇರು ತೂಕದಷ್ಟು ಕಾಗದ ಕಳಿಸಿದರೆ ಅದರ ತೂಕ ಹೆಚ್ಚಾಯಿತೆ? ತಾಯಿ ಗೀಚಿದ ನಾಲ್ಕು ಸಾಲು ಭಾವನಾ ಭರಿತ, ಪವಿತ್ರ, ಅಮೌಲ್ಯ. ಅದರ ಬೆಲೆ ಉಳಿದ ಕಾಗದಕ್ಕೆ ಬಂದೀತೆ? ಕರ್ಮಕ್ಕೆ ತಂಪೂ ಬೇಕು, ಭಾವನೆಯೂ ಬೇಕು. ಕೂಲಿಯವನು ಕೆಲಸ

ಮಾಡಿದರೆ ಅದಕ್ಕೆ ಬೆಲೆ ಕಟ್ಟಿ, ರೊಕ್ಕ ತೆಗೆದುಕೊಂಡು ಹೋಗು ಎನ್ನುತ್ತೇವೆ. ಆದರೆ ದಕ್ಷಿಣೆಯ ಮಾತು ಹಾಗಲ್ಲ. ದಕ್ಷಿಣೆಯನ್ನು ನೆನೆಯಿಸಿ ಕೊಡುತ್ತೇವೆ. ಎಷ್ಟು ದಕ್ಷಿಣೆ ಕೊಟ್ಟಿರಿ ಎಂಬ ಪ್ರಶ್ನೆಯಿಲ್ಲ. ಅದರಲ್ಲಿ ತೇವ ಇದೆಯೆ ಎಂಬುದು ಪ್ರಶ್ನೆ. ಮನುಸ್ಮೃತಿಯಲ್ಲಿ ಒಂದು ದೊಡ್ಡ ವಿನೋದವಿದೆ. ಹನ್ನೆರಡು ವರುಷ ಗುರುಗೃಹದಲ್ಲಿ ಕಳೆದು, ಪಶುವಾಗಿದ್ದವನು ಮನುಷ್ಯನಾದ ಶಿಷ್ಯ ಗುರುವಿಗೆ ಏನು ಕೊಡಬಲ್ಲ? ಪೂರ್ವಕಾಲದಲ್ಲಿ ಮೊದಲೇ ರುಸುಂ ತೆಗೆದುಕೊಳ್ಳುತ್ತಿದ್ದಿಲ್ಲ. ೧೨ ವರ್ಷ ಕಲಿತ ಮೇಲೆ ಏನು ಕೊಡಬೇಕಾದೀತೋ ಅದನ್ನು ಆಮೇಲೆ ಕೊಡಬೇಕಾಗುತ್ತಿತ್ತು. ಮನು ಹೇಳುತ್ತಾನೆ: 'ಕೊಡು ಗುರುವಿಗೆ ಒಂದು ಹೂ, ಒಂದು ಬೀಸಣಿಕೆ, ಒಂದು ಜೊತೆ ಆವಿಗೆ, ಒಂದು ನೀರು ತುಂಬಿದ ತಂಬಿಗೆ.' ಇದು ಚೇಷ್ಟೆಯಲ್ಲ. ಕೊಡಬೇಕಾದುದನ್ನು ಶ್ರದ್ಧೆಯ ಚಿಹ್ನೆಯೆಂದು ಕೊಡಬೇಕು. ಹೂವಿಗೆ ತೂಕವಿಲ್ಲ. ಅದರಲ್ಲಿ ಅಡಗಿದ ಭಕ್ತಿಗೆ ಬ್ರಹ್ಮಾಂಡದಷ್ಟು ತೂಕವಿದೆ.

ಹಾಕುತಲಿ ತುಳಸಿಯ ದಳವನ್ನಾ
ತೂಗಿದಳು ರುಕುಮಿಣಿ ಗಿರಿಧರನಾ*

ರುಕ್ಮಿಣಿ ಒಂದು ತುಲಸೀದಲದಿಂದ ಗಿರಿಧರನನ್ನು ತೂಗಿದಳು. ಸತ್ಯಭಾಮೆಯ ಮಣಮಣ ಒಡವೆಗಳಿಂದ ಕೆಲಸವಾಗಲಿಲ್ಲ. ಭಾವಭಕ್ತಿಭರಿತವಾದ ಒಂದು ತುಲಸೀದಳವನ್ನು ರುಕ್ಮಿಣಿ ತಕ್ಕಡಿಯಲ್ಲಿ ಹಾಕಲು ಕೆಲಸವಾಯಿತು. ಆ ದಳ ಮಂತ್ರಿತವಾದುದು; ಬರೀ ದಳವಾಗಿರಲಿಲ್ಲ. ಕರ್ಮಯೋಗಿಗಳ ಕರ್ಮವೂ ಹೀಗೆಯೇ.

ಗಂಗೆಯಲ್ಲಿ ಇಬ್ಬರು ಸ್ನಾನಕ್ಕೆ ಹೋಗಿದಾರೆ ಎನ್ನಿ. ಒಬ್ಬ—ಗಂಗೆಯೆಂದರೆ ಏನು? ಒಂದು ಭಾಗ ಪ್ರಾಣವಾಯು, ಎರಡು ಭಾಗ ಜಲಜನಕ, ಎರಡೂ ಸೇರಿ ನೀರು ಎಂದ. ಇನ್ನೊಬ್ಬ ಹೇಳಿದ—'ಇದು ಭಗವಾನ್ ವಿಷ್ಣುವಿನ ಪದಕಮಲದಲ್ಲಿ ಹುಟ್ಟಿದುದು; ಶಂಕರನ ಜಟಾಜೂಟದಲ್ಲಿ ಸೇರಿದುದು; ಇದರ ತೀರದಲ್ಲಿ ಸಾವಿರಾರು ಋಷಿಗಳು ತಪಸ್ಸುಮಾಡಿದಾರೆ; ಎಷ್ಟೋ ಪುಣ್ಯಕೃತ್ಯಗಳ ಭಾಗ್ಯ ಇದಕ್ಕಿದೆ; ಇಂಥ ಪವಿತ್ರ ಗಂಗಾಮಾತೆ!' ಈ ಭಾವನೆಯಿಂದ ತುಂಬಿ ಅವನು ಸ್ನಾನಮಾಡಿದ. ಆಕ್ಸಿಜನ್

* ರುಕ್ಮಿಣೀನೇ ಏಕ್ಯಾ ತುಳಸೀ ದಳಾನೇ ಗಿರಿಧರಪ್ರಭು ತುಳಿಲಾ.

ಹೈಡ್ರೊಜನ್‌ವಾಲಾನೂ ಸ್ನಾನಮಾಡಿದ. ಇಬ್ಬರಿಗೂ ಮೈ ತೊಳೆಯಿತು. ದೇಹಶುದ್ಧಿಯ ಫಲದ ಯೋಚನೆಯೆ ಇಲ್ಲದವನಿಗೂ ಆ ಫಲ ದೊರೆಯಿತು. ಗಂಗೆಯಲ್ಲಿ ಎತ್ತೂ ಮೈ ತೊಳೆದಾವು. ಮನಸ್ಸಿನ ಹೊಲಸು ಹೋಗಬೇಕು ಹೇಗೆ? ಒಬ್ಬನಿಗೆ ಮೈ ತೊಳೆವ ಚಿಲ್ಲರೆ ಫಲ ಸಿಕ್ಕಿತು. ಇನ್ನೊಬ್ಬನಿಗೆ ಇದರ ಜೊತೆಗೆ ಚಿತ್ತಶುದ್ಧಿಯ ಅಮೌಲ್ಯ ಫಲವೂ ಸಿಕ್ಕಿತು.

ಸ್ನಾನಮಾಡಿ ಸೂರ್ಯನಮಸ್ಕಾರ ಹಾಕಿದರೆ ವ್ಯಾಯಾಮದ ಫಲವಂತೂ ಸಿಕ್ಕೇಸಿಗುತ್ತದೆ. ಆರೋಗ್ಯಕ್ಕಾಗಿ ನಮಸ್ಕಾರ ಮಾಡುವುದಿಲ್ಲ; ಉಪಾಸನೆಗಾಗಿ. ಅದರಿಂದ ಮೈಗೆ ಆಗುವ ಲಾಭವಂತೂ ಇದ್ದೇ ಇದೆ; ಬುದ್ಧಿಯ ಪ್ರಭೆಯೂ ಅರಳುತ್ತದೆ. ಆರೋಗ್ಯದ ಜೊತೆಗೆ ಪ್ರತಿಭೆಯೂ ಸ್ಫೂರ್ತಿಯೂ ಸೂರ್ಯನಿಂದ ದೊರೆತೀತು.

ಕರ್ಮವೇನೋ ಅದೇ. ಭಾವನಾಭೇದದಿಂದ ಬೆಲೆ ವ್ಯತ್ಯಾಸ ವಾಗುತ್ತದೆ. ಪಾರಮಾರ್ಥಿ ಮನುಷ್ಯನ ಕರ್ಮ ಆತ್ಮವಿಕಾಸಕವಾಗುತ್ತದೆ; ಸಂಸಾರಿಯ ಕರ್ಮ ಆತ್ಮಬಂಧಕವಾಗುತ್ತದೆ. ಕರ್ಮಯೋಗಿ ಒಕ್ಕಲಿಗ ನಾದರೆ ಬೇಸಾಯವನ್ನು ಸ್ವಧರ್ಮವೆಂದು ಮಾಡುತ್ತಾನೆ. ಅದರಿಂದ ಅವನ ಹೊಟ್ಟೆಗೆ ಹಿಟ್ಟು ಸಿಗುತ್ತದೆ. ಆದರೆ ಹಿಟ್ಟಿಗಾಗಿ ಅವನು ಆ ಕರ್ಮವನ್ನು ಮಾಡ. ಬೇಸಾಯ ಮಾಡಲಿಕ್ಕೆ ಎಂದು ಹಿಟ್ಟು ಅವನಿಗೆ ಸಾಧನವಾದೀತು. ಸ್ವಧರ್ಮವೇ ಗುರಿ; ಅನ್ನ ಅದಕ್ಕೆ ದಾರಿ. ಉಳಿದ ಬೇಸಾಯಗಾರರಿಗೆ ಹಿಟ್ಟೇ ಗುರಿ; ಬೇಸಾಯದ ಸ್ವಧರ್ಮವೇ ಸಾಧನ. ಹೀಗೆ ಅವರು ತಿರುಗಮುರುಗರು. ಎರಡನೆ ಅಧ್ಯಾಯದಲ್ಲಿ ಸ್ಥಿತಪ್ರಜ್ಞನ ಲಕ್ಷಣದಲ್ಲಿ ಇದನ್ನು ಸ್ವಾರಸ್ಯವಾಗಿ ಹೇಳಿದೆ: ಇತರರು ಎಚ್ಚತ್ತಾಗ ಕರ್ಮಯೋಗಿಗೆ ನಿದ್ದೆ; ಅವರು ಮಲಗಿದಾಗ ಇವನಿಗೆ ಎಚ್ಚರ. ಹೊಟ್ಟೆಗೆ ಸಿಕ್ಕೀತೋ ಇಲ್ಲವೋ ಎಂದು ನಾವು ಜಾಗರೂಕರಾದರೆ, ಕರ್ಮಯೋಗಿಗೆ ತನ್ನ ಕರ್ಮದಲ್ಲಿ ಒಂದು ಗಳಿಗೆಯೂ ವ್ಯರ್ಥವಾಗಬಾರದು ಎಂಬುದರಲ್ಲಿ ಎಚ್ಚರ. ವಿಧಿಯಿಲ್ಲವೆಂದು ಅವನು ತಿನ್ನುತ್ತಾನೆ. ಈ ಗಡಿಗೆಗೆ ಏನಾದರೂ ತುಂಬಲೇಬೇಕಲ್ಲ ಎಂದು ತುಂಬುತ್ತಾನೆ. ಸಂಸಾರಿಗಳಿಗೆ ಉಣ್ಣುವಾಗ ಆನಂದವಾಗುತ್ತದೆ. ಯೋಗಿಗೆ ಉಣ್ಣುವಾಗ ಕಷ್ಟವಾಗುತ್ತದೆ. ಅಂತೇ ಅವನು ಚಪ್ಪರಿಸಿ ಲಟಿಕೆಹಾಕಿ ಉಣ್ಣುವುದಿಲ್ಲ. ಸಂಯಮ ಕಾಯ್ದು

ಕೊಂಡಾನು. ಒಬ್ಬರ ಇರುಳು ಇನ್ನೊಬ್ಬರಿಗೆ ಹಗಲು; ಒಬ್ಬರ ಹಗಲು ಇನ್ನೊಬ್ಬರಿಗೆ ಇರುಳು. ಒಬ್ಬರ ಆನಂದ ಇನ್ನೊಬ್ಬರ ದುಃಖ, ಒಬ್ಬರ ದುಃಖ ಇನ್ನೊಬ್ಬರ ಆನಂದ. ಸಂಸಾರಿ, ಕರ್ಮಯೋಗಿ ಇಬ್ಬರ ಕರ್ಮವೂ ಒಂದೇ ಬಗೆ. ಕರ್ಮಯೋಗಿ ಫಲಾಸಕ್ತಿಯನ್ನು ಬಿಟ್ಟು ಕರ್ಮದಲ್ಲೇ ರಮಿಸುತ್ತಾನೆಂಬುದೇ ಮುಖ್ಯ. ಸಂಸಾರಿಯಂತೆ ಯೋಗಿಯೂ ತಿನ್ನುತ್ತಾನೆ, ಕುಡಿಯುತ್ತಾನೆ, ಮಲಗುತ್ತಾನೆ. ಆದರೆ ಅವನ ಭಾವನೆಯೇ ಬೇರೆ. ಎಂತಲೇ ಹದಿನಾರು ಅಧ್ಯಾಯಗಳು ಇದ್ದರೂ ಸ್ಥಿತಪ್ರಜ್ಞನ ಸಂಯಮ ಮೂರ್ತಿಯನ್ನು ಇದಿರಿಗೆ ಕಡೆದು ನಿಲ್ಲಿಸಿದೆ.

ಅದರಿಂದಲೇ ಸಂಸಾರಿ—ಕರ್ಮಯೋಗಿಗಳ ಕರ್ಮದಲ್ಲಿ ಸಾಮ್ಯ—ವೈಷಮ್ಯ ಕಾಣಬರುತ್ತದೆ. ಕರ್ಮಯೋಗಿ ಗೋರಕ್ಷಣೆ ಮಾಡುತ್ತಾನೆ ಎನ್ನಿ. ಯಾವ ಉದ್ದೇಶ್ಯದಿಂದ ಮಾಡುತ್ತಾನೆ? ಗೋಸೇವೆ ಮಾಡಿ ಸಮಾಜಕ್ಕೆ ಹೇರಳವಾಗಿ ಹಾಲು ಒದಗಿಸೋಣ, ಮನುಷ್ಯನಿಗಿಂತ ಕೆಳಗಿನ ಪ್ರಾಣಿವರ್ಗದಲ್ಲಿ ಗೋವಿಗಾದರೂ ಪ್ರೀತಿ ತೋರಿಸೋಣ, ಎಂದು ಅವನು ಗೋರಕ್ಷಣೆ ಮಾಡಿಯಾನು; ಸಂಬಳಕ್ಕಾಗಿ ಮಾಡಲಾರ. ಸಂಬಳ ಸಿಕ್ಕೀತು. ಆದರೆ ಆನಂದ ಮಾತ್ರ ಭಾವನೆ ನೀಡುವ ದಾನ!

ಕರ್ಮಯೋಗಿಯ ಕರ್ಮ ವಿಶ್ವದೊಡನೆ ತಾನು ಸಮರಸವಾಗುತ್ತದೆ. ತುಲಸಿಗೆ ನೀರು ಹನಿಸದೆ ಊಟ ಮಾಡಬಾರದು ಎಂದು ಕೆಲವರ ನಿಯಮ. ವನಸ್ಪತಿ ಸೃಷ್ಟಿಯೊಡನೆ ಪ್ರೀತಿಯ ಎಳೆಗೂಡಿಸಿದ ಸಂಬಂಧ ಇದು. ತುಲಸಿ ಹಸಿದಿದ್ದು ನಾನು ಉಣ್ಣಲೆ? ಗೋವಿನೊಡನೆ ಏಕರೂಪ, ಗಿಡಮರದೊಡನೆ ಏಕರೂಪ. ಹೀಗೇ ಮಾಡುತ್ತ ವಿಶ್ವದ ಏಕರೂಪ ಅನುಭವಕ್ಕೆ ಬರುತ್ತದೆ. ಭಾರತ ಯುದ್ಧದಲ್ಲಿ ಸಂಜೆಗೆ ಎಲ್ಲರೂ ಸಂಧ್ಯಾವಂದನೆ ಮಾಡಲು ಹೋಗುತ್ತಿದ್ದರು. ಆದರೆ ಶ್ರೀಕೃಷ್ಣನೋ ರಥಕ್ಕೆ ಕಟ್ಟಿದ ಕುದುರೆಗಳನ್ನು ಬಿಚ್ಚಿ ನೀರು ಕುಡಿಸಲು ಕರೆದೊಯ್ಯುತ್ತಿದ್ದ. ಅವುಗಳ ಮೈ ತಿಕ್ಕುತ್ತಿದ್ದ. ಮೈಗೆ ನೆಟ್ಟಿದ್ದ ಬಾಣಗಳನ್ನು ತೆಗೆಯುತ್ತಿದ್ದ. ಆ ಸೇವೆಯಲ್ಲಿ ಭಗವಂತನಿಗೆ ಎಷ್ಟು ಆನಂದವೋ! ಇದನ್ನು ಎಷ್ಟು ವರ್ಣಿಸಿದರೂ ಕವಿಗೆ ತೃಪ್ತಿಯಿಲ್ಲ. ಪೀತಾಂಬರದಲ್ಲಿ ಹಾಕಿ ಕುದುರೆಗೆ ಹುರುಳಿ ತಿನ್ನಿಸುತ್ತಿದ್ದ ಪಾರ್ಥಸಾರಥಿ ಕಣ್ಣೆದಿರಿಗೆ ಬರಬೇಕು, ಆಗ ಕರ್ಮಯೋಗದ ಆನಂದವನ್ನು ಅರಿಯ

ಬೇಕು. ಪ್ರತಿಯೊಂದು ಕರ್ಮವೂ ಆಧ್ಯಾತ್ಮಿಕ ಕರ್ಮ, ಉಚ್ಚತರ ಪಾರಮಾರ್ಥಿಕ ಕರ್ಮ. ಖಾದೀ ಕೆಲಸವನ್ನು ನೋಡಿ. ಹೆಗಲಮೇಲೆ ಖಾದಿ ಹೊತ್ತು ಅಲೆದಾಡುವುದು ಬೇಸರವಲ್ಲವೆ ? ಇಲ್ಲ. ಎಷ್ಟೋ ಕೋಟಿ ಜನ ಅರೆಹೊಟ್ಟೆಯ ಅಣ್ಣತಮ್ಮಂದಿರಿದಾರೆ. ಅವರಿಗೆ ಒಂದು ತುತ್ತು ಕೊಡ ಬೇಕು ಎಂಬ ಯೋಚನೆಯಲ್ಲಿ ಅವನು ಮುಳುಗಿರುತ್ತಾನೆ. ಒಂದು ಗಜ ಖಾದಿ ಮಾರುವುದೂ ಕೂಡ ಅವನಿಗೆ ದರಿದ್ರನಾರಾಯಣನ ಪೂಜೆ.

## ೧೨. ಕರ್ಮಯೋಗದ ವಿವಿಧ ಪ್ರಯೋಜನ

ನಿಷ್ಕಾಮ ಕರ್ಮಯೋಗದಲ್ಲಿ ಅದ್ಭುತ ಸಾಮರ್ಥ್ಯವಿದೆ. ಆ ಕರ್ಮ ದಿಂದ ವ್ಯಕ್ತಿಗೂ ಸಮಾಜಕ್ಕೂ ಪರಮ ಕಲ್ಯಾಣವಾಗುತ್ತದೆ. ಸ್ವಧರ್ಮಾ ಚರಣೆ ಮಾಡುವ ಕರ್ಮಯೋಗಿಯ ಶರೀರಯಾತ್ರೆ ನಡೆದೇ ನಡೆಯುತ್ತದೆ. ಶಿಸ್ತಿನಿಂದ ಉದ್ಯೋಗ ಮಾಡುವುದರಿಂದ ಮೈ ನೀರೋಗಿಯೂ ಸ್ವಚ್ಛವೂ ಆಗಿರುತ್ತದೆ. ಅವನ ಕರ್ಮದಿಂದ ಅವನ ಸುತ್ತಲಿನ ಸಮಾಜದ ಯೋಗ ಕ್ಷೇಮವೂ ಚೆನ್ನಾಗಿ ನಡೆಯುತ್ತದೆ. ಹೆಚ್ಚು ಹಣ ದೊರೆತೀತೆಂದು ಕರ್ಮ ಯೋಗಿಯಾದ ಒಕ್ಕಲಿಗ ಅಫೀಮನ್ನೂ ಹೊಗೆಸೊಪ್ಪನ್ನೂ ಬೆಳೆಸಿಯಾನೆ ? ಅವನ ಕರ್ಮ ಸಮಾಜದ ಕಲ್ಯಾಣಕ್ಕಾಗಿ ಮಾಡಿದುದು. ಸ್ವಧರ್ಮರೂಪಿ ಕರ್ಮ ಯಾವಾಗಲೂ ಸಮಾಜಕ್ಕೆ ಲಾಭಕಾರಿಯೆ. ನನ್ನ ವ್ಯಾಪಾರ ಜನರ ಹಿತಕ್ಕಾಗಿ ಎಂಬ ವ್ಯಾಪಾರಿ ಪರದೇಶಿ ಬಟ್ಟೆ ಮಾರಲಿಕ್ಕಿಲ್ಲ. ಅವನ ವ್ಯಾಪಾರ ಸಮಾಜೋಪಕಾರಕವಾದೀತು. ತನ್ನನ್ನು ಮರೆತು ನೆರೆಹೊರೆಯ ಸಮಾಜದಲ್ಲಿ ಬೆರೆತುಹೋಗುವ ಕರ್ಮಯೋಗಿ ಯಾವ ಸಮಾಜದಲ್ಲಿ ರುತ್ತಾನೋ ಅಂಥ ಸಮಾಜದಲ್ಲಿ ಸುವ್ಯವಸ್ಥೆ, ಸಮೃದ್ಧಿ, ಸೌಮನಸ್ಯ ಇರುತ್ತದೆ.

ಕರ್ಮಯೋಗಿಯ ಕರ್ಮದಿಂದ ಅವನ ಶರೀರಯಾತ್ರೆ ನಡೆದು ದೇಹ, ಬುದ್ಧಿ ತೇಜೋವಂತವಾಗಿದ್ದೀತು, ಸಮಾಜದ ಕಲ್ಯಾಣವೂ ಆದೀತು. ಇವೆರಡೂ ಫಲಗಳಲ್ಲದೆ ಚಿತ್ತಶುದ್ಧಿಯ ಫಲವೂ ಅವನಿಗೆ ಸಿಗುತ್ತದೆ. 'ಕರ್ಮಣಾ ಶುದ್ಧಿಃ' ಎಂದು ಗೀತೆ ಹೇಳಿದೆ. ಕರ್ಮ ಚಿತ್ತ ಶುದ್ಧಿಗೆ ಸಾಧನೆ. ನಮ್ಮ ನಿಮ್ಮ ಕರ್ಮವಲ್ಲ. ಕರ್ಮಯೋಗಿ ಮಾಡುವ

ಮಂತ್ರವತ್ತಾದ ಕರ್ಮದಿಂದ ಅವನಿಗೆ ಚಿತ್ತಶುದ್ಧಿ ಲಭಿಸುತ್ತದೆ. ಮಹಾಭಾರತದಲ್ಲಿ ತುಲಾಧಾರ ವೈಶ್ಯನ ಕತೆಯಿದೆ. ಜಾಜಲಿ ಎಂಬ ಬ್ರಾಹ್ಮಣ ತುಲಾಧಾರನ ಬಳಿಗೆ ಜ್ಞಾನಸಂಪಾದನೆಗಾಗಿ ಬರುತ್ತಾನೆ. ತುಲಾಧಾರ ಅವನಿಗೆ ಹೇಳಿದ: 'ಅಯ್ಯಾ, ಈ ತಕ್ಕಡಿಯ ದಂಡಿಗೆ ಸರಳವಾಗಿರಬೇಕು. ಈ ಬಾಹ್ಯಕರ್ಮ ಮಾಡುತ್ತಾ ತುಲಾಧಾರನ ಮನಸ್ಸೇ ಸರಳವಾಯಿತು. ಅಂಗಡಿಗೆ ದೊಡ್ಡವರೆ ಬರಲಿ, ಮಕ್ಕಳೆ ಬರಲಿ, ದಂಡಿಗೆ ಒಂದೇ ತೆರ; ಕೆಳಗೆ-ಮೇಲೆ ಇಲ್ಲವೇ ಇಲ್ಲ. ಉದ್ಯೋಗದಿಂದ ಮನಸ್ಸಿನ ಮೇಲೆ ಪರಿಣಾಮವಾಗುತ್ತದೆ. ಕರ್ಮಯೋಗಿಯ ಕರ್ಮ ಒಂದು ಬಗೆಯ ಜಪ. ಅದರಿಂದ ಅವನಿಗೆ ಚಿತ್ತಶುದ್ಧಿ ಸಿಗುತ್ತದೆ. ನಿರ್ಮಲಚಿತ್ತದಲ್ಲಿ ಜ್ಞಾನದ ಪ್ರತಿಬಿಂಬ ಮೂಡುತ್ತದೆ. ತನ್ನ ತನ್ನ ಕರ್ಮದಲ್ಲೇ ಕರ್ಮಯೋಗಿಗೆ ಕಟ್ಟಕಡೆಗೆ ಜ್ಞಾನ ಲಭಿಸುತ್ತದೆ. ತಕ್ಕಡಿಯ ದಂಡಿಗೆಯಿಂದ ತುಲಾಧಾರನಿಗೆ ಸಮವೃತ್ತಿ ಸಿಕ್ಕಿತು. ಸೇನಾ ಎಂಬ ನಾಪಿತ. ಪರರ ತಲೆಯ ಕೊಳೆಯನ್ನು ತೆಗೆಯುತ್ತಾ ಸೇನಾಗೆ ಜ್ಞಾನ ಉದಯಿಸಿತು. 'ನಾನು ಇತರರ ತಲೆಯ ಕೊಳೆ ತೆಗೆಯುತ್ತಿದ್ದೇನೆ, ನನ್ನ ತಲೆಯ, ನನ್ನ ಬುದ್ಧಿಯಲ್ಲಿರುವ, ಕೊಳೆಯನ್ನು ತೆಗೆದಿದ್ದೇನೆಯೆ?' ಇಂಥ ಆಧ್ಯಾತ್ಮಿಕ ಭಾಷೆ ಅವನಿಗೆ ಆ ಕರ್ಮದಲ್ಲಿ ಸ್ಫುರಿಸಿತು. ಹೊಲದಲ್ಲಿ ಯಥೇಚ್ಛವಾಗಿ ಬೆಳೆದ ಕಳೆಯನ್ನು ತೆಗೆಯುತ್ತ ಹೃದಯದ ವಾಸನಾವಿಕಾರದ ಕಳೆಯನ್ನು ಕಿತ್ತಿಸೆಯುವ ಬುದ್ಧಿ ಕರ್ಮಯೋಗಿಗೆ ಬರುತ್ತದೆ. ಮಣ್ಣಿನಿಂದ ಸೊಗಸಾದ ಗಡಿಗೆ ಮಾಡುತ್ತಿದ್ದ ಗೋರಾ ಕುಂಬಾರ ತನ್ನ ಬದುಕನ್ನೇ ಒಂದು ಗಡಿಗೆ ಮಾಡಬೇಕೆಂದು ಲೆಕ್ಕಹಾಕುತ್ತಾನೆ. ಕೈಯಲ್ಲಿ ತಟ್ಟುಗೋಲು ಹಿಡಿದು 'ಹಸೀ ಗಡಿಗೆಯೋ ಒಣ ಗಡಿಗೆಯೋ' ಎಂದು ಶರಣರನ್ನು ಪರೀಕ್ಷಿಸುವ ಪರೀಕ್ಷಕನಾಗುತ್ತಾನೆ. ಕರ್ಮಯೋಗಿಗಳಿಗೆ ಅವರವರ ಉದ್ಯೋಗದ ಭಾಷೆಯಿಂದಲೇ ಭವ್ಯಜ್ಞಾನ ಸಿಕ್ಕಿತು. ಅವರ ಕರ್ಮಗಳೇ ಅವರ ಆಧ್ಯಾತ್ಮ ಶಾಲೆಗಳು. ಅವರ ಕರ್ಮಗಳು ಉಪಾಸನಾಮಯವೂ ಸೇವಾಮಯವೂ ಆಗುತ್ತವೆ. ಈ ಕರ್ಮ ನೋಡಲಿಕ್ಕೆ ವ್ಯಾವಹಾರಿಕ, ಒಳಗೊಳಗೆ ಆಧ್ಯಾತ್ಮಿಕ.

ಕರ್ಮಯೋಗದಿಂದ ಮತ್ತೂ ಒಂದು ಉತ್ತಮ ಫಲವುಂಟು; ಸಮಾಜಕ್ಕೊಂದು ಆದರ್ಶ. ಸಮಾಜದಲ್ಲಿ ಮೊದಲು ಹುಟ್ಟಿದ್ದು, ಆಮೇಲೆ

ಹುಟ್ಟಿದ್ದು ಎಂಬ ಭೇದವಿದ್ದೇ ಇದೆ. ಮೊದಲು ಹುಟ್ಟಿದವರು ಆಮೇಲೆ ಹುಟ್ಟಿದವರಿಗೆ ದಾರಿ ಹಾಕಿಕೊಡುತ್ತಾರೆ. ಹಿರಿಯರು ಕಿರಿಯರಿಗೆ, ತಾಯಿ ತಂದೆ ಮಕ್ಕಳಿಗೆ, ಗುರುಗಳು ಶಿಷ್ಯರಿಗೆ, ನಾಯಕರು ಬೆಂಬಲಿಗರಿಗೆ ಕೃತಿಯಿಂದ ಮೇಲ್ಪಂಕ್ತಿ ಹಾಕಬೇಕು. ಅಂಥ ಮೇಲ್ಪಂಕ್ತಿಯನ್ನು ಕರ್ಮಯೋಗಿಯಲ್ಲದೆ ಮತ್ತಾರು ಹಾಕಬಲ್ಲರು ?

ಕರ್ಮಯೋಗಿಗೆ ಕರ್ಮದಲ್ಲೇ ಆನಂದ ಎಂತಲೇ ಅವನು ಸದಾ ಕರ್ಮನಿರತನಾಗಿರುತ್ತಾನೆ. ಅದರಿಂದ ಸಮಾಜದಲ್ಲಿ ದಂಭಾಚಾರ ಬೆಳೆಯದು. ಕರ್ಮಯೋಗಿ ಆತ್ಮತೃಪ್ತನಾದರೂ ಕರ್ಮಮಾಡದೆ ಇರಲಾರ. ತುಕಾರಾಮರು ಹೇಳುತ್ತಾರೆ 'ಭಜನೆಯಿಂದ ದೇವರು ಸಿಕ್ಕಿದನೆಂದು ಭಜನೆಯನ್ನು ಬಿಟ್ಟುಬಿಡಲೆ? ಭಜನೆ ನಮ್ಮ ಸಹಜ ಧರ್ಮ.'

ಮೊದಲಿಗಾಯ್ತು ಸಂತಸಂಗ । ತುಕಾ ಆದ ಪಾಂಡುರಂಗ ।
ಅವನ ಭಜನೆ ಬಿಡಲದೇಕೆ ? ಮೂಲಗುಣವ ತೊಡೆಯಲೇಕೆ ?*

ಕರ್ಮದ ಮೆಟ್ಟಲೇರಿ ಶಿಖರ ಮುಟ್ಟಿದುದಾಯಿತು. ಕರ್ಮಯೋಗಿ ಶಿಖರವೇರಿದರೂ ಏಣಿಯನ್ನು ಬಿಡ. ಅವನಿಗೆ ಅದನ್ನು ಬಿಡಲು ಸಾಧ್ಯವೇ ಇಲ್ಲ. ಅವನ ಇಂದ್ರಿಯಗಳು ಸಹಜವಾಗಿಯೇ ತಮ್ಮ ಕರ್ಮದಲ್ಲಿ ತೊಡಗಿಕೊಳ್ಳುತ್ತವೆ ಸ್ವಧರ್ಮ-ಕರ್ಮದ ಏಣಿಯ ಮಹತ್ವ ಸಮಾಜಕ್ಕೆ ರುಚಿಸುತ್ತದೆ.

ಸಮಾಜದಲ್ಲಿ ದಂಭಾಚಾರ ನಶಿಸುವುದು ಬಹಳ ದೊಡ್ಡ ಕೆಲಸ. ದಂಭದಿಂದ ಸಮಾಜ ಮುಳುಗುತ್ತದೆ. ಜ್ಞಾನಿಯೇ ಸುಮ್ಮನೆ ಇದ್ದರೆ ಉಳಿದವರೂ ಸುಮ್ಮನಿದ್ದಾರು. ಜ್ಞಾನಿ ನಿತ್ಯತೃಪ್ತ, ಅಂತಸ್ಸುಖಮಗ್ನ. ಆದ್ದರಿಂದ ಸುಮ್ಮನೆ ಇರಬಲ್ಲ. ಉಳಿದವರು ಮನಸ್ಸಿನೊಳಗೇ ಅಳುತ್ತ ಕರ್ಮಶೂನ್ಯರಾದಾರು. ಒಬ್ಬ ಅಂತಸ್ತೃಪ್ತನಾಗಿ ಸುಮ್ಮನಿದಾನೆ; ಇನ್ನೊಬ್ಬ ಮನಸ್ಸಿನಲ್ಲಿ ತಳಮಳಿಸುತ್ತ ಸುಮ್ಮನಿರುವವನಂತೆ ನಟಿಸುತ್ತಾನೆ, ಎಂದರೆ ದಂಭಾಚಾರಿಯಾಗುತ್ತಾನೆ. ಎಂತಲೇ ಎಲ್ಲ ಸಾಧುಶರಣರೂ

---

* ಆಧೀ ಹೋತಾ ಸಂತಸಂಗ — ತುಕಾ ಝಾಲಾ ಪಾಂಡುರಂಗ
ತ್ಯಾಚೇ ಭಜನ ರಾಹಿನಾ — ಮೂಳಸ್ವಭಾವ ಜಾಯಿನಾ

ಗೋಪುರವನ್ನು ಹತ್ತಿದಮೇಲೂ ಸಾಧನೆಯನ್ನು ಕೈಬಿಡಲಿಲ್ಲ; ತೀವ್ರವಾಗಿಯೆ ಸಾಧನಾನಿರತರಾಗಿದ್ದರು. ಸಾಯುವತನಕ ಸ್ವಧರ್ಮಾಚರಣೆಯಲ್ಲಿ ನಿರತರಾಗಿದ್ದರು. ಮಕ್ಕಳ ಗೊಂಬೆಯಾಟದಲ್ಲಿ ತಾಯಿ ಸವಿಗೊಳ್ಳುತ್ತಾಳೆ. ಇದೆಲ್ಲ ಹುಸಿಯೆಂದು ಅರಿತೂ ಆಕೆ ಮಕ್ಕಳಾಟದಲ್ಲಿ ಸವಿ ಹುಟ್ಟಿಸುತ್ತಾಳೆ. ತಾಯಿ ಆಟದಲ್ಲಿ ಸೇರದೆ ಮಕ್ಕಳಿಗೆ ಸವಿಯಿಲ್ಲ. ಕರ್ಮಯೋಗಿ ತೃಪ್ತನಾಗಿ ಕರ್ಮ ಬಿಟ್ಟರೆ ಉಳಿದವರು ಅತೃಪ್ತರಾಗಿಯೇ ಕರ್ಮ ಬಿಟ್ಟಾರು. ಮನಸ್ಸಿನಲ್ಲಿ ಆನಂದರಹಿತರೂ ನಿರಾಹಾರಿಗಳೂ ಆಗಿದ್ದಾರು.

ಅಂತೇ ಕರ್ಮಯೋಗಿ ಎಲ್ಲರಂತೆ ತಾನೂ ಕರ್ಮ ಮಾಡುತ್ತಿರುತ್ತಾನೆ. ತಾನು ಒಬ್ಬ ಹೆಚ್ಚುಗಾರ ಎಂದು ಅವನಿಗೆ ಅನಿಸದು. ಇತರರಿಗಿಂತ ಹೆಚ್ಚಾಗಿಯೇ ದುಡಿಯುತ್ತಾನೆ. ಇದು ಪಾರಮಾರ್ಥಿಕ ಕರ್ಮ ಎಂದು ಮುದ್ರೆಹೊತ್ತ ಕರ್ಮ ಯಾವುದೂ ಇಲ್ಲ. ಕರ್ಮಕ್ಕೆ ಯಾವ ಪ್ರಕಟಣೆಯೂ ಬೇಡ. ಉತ್ತಮ ಬ್ರಹ್ಮಚಾರಿಯಾದರೆ, ಇತರರಿಗಿಂತ ನಿನ್ನ ಕೃತಿಯಲ್ಲಿ ನೂರುಪಾಲು ಹೆಚ್ಚು ಉತ್ಸಾಹ ಕಾಣಬರಲಿ. ಆಹಾರ ಕಡಮೆ ಸಿಕ್ಕರೂ ಕೆಲಸ ಮುಪ್ಪಟ್ಟಾಗಲಿ. ಸಮಾಜಸೇವೆ ಹೆಚ್ಚು ಆಗಲಿ ನಿನ್ನಿಂದ. ನಿನ್ನ ಬ್ರಹ್ಮಚರ್ಯ ಕೃತಿಯಲ್ಲಿ ಕಾಣಲಿ. ಗಂಧದ ಸುಗಂಧ ಹೊರಗೆ ಹೊರಡಲಿ.

ಫಲತ್ಯಾಗಮಾಡಿದರೆ ಕರ್ಮಯೋಗಿಗೆ ಅನಂತ ಫಲ ಸಿಗುತ್ತದೆ. ಅವನ ಶರೀರಯಾತ್ರೆ ನಡೆದೀತು; ಮೈ ಮನಸ್ಸು ಸತೇಜವಾಗಿದ್ದಾವು; ಅವನಿರುವ ಸಮಾಜ ಸುಖಿಯಾದೀತು; ಅವನಿಗೆ ಚಿತ್ತಶುದ್ಧಿ ದೊರೆತು ಜ್ಞಾನವೂ ಲಭಿಸೀತು. ಸಮಾಜದ ದಂಭಾಚಾರ ನಶಿಸಿ ಜೀವನದ ಪವಿತ್ರ ಆದರ್ಶ ದೊರೆತೀತು. ಇದು ಕರ್ಮಯೋಗದ ಅನುಭವಸಿದ್ಧ ಮಹಿಮೆ.

## ೧೩. ಕರ್ಮಯೋಗ—ವ್ರತದಲ್ಲಿ ಅಂತರಾಯ

ಉಳಿದವರಿಗಿಂತ ಕರ್ಮಯೋಗಿಯ ಕರ್ಮ ಉತ್ಕೃಷ್ಟವಾಗಿರುತ್ತದೆ. ಕರ್ಮವೇ ಉಪಾಸನೆ; ಕರ್ಮವೇ ಪೂಜೆ. ನಾನು ದೇವರ ಪೂಜೆ ಮಾಡಿದೆ, ನೈವೇದ್ಯವನ್ನೂ ಪ್ರಸಾದವನ್ನೂ ತೆಗೆದುಕೊಂಡೆ. ಆ ನೈವೇದ್ಯವೇ ಪೂಜೆಯ ಫಲವೆ? ನೈವೇದ್ಯಕ್ಕಾಗಿಯೇ ಪೂಜೆಮಾಡುವವನಿಗೆ ಒಡನೆಯೇ ಪ್ರಸಾದದ ಚೂರು ಸಿಗುತ್ತದೆ. ಕರ್ಮಯೋಗಿ ತಾ ಮಾಡಿದ ಪೂಜೆಗೆ

ಪರಮೇಶ್ವರ ದರ್ಶನವನ್ನೇ ಫಲವಾಗಿ ಬೇಡುತ್ತಾನೆ. ತಿನ್ನಲಿಕ್ಕೆ ಪ್ರಸಾದ ಬೇಕು ಎಂಬ ಕ್ಷುದ್ರ ಲಾಭದ ಮಾತೇ ಅವನಿಗೆ ಹೊಳೆಯದು. ತನ್ನ ಕರ್ಮದ ಬೆಲೆಯನ್ನು ತಗ್ಗಿಸಲು ಅವನು ಸಿದ್ಧನಲ್ಲ. ಸ್ಥೂಲ ಪ್ರಮಾಣ ದಿಂದ ತನ್ನ ಕರ್ಮವನ್ನು ಅಳೆಯ. ಸ್ಥೂಲದೃಷ್ಟಿಯವರಿಗೆ ಸ್ಥೂಲ ಫಲ. ಹಳ್ಳಿಗರಲ್ಲಿ ಒಂದು ಗಾದೆಯಿದೆ—ಆಳವಾಗಿ ಬಿತ್ತು, ತೇವದಲ್ಲಿ ಬಿತ್ತು. ತೇವವಿಲ್ಲದಲ್ಲಿ ಎಷ್ಟು ಆಳ ಬಿತ್ತಿದರೇನು ? ಆಳವೂ ಬೇಕು, ತೇವವೂ ಬೇಕು. ಎರಡೂ ಇದ್ದರೆ ತೆನೆ ಮುಂಗೈಯ ದಪ್ಪವಾದೀತು. ಕರ್ಮ ಆಳವಾಗ ಬೇಕು ಎಂದರೆ ಉತ್ಕೃಷ್ಟವಾಗಬೇಕು. ಅದಕ್ಕೆ ಈಶ್ವರ ಭಕ್ತಿ, ಈಶ್ವರಾ ರ್ಪಣೆಯ ತೇವವೂ ಬೇಕು. ಕರ್ಮಯೋಗಿ ಆಳವಾದ ಕರ್ಮ ಮಾಡಿ ಅದನ್ನೆಲ್ಲ ಈಶ್ವರಾರ್ಪಣೆ ಮಾಡುತ್ತಾನೆ.

ನಮ್ಮಲ್ಲಿ ಪರಮಾರ್ಥದ ಬಗ್ಗೆ ಹುಚ್ಚುಭಾವನೆ ಹರಡಿವೆ. ಪರಮಾರ್ಥ ಸಾಧಕ ಕೈಕಾಲು ಆಡಿಸಬಾರದು, ಏನೂ ಕೆಲಸ ಮಾಡಬಾರದು ಎಂದು ಲೋಕ ತಿಳಿಯುತ್ತದೆ. ನೂಲು ತೆಗೆವವನು, ಬಟ್ಟೆ ನೇಯುವವನು ಹೊಲ ಉಳುವವನು ಎಂಥ ಪರಮಾರ್ಥಿ ಎಂದು ಕೇಳುತ್ತದೆ. ಊಟ ಮಾಡುವವನು ಹೇಗೆ ಪರಮಾರ್ಥಿ ಎಂದು ಮಾತ್ರ ಯಾವಾಗಲೂ ಕೇಳದು. ಕರ್ಮಯೋಗಿಯ ದೇವರೇನೋ ಮೈ ತಿಕ್ಕುತ್ತ ನಿಂತಿದಾನೆ. ರಾಜಸೂಯ ಯಾಗದಲ್ಲಿ ಕೈಯಲ್ಲಿ ಸಗಣಿ ಹಿಡಿದು ಎಂಜಲು ಬಳಿದಿದಾನೆ. ಕಾಡಿನಲ್ಲಿ ದನಗಳನ್ನು ಮೇಯಿಸುತ್ತಾನೆ. ದ್ವಾರಕೆಯ ದೊರೆಯಾದರೂ ಗೋಕುಲಕ್ಕೆ ಹೋದರೆ ಕೊಳಲನೂದುತ್ತ ದನಗಳನ್ನು ಮೇಯಿಸುತ್ತಾನೆ. ಹೀಗೆ ಕುದುರೆ ತಿಕ್ಕುವ, ದನ ಕಾಯುವ, ರಥ ಹೊಡೆವ, ಸಗಣಿ ಬಳಿವ, ಕರ್ಮಯೋಗಿ-ಪರಮೇಶ್ವರನನ್ನು ಶರಣರು ತಂದು ನಿಲ್ಲಿಸಿದಾರೆ. ಶರಣರೂ ಅಷ್ಟೆ—ಒಬ್ಬ ತಕ್ಕಡಿ ಹಿಡಿದ, ಒಬ್ಬ ಕ್ಷೌರಮಾಡಿದ—ಹೀಗೆ ಮುಕ್ತರಾಗಿದಾರೆ.

ಇಂಥ ದಿವ್ಯ ಕರ್ಮಯೋಗದಿಂದ ಎರಡು ಕಾರಣಗಳಿಗೆ ಮನುಷ್ಯ ಹಿಂಜರಿಯುತ್ತಾನೆ. ಇಂದ್ರಿಯಗಳ ವಿಶಿಷ್ಟ ಸ್ವಭಾವ ಲಕ್ಷ್ಯದಲ್ಲಿರಬೇಕು. ಇದು ಬೇಕು ಅದು ಬೇಡ ಎಂಬ ದ್ವಂದ್ವ ಇಂದ್ರಿಯಗಳನ್ನು ಸುತ್ತುವರಿದಿದೆ. ಯಾವುದು ಬೇಕೋ ಅದರಲ್ಲಿ ರಾಗ ಅಥವಾ ಪ್ರೀತಿ ; ಯಾವುದು ಬೇಡವೋ ಅದರಲ್ಲಿ ದ್ವೇಷ ಅಥವಾ ಅಸಹ್ಯ. ಈ ರಾಗದ್ವೇಷ ಮನುಷ್ಯನನ್ನು ಹರಿದು

ತಿನ್ನುತ್ತದೆ. ಕರ್ಮಯೋಗ ಎಷ್ಟು ಸುಂದರ. ಎಷ್ಟು ರಮಣೀಯ, ಎಷ್ಟು ಅನಂತಫಲಪ್ರದಾಯಿ! ಆದರೆ ಈ ಕಾಮ ಕ್ರೋಧ ನಮ್ಮನ್ನು 'ಇದು ಹಿಡಿ, ಅದು ಬಿಡು' ಎಂಬ ಗೊಂದಲದಲ್ಲಿ ಸಿಕ್ಕಿಸಿ ಹಗಲಿರುಳೂ ಬೆನ್ನು ಹತ್ತುತ್ತದೆ. ಇದರ ಸಹವಾಸವನ್ನೇ ಬಿಡು ಎಂದು ಭಗವಂತ ಈ ಅಧ್ಯಾಯದ ಕೊನೆಯಲ್ಲಿ ಎಚ್ಚರಿಕೆ ಕೊಡುತ್ತಾನೆ. ಸ್ಥಿತಪ್ರಜ್ಞನು ಸಂಯಮಮೂರ್ತಿ ಹೇಗೋ ಹಾಗೇ ಕರ್ಮಯೋಗಿಯೂ ಆಗಬೇಕು.

ಭಾನುವಾರ.
೧೩-೩-೧೯೩೨.

## ೧೪. ಕರ್ಮಕ್ಕೆ ವಿಕರ್ಮ ಜೊತೆಯಾಗಬೇಕು

ಹಿಂದಿನ ಅಧ್ಯಾಯದಲ್ಲಿ ನಿಷ್ಕಾಮಕರ್ಮದ ವಿವೇಚನೆ ಮಾಡಿದೆವು. ಸ್ವಧರ್ಮವನ್ನು ಬಿಟ್ಟು ಅವಾಂತರ ಧರ್ಮವನ್ನು ಹಿಡಿದರೆ ನಿಷ್ಕಾಮ ಫಲ ಸಾಧ್ಯವಲ್ಲ. ಸ್ವದೇಶೀ ವಸ್ತುಗಳನ್ನು ಮಾರುವುದು ವ್ಯಾಪಾರದ ಸ್ವಧರ್ಮ. ಈ ಸ್ವದೇಶೀ ಧರ್ಮವನ್ನು ಬಿಟ್ಟು ೭,೦೦೦ ಮೈಲು ದೂರದ ವಿದೇಶೀ ಸಾಮಾನನ್ನು ಮಾರುವಾಗ ಹೆಚ್ಚು ಲಾಭ ಬರುತ್ತದೆಂಬ ಮಾತು ಮನಸ್ಸಿನಲ್ಲಿರುತ್ತದೆ. ಅದರಲ್ಲಿ ನಿಷ್ಕಾಮ ಹೇಗೆ ಬಂದೀತು? ನಾವು ಮಾಡುವ ಕರ್ಮ ನಿಷ್ಕಾಮವಾಗಲು ಸ್ವಧರ್ಮದ ಆಚರಣೆ ಅಗತ್ಯ. ಸ್ವಧರ್ಮಾಚರಣೆ ಸಕಾಮವೂ ಆಗಬಲ್ಲದು. ಅಹಿಂಸೆಯನ್ನೇ ನೋಡಿ. ಅಹಿಂಸೋಪಾಸಕನಿಗೆ ಹಿಂಸೆ ವರ್ಜ್ಯವೆ ತಾನೆ. ಆದರೆ ಹೊರಗಡೆ ಅಹಿಂಸಕನಾಗಿದ್ದರೂ ವಾಸ್ತವವಾಗಿ ಹಿಂಸಾಮಯನಾಗಿರಬಲ್ಲ. ಹಿಂಸೆ ಮನಸ್ಸಿನ ಗುಣ. ಹೊರಗೆ ಹಿಂಸಾ ಕರ್ಮ ಮಾಡದ ಮಾತ್ರಕ್ಕೆ ಮನಸ್ಸು ಅಹಿಂಸಕವಾಗದು. ಕತ್ತಿ ಹಿಡಿದರೆ ಹಿಂಸಾವೃತ್ತಿ ಸ್ಪಷ್ಟವಾಗಿ ಕಾಣುತ್ತದೆ. ಕತ್ತಿ ಬಿಟ್ಟರೆ ಅದು ಅಹಿಂಸೆ ಎನ್ನಲಾಗದು. ಸ್ವಧರ್ಮಾಚರಣೆಯ ಗುಟ್ಟು ಇದೇ. ನಿಷ್ಕಾಮಕ್ಕಾಗಿ ಪರಧರ್ಮವನ್ನು ಬಿಡಲೇಬೇಕು. ಬಿಟ್ಟರೆ ನಿಷ್ಕಾಮಕ್ಕೆ ಗಣೇಶಾಯ ನಮಃ ಆದಂತೆ. ಅದರಿಂದಲೇ ಗುರಿ ಮುಟ್ಟಿದಂತಾಗಲಿಲ್ಲ.

ನಿಷ್ಕಾಮತೆ ಮನಸ್ಸಿನ ಧರ್ಮ. ಈ ಗುಣ ಮನಸ್ಸಿನಲ್ಲಿ ಅರಳಲು ಬರೀ ಸ್ವಧರ್ಮಾಚರಣೆ ಸಾಲದು. ಉಳಿದ ಸಾಧನೆಗಳನ್ನೂ ಮಾಡಬೇಕಾದೀತು. ಬರೀ ಎಣ್ಣೆ ಹಾಕಿದ ಮಾತ್ರಕ್ಕೆ ದೀಪ ಉರಿಯುತ್ತದೆಯೆ? ಬೆಂಕಿಯೂ ಬೇಕು, ಬೆಳಕೂ ಬೇಕು; ಬೆಳಕು ಇದ್ದರೇನೆ ಕತ್ತಲು ಅಳಿದೀತು. ಸ್ವಧರ್ಮಾಚರಣೆಯ ಎಣ್ಣೆಗೂ ಬೆಳಕು ಬೇಕು. ಹೇಗೆ ಹೊತ್ತಿಸಬೇಕು ಈ ಬೆಳಕನ್ನು? ಇದಕ್ಕೆ ಮಾನಸಿಕ ಸಂಶೋಧನೆ ಬೇಕು. ಆತ್ಮ ಪರೀಕ್ಷೆಮಾಡಿ ಚಿತ್ತಕ್ಕೆ ಹತ್ತಿದ ಹೊಲಸನ್ನು ತೊಳೆಯಬೇಕು. ಮೂರನೆಯ ಅಧ್ಯಾಯದ ಕೊನೆಯಲ್ಲಿ ಇದೇ ಮುಖ್ಯ ಸೂಚನೆಯನ್ನು ಕೊಟ್ಟಿದಾನೆ ದೇವರು. ಆ ಸೂಚನೆಯಿಂದ ಹುಟ್ಟಿದ್ದು ನಾಲ್ಕನೆಯ ಅಧ್ಯಾಯ.

ಕರ್ಮ ಎಂದರೆ ಗೀತೆಯಲ್ಲಿ ಸ್ವಧರ್ಮ ಎಂದರ್ಥ. ನಾವು ತಿನ್ನು ತ್ತೇವೆ, ಕುಡಿಯುತ್ತೇವೆ, ಮಲಗುತ್ತೇವೆ; ಇದೆಲ್ಲವೂ ಕರ್ಮವೇ. ಆದರೆ ಇವನ್ನು ಗೀತೆಯಲ್ಲಿ ಕರ್ಮವೆಂದಿಲ್ಲ. ಸ್ವಧರ್ಮಾಚರಣೆಯೇ ಕರ್ಮ. ಅದನ್ನು ಮಾಡಿ ಮಡಿಲಲ್ಲಿ ನಿಷ್ಕಾಮ ತುಂಬಿಕೊಳ್ಳಬೇಕಾದರೆ ಇನ್ನೊಂದು ಹಿರಿಯ ನೆರವು ಬೇಕು; ಕಾಮಕ್ರೋಧಗಳನ್ನು ಗೆಲ್ಲುವುದು. ಗಂಗಾ ಪ್ರವಾಹದಂತೆ ಚಿತ್ತವು ಶಾಂತವೂ ನಿರ್ಮಲವೂ ಆಗದೆ ನಿಷ್ಕಾಮವಿಲ್ಲ. ಚಿತ್ತಸಂಶೋಧನೆಗಾಗಿ ಮಾಡಬೇಕಾದ ಕರ್ಮಕ್ಕೆ ಗೀತೆ ವಿಕರ್ಮ ಎಂದು ಹೆಸರು ಕೊಟ್ಟಿದೆ. ಕರ್ಮ, ವಿಕರ್ಮ, ಅಕರ್ಮ—ಈ ಮೂರು ಶಬ್ದಗಳು ನಾಲ್ಕನೆಯ ಅಧ್ಯಾಯದಲ್ಲಿ ಬಹಳ ಮುಖ್ಯವಾದುವು. ಕರ್ಮವೆಂದರೆ ಸ್ವಧರ್ಮಾಚರಣೆಯ ಹೊರಗಿನ ಸ್ಥೂಲಕ್ರಿಯೆ: ಈ ಹೊರಗಿನ ಕರ್ಮದಲ್ಲಿ ಮನಸ್ಸನ್ನು ತುಂಬುವುದು ವಿಕರ್ಮ. ಹೊರಗಿನಿಂದ ನಾವು ನಮಸ್ಕಾರ ಮಾಡುತ್ತೇವೆ. ಹೊರಗೆ ತಲೆಬಾಗಿದುದಕ್ಕೆ ಜೊತೆಯಾಗಿ ಒಳಗೆ ಮನಸ್ಸು ಬಾಗದಿದ್ದರೆ ಆ ಕ್ರಿಯೆ ವ್ಯರ್ಥವಾದಂತೆ ಕ್ರಿಯೆ ಎರಡು ಬಗೆ. ಅಂತರ್-ಬಾಹ್ಯ ಕರ್ಮವಾಗಬೇಕು. ಹೊರಗೆ ನಾನು ಶಿವಲಿಂಗದ ಮೇಲೆ ಸತತ ಧಾರೆ ಎರೆದು ಅಭಿಷೇಕ ಮಾಡುತ್ತೇನೆ. ಇದರ ಜೊತೆಗೆ ಮನಸ್ಸಿನಲ್ಲಿ ಶಿವಚಿಂತನೆಯ ಅಖಂಡ ಧಾರೆ ಹರಿಯದಿದ್ದರೆ ಈ ಅಭಿಷೇಕಕ್ಕೆ ಏನು ಬೆಲೆ? ಇದಿರಿನ ಲಿಂಗವೂ ಕಲ್ಲು, ನಾನೂ ಕಲ್ಲು. ಕಲ್ಲಿನಿದಿರಿಗೆ ಕಲ್ಲು ಕೂತಂತೆ. ಹೊರಗಿನ ಕರ್ಮಕ್ಕೆ ಚಿತ್ತಶುದ್ಧಿಯ ಕರ್ಮ ಜೊತೆಯಾದಾಗಲೇ ನಿಷ್ಕಾಮ ಕರ್ಮಯೋಗ.

'ನಿಷ್ಕಾಮ ಕರ್ಮ' ಶಬ್ದಪ್ರಯೋಗದಲ್ಲಿ ಕರ್ಮಕ್ಕಿಂತಲೂ ನಿಷ್ಕಾಮ ಶಬ್ದಕ್ಕೇ ಹೆಚ್ಚು ಮಹತ್ವ. 'ಅಹಿಂಸಾತ್ಮಕ ಅಸಹಕಾರ' ದಲ್ಲಿ ಅಸಹಕಾರ ಕ್ಕಿಂತ ಅಹಿಂಸಾತ್ಮಕ ಎಂಬುದೇ ಮುಖ್ಯ. ಆದರಲ್ಲಿ ಅಹಿಂಸಾತ್ಮಕ ಎಂಬುದನ್ನು ಕಳೆದು ಬರೀ ಅಸಹಕಾರವನ್ನು ಹಿಡಿದರೆ ಅದು ಭಯಾನಕ ವಾದೀತು, ಹೀಗೆಯೇ ಸ್ವಧರ್ಮಾಚರಣೆಯ ಕರ್ಮ ಮಾಡುವಾಗ ಮನಸ್ಸಿನಲ್ಲಿ ವಿಕರ್ಮವಿರದಿದ್ದರೆ ಅದು ಮೋಸ.

ಇಂದು ಸಾರ್ವಜನಿಕ ಸೇವೆ ಮಾಡುವವರು ಸ್ವಧರ್ಮವನ್ನೇ ಆಚರಿಸುತ್ತಿದ್ದಾರೆ. ಜನ ಬಡವರೂ ದುಃಖಿಗಳೂ ಆಗಿರುವಾಗ ಅವರ

ಸೇವೆ ಮಾಡಿ ಅವರಿಗೆ ಸುಖ ತರುವುದು ಓಘಪ್ರಾಪ್ತ ಧರ್ಮ. ಹಾಗೆಂದರೆ ಸಾರ್ವಜನಿಕ ಸೇವಕರೆಲ್ಲ ಕರ್ಮಯೋಗಿಗಳೆನ್ನಲಾಗದು. ಲೋಕಸೇವೆ ಮಾಡುವವನ ಮನಸ್ಸಿನಲ್ಲಿ ಶುದ್ಧ ಭಾವನೆಯಿಲ್ಲದಿದ್ದರೆ ಆ ಸೇವೆ ಭಯಾನಕ ವಾದೀತು. ನಮ್ಮ ಕುಟುಂಬಸೇವೆ ಮಾಡುವಾಗ ನಾವು ಎಷ್ಟು ಗರ್ವ, ಎಷ್ಟು ದ್ವೇಷ ಮತ್ಸರ, ಎಷ್ಟು ಸ್ವಾರ್ಥ ಕಟ್ಟಿಕೊಳ್ಳುತ್ತೇವೋ ಲೋಕಸೇವೆ ಯಲ್ಲೂ ಅಷ್ಟೇ ಇದೆ. ಇವೊತ್ತು ಲೋಕಸೇವಕರ ಗುಂಪಿನಲ್ಲಿ ಇದೇ ಕಾಣುತ್ತದೆ.

## ೧೫. ಉಭಯ ಸಂಯೋಗದಿಂದ ಅಕರ್ಮಸ್ಫೋಟ

ಕರ್ಮಕ್ಕೆ ಮನಸ್ಸನ್ನು ಜೊತೆಮಾಡಬೇಕು. ಈ ಮನಸ್ಸಿನ ಮೇಳನ ವನ್ನು ಗೀತೆ ವಿಕರ್ಮವೆನ್ನುತ್ತದೆ. ಹೊರಗೆ ಸಾದಾ ಕರ್ಮ. ಒಳಗೆ ಈ ವಿಶೇಷ ಕರ್ಮ. ಅವರವರ ಮನಸ್ಸಿನ ಅಗತ್ಯದಂತೆ ಈ ವಿಶೇಷ ಕರ್ಮ ಬೇರೆ ಬೇರೆ ಇರುತ್ತದೆ. ವಿಕರ್ಮದ ಇಂಥ ನಾನಾ ಪ್ರಕಾರಗಳನ್ನು ಉದಾಹರಣೆಗಾಗಿ ನಾಲ್ಕನೇ ಅಧ್ಯಾಯದಲ್ಲಿ ಹೇಳಿದೆ. ಆರನೇ ಅಧ್ಯಾಯದಲ್ಲಿ ಇದನ್ನೇ ವಿಸ್ತರಿಸಲಾಗಿದೆ. ಈ ವಿಶೇಷ ಕರ್ಮವನ್ನು, ಈ ಮನಸ್ಸಿನ ಅನುಸಂಧಾನವನ್ನು ಜೋಡಿಸಿದಾಗ ನಿಷ್ಕಾಮದ ಕುಡಿ ಬೆಳಗುತ್ತದೆ. ಕರ್ಮ ವಿಕರ್ಮಗಳು ಕೂಡಿದರೆ ಮೆಲ್ಲಮೆಲ್ಲನೆ ನಿಷ್ಕಾಮವೃತ್ತಿ ಒಳಗೆ ಮೂಡುತ್ತದೆ. ಮೈ ಮನಸ್ಸು ಬೇರೆ ಬೇರೆ ವಸ್ತುಗಳಾಗಿದ್ದರೆ ಅವುಗಳ ಸಾಧನಕ್ರಮ ಬೇರೆ ಬೇರೆ ಆಗುತ್ತಿತ್ತು. ಎರಡೂ ಒಟ್ಟುಗೂಡಿದರೆ ಗುರಿ ಕೈಗೂಡುತ್ತದೆ. ಮನ ಒತ್ತಟ್ಟಿಗೆ, ಮೈ ಬೇರೆ ಕಡೆ ಆಗಬಾರದೆಂದೇ ಶಾಸ್ತ್ರಕಾರರು ದ್ವಿಮುಖ ಮಾರ್ಗವನ್ನು ಸೂಚಿಸಿದಾರೆ. ಭಕ್ತಿಯೋಗದಲ್ಲಿ ಹೊರಗೆ ತಪಸ್ಸನ್ನು ಹೇಳಿದರೆ ಒಳಗೆ ಜಪವನ್ನು ಸೂಚಿಸಿದಾರೆ. ಹೊರಗೆ ಉಪವಾಸಾದಿ ತಪಸ್ಸು ನಡೆದಾಗ ಒಳಗೆ ಜಪಾದಿ ಕ್ರಿಯೆ ನಡೆಯದಿದ್ದರೆ ಎಲ್ಲವೂ ವ್ಯರ್ಥವಾಗುತ್ತದೆ. ತಪಸ್ಸನ್ನು ಪ್ರೇರಿಸಿದ ಭಾವನೆ ಒಳಗೆಲ್ಲ ತುಂಬಿಕೊಂಡಿರಬೇಕು. ಉಪವಾಸವೆಂದರೇನೇ ದೇವರ ಇದಿರಿಗೆ ಕೂಡು ವುದು. ಪರಮೇಶ್ವರನಲ್ಲಿ ಚಿತ್ತವಿರಲಿ ಎಂದು ಹೊರಗಣ ಭೋಗದ

ಬಾಗಿಲನ್ನು ಮುಚ್ಚಬೇಕು. ಹೊರಗಣ ಭೋಗವನ್ನು ನಿಲ್ಲಿಸಿ ಒಳಗೆ ಮನಸ್ಸಿನಲ್ಲಿ ದೈವಚಿಂತನವಿಲ್ಲದಿದ್ದರೆ ಈ ಹೊರಗಣ ಉಪವಾಸಕ್ಕೆ ಏನು ಬೆಲೆ? ಈಶ್ವರಚಿಂತನೆ ಮಾಡದೆ ಮನಸ್ಸಿನಲ್ಲಿ ತಿಂಡಿಯ ಚಿಂತೆ ನಡೆಸಿದರೆ ಭಾರಿ ಸಂತರ್ಪಣೆಯೇ ಆದಂತೆ. ಮನಸ್ಸಿನೊಳಗೇ ನಡೆದ ಈ ಊಟಕ್ಕಿಂತ, ಈ ವಿಷಯಚಿಂತನೆಗಿಂತ ಭಯಂಕರ ವಸ್ತು ಮತ್ತೊಂದಿಲ್ಲ. ತಂತ್ರದೊಡನೆ ಮಂತ್ರವೂ ಬೇಕು. ಬರೀ ಹೊರಗಣ ತಂತ್ರಕ್ಕೆ ಬೆಲೆಯಿಲ್ಲ. ಕೇವಲ ಕರ್ಮಹೀನ ಮಂತ್ರಕ್ಕೂ ಬೆಲೆಯಿಲ್ಲ. ಕ್ರಿಯೆಯಲ್ಲೂ ಸೇವೆ, ಹೃದಯ ದಲ್ಲೂ ಸೇವೆ ಬೇಕು. ಆಗಲೇ ಕ್ರಿಯೆಯಲ್ಲಿ ನಿಜವಾದ ಸೇವೆಯಾದೀತು.

ಹೃದಯದೊಳಗಿನ ಸ್ಫೂರ್ತಿರಸಬಾಹ್ಯಾಚರಣೆಯಲ್ಲಿ ಹರಿದು ಬಾರ ದಿದ್ದರೆ ಸ್ವಧರ್ಮಾಚರಣೆ ಶುಷ್ಕವಾದೀತು. ಅದು ನಿಷ್ಕಾಮದ ಹಣ್ಣು ಹೂ ಬಿಡಲಿಕ್ಕಿಲ್ಲ. ನಾವು ರೋಗಿಗಳ ಆರೈಕೆ ಮಾಡಬಹುದು. ಅದರಲ್ಲಿ ಮೆದುವಾದ ಕನಿಕರ ಭಾವವಿರದಿದ್ದರೆ ಆ ಆರೈಕೆ ನೀರಸವೂ ಬೇಸರದ್ದೂ ಆಗುತ್ತದೆ. ಅದೊಂದು ಭಾರವೆ ಆಗುತ್ತದೆ. ರೋಗಿಗೂ ಆ ಸೇವೆ ಭಾರವಾದೀತು. ಶುಶ್ರೂಷೆಯಲ್ಲಿ ಮನಸ್ಸಿನ ಸಹಕಾರವಿರದಿದ್ದರೆ ಅದರಿಂದ ಅಹಂಕಾರ ಹುಟ್ಟೀತು. ಇವೊತ್ತು ನಾನು ಅವನಿಗೆ ಆಗಿದ್ದೇನೆ. ನಾಳೆ ನನಗೆ ಅವನು ಆಗಲಿ, ಅವನು ನನ್ನ ಸ್ತುತಿಮಾಡಲಿ ಎಂಬ ಯೋಚನೆ ಹುಟ್ಟಿಯಾವು. ಇಷ್ಟು ಸೇವೆ ಮಾಡಿದರೂ ಈ ರೋಗಿ ಸಿಡಿಮಿಡಿ ಗೊಳ್ಳುತ್ತಾನೆಂದು ನಮಗೆ ತ್ರಾಸಾದೀತು. ರೋಗಿಗೆ ಸಹಜವಾಗಿಯೇ ಸಿಡಿಮಿಡಿ. ಮನಸ್ಸಿನಲ್ಲಿ ಸೇವಾ ಭಾವನೆ ಇಲ್ಲದವನಿಗೆ ಆ ಸಿಡಿಮಿಡಿ ಬೇಸರವಾದೀತು.

ಕರ್ಮಕ್ಕೆ ಅಂತರಂಗ ಮೇಳವಿಸಿದರೆ ಆ ಕರ್ಮ ವಿಶಿಷ್ಟವಾಗುತ್ತದೆ. ಎಣ್ಣೆ ಬತ್ತಿಗಳ ಜೊತೆಗೆ ಜ್ಯೋತಿ ಸೇರಿದರೆ ಬೆಳಕಾದೀತು. ಕರ್ಮಕ್ಕೆ ವಿಕರ್ಮ ಜೊತೆಯಾದರೆ ನಿಷ್ಕಾಮ ಬರುತ್ತದೆ. ಸಿಡಿಮದ್ದಿಗೆ ಬೆಂಕಿ ಯಿಟ್ಟರೆ ಅದು ಸ್ಫೋಟವಾಗುತ್ತದೆ. ಅದರಲ್ಲಿ ಶಕ್ತಿ ನಿರ್ಮಾಣವಾಗುತ್ತದೆ. ಕರ್ಮ ಬಂದೂಕಿನ ಸಿಡಿಮದ್ದಿನಂತೆ. ಅದಕ್ಕೆ ವಿಕರ್ಮದ ಬೆಂಕಿ ಹತ್ತಿತೋ ಕೆಲಸವಾಗುತ್ತದೆ. ವಿಕರ್ಮ ಜೊತೆಗೂಡದಿರುವತನಕ ಕರ್ಮ

ಬರೀ ಜಡ; ಅದರಲ್ಲಿ ಚೇತನವಿಲ್ಲ ಒಮ್ಮೆ ವಿಕರ್ಮದ ಕಿಡಿ ಅದರಲ್ಲಿ ಬಿದ್ದರೆ ಆ ಕರ್ಮದಲ್ಲಿ ಹುಟ್ಟಿಬರುವ ಸಾಮರ್ಥ್ಯ ಅವರ್ಣನೀಯ. ಹಿಡಿ ಮದ್ದು ಕಿಸೆಯಲ್ಲಿದ್ದೀತು, ಆಡಲು ಬಂದೀತು. ಕೊಂಚ ಬೆಂಕಿ ತಗುಲಿತೋ ಶರೀರ ಛಿದ್ರಛಿದ್ರವಾದೀತು.

ಸ್ವಧರ್ಮಾಚರಣೆಯಲ್ಲಿ ಅನಂತ ಸಾಮರ್ಥ್ಯ ಗುಪ್ತವಾಗಿರುತ್ತದೆ. ಅದಕ್ಕೆ ವಿಕರ್ಮವನ್ನು ಜೋಡಿಸಿ ನೋಡು. ಎಂಥ ಕ್ರಾಂತಿಯಾಗುತ್ತದೋ! ಅಹಂಕಾರ ಕಾಮಕ್ರೋಧಗಳನ್ನು ಈ ಸ್ಫೋಟನ ನಿರ್ನಾಮ ಮಾಡುತ್ತದೆ: ಪರಮ ಜ್ಞಾನದ ನಿಷ್ಪತ್ತಿಯಾಗುತ್ತದೆ.

ಕರ್ಮ ಜ್ಞಾನಕ್ಕೆ ಉರವಲಿದ್ದಂತೆ. ಸುಮ್ಮನೆ ಒಂದು ಕಟ್ಟಿಗೆ ಬಿದ್ದಿರುತ್ತದೆ. ಅದನ್ನು ಹೊತ್ತಿಸಿ, ಅದು ಧಗಧಗ ಉರಿಯುತ್ತದೆ. ಆ ಕಟ್ಟಿಗೆ, ಈ ಬೆಂಕಿ—ಎಷ್ಟು ಭೇದ! ಆ ಕಟ್ಟಿಗೆಯದೇ ತಾನೆ ಈ ಬೆಂಕಿ. ಕರ್ಮದಲ್ಲಿ ವಿಕರ್ಮವನ್ನು ತುಂಬಿದರೆ ಆ ಕರ್ಮ ದಿವ್ಯವಾಗಿ ಕಾಣುತ್ತದೆ. ತಾಯಿ ಮಗನ ಬೆನ್ನನ್ನು ಸವರುತ್ತಾಳೆ. ಒಂದು ಕೈ ಒಂದು ಬೆನ್ನು ಸವರಿದರೆ ಅದರಲ್ಲೇನಿದೆ? ಆದರೆ ಈ ಸಾಮಾನ್ಯ ಕರ್ಮದಿಂದ ಆ ತಾಯಿ ಮಕ್ಕಳ ಮನಸ್ಸಿನಲ್ಲಿದ್ದ ಭಾವನೆಯನ್ನು ಬಣ್ಣಿಸಬಲ್ಲವರಾರು? ಇಷ್ಟು ಅಡ್ಡಗಲದ ಬೆನ್ನಿನ ಮೇಲೆ ಇಷ್ಟು ಭಾರದ ನುಣುಪು ಕೈ ಆಡಿಸಿದರೆ ಆನಂದವಾಗುತ್ತದೆ ಎಂದು ಯಾರಾದರೂ ಸಮೀಕರಣ ಮಾಡಿದರೆ ನಗೆಗೀಡಾದೀತು. ಕೈಯಾಡಿಸುವ ಈ ಕ್ರಿಯೆ ತೀರಾ ಕ್ಷುದ್ರ. ಆದರೆ ಆ ಕ್ರಿಯೆಯಲ್ಲಿ ತಾಯಿಯ ಹೃದಯ ತುಂಬಿ ತುಳುಕಿದೆ. ಅಲ್ಲಿ ವಿಕರ್ಮ ತುಂಬಿದೆ. ಅದರಿಂದ ಅಪೂರ್ವ ಆನಂದ ಸಿಗುತ್ತದೆ. ತುಲಸೀ ರಾಮಾಯಣದಲ್ಲಿ ಒಂದು ಸಂಗತಿಯಿದೆ. ರಾಕ್ಷಸರೊಡನೆ ಯುದ್ಧಮಾಡಿ ಬರುತ್ತಾರೆ ವಾನರರು. ಅವರಿಗೆ ಗಾಯಗಳಾಗಿವೆ, ಮೈಯಲ್ಲಿ ನೆತ್ತರು ಸುರಿಯುತ್ತಿದೆ. ಪ್ರಭು ರಾಮಚಂದ್ರ ಅವರ ಕಡೆ ಒಮ್ಮೆ ಪ್ರೇಮದೃಷ್ಟಿ ಬೀರಿದನೋ ಇಲ್ಲವೋ ಅವರ ನೋವು ಮಾಯವಾಯಿತು. ಆಗ ರಾಮಚಂದ್ರ ಹೇಗೆ ಕಣ್ಣು ಅರಳಿಸಿದ್ದನೋ ಅದೇ ರೀತಿ ಯಾರಾದರೂ ನಕಲುಮಾಡಿ ಕಣ್ಣು ಅರಳಿಸಿದ್ದರೆ ಅದೇ ಪರಿಣಾಮವಾಗುತ್ತಿತ್ತೆ? ಆ ಪ್ರಯತ್ನ ಹಾಸ್ಯಾಸ್ಪದ.

ಕರ್ಮಕ್ಕೆ ವಿಕರ್ಮ ಜೊತೆಯಾದರೆ ಅದರಲ್ಲಿ ಶಕ್ತಿಸ್ಫೋಟನವಾಗು ತ್ತದೆ, ಅಕರ್ಮ ನಿರ್ಮಾಣವಾಗುತ್ತದೆ. ಸುಟ್ಟರೆ ಕಟ್ಟಿಗೆ ಬೂದಿ ಯಾಗುತ್ತದೆ. ಭಾರಿ ಕೊರಡೆಲ್ಲ ಒಂದು ಹಿಡಿ ನಿರುಪದ್ರವಿ ಬೂದಿಯಾಗು ತ್ತದೆ. ಅದನ್ನು ಕೈಯಲ್ಲಿ ತೆಗೆದುಕೊಂಡು ಮೈಗೆ ಬಳಿದುಕೊಳ್ಳಬಹುದು ಕರ್ಮದಲ್ಲಿ ವಿಕರ್ಮದ ಜ್ಯೋತಿ ಹತ್ತಿಸಿದರೆ ಅಕರ್ಮವಾಗುತ್ತದೆ ಮರವೆಲ್ಲಿ, ಬೂದಿ ಎಲ್ಲಿ? ಕಃ ಕೇನ ಸಂಬಂಧಃ? ಇವುಗಳ ಗುಣಧರ್ಮ ಗಳಲ್ಲಿ ಏನೂ ಸಾಮ್ಯವಿಲ್ಲ. ಆದರೂ ಆ ಬೂದಿ ಆ ಮರದ್ದೇ; ಅದರಲ್ಲಿ ಸಂಶಯವಿಲ್ಲ.

ಕರ್ಮದಲ್ಲಿ ವಿಕರ್ಮ ಬೆರೆತರೆ ಅಕರ್ಮವಾದೀತು ಎಂದರೇನರ್ಥ ಕರ್ಮ ಮಾಡಿದಂತೆಯೇ ಎನಿಸದು ಎಂದರ್ಥ. ಆ ಕರ್ಮದ ಭಾರ ಕಾಣದು. ಮಾಡಿಯೂ ಮಾಡದವನಂತೆ ಇರುತ್ತಾನೆ. ಗೀತೆ ಹೇಳು ತ್ತದೆ: ಕೊಂದರೂ ನೀನು ಕೊಂದ ಹಾಗಲ್ಲ. ತಾಯಿ ಮಗನನ್ನು ಹೊಡೆಯುತ್ತಾಳೆಂದು ನೀನು ಹೊಡೆದರೆ? ಅದನ್ನು ಮಗು ಸೈರಿಸಲಿಕ್ಕಿಲ್ಲ ತಾಯಿ ಹೊಡೆದರೂ ಆಕೆಯ ಮಡಿಲಲ್ಲೇ ಮೋರೆ ಮುಚ್ಚಿಕೊಂಡೀತು. ತಾಯಿಯ ಬಾಹ್ಯಕರ್ಮದಲ್ಲಿ ಚಿತ್ತಶುದ್ಧಿ ಇದೆ. ಆಕೆಯ ಆ ಹೊಡೆತ ನಿಷ್ಕಾಮದ್ದು. ಅದರಲ್ಲಿ ಆಕೆಗೇನೂ ಸ್ವಾರ್ಥವಿಲ್ಲ. ವಿಕರ್ಮದಿಂದ, ಮನಶ್ಶುದ್ಧಿಯಿಂದ ಕರ್ಮದ ಕರ್ಮತೆ ಹಾರಿಹೋಗುತ್ತದೆ. ರಾಮನ ಆ ನೋಟ ಒಳಗಿನ ವಿಕರ್ಮದಿಂದ ಕೇವಲ ಪ್ರೇಮಸುಧಾಸಾಗರ ವಾಯಿತು. ರಾಮನಿಗೆ ಆ ಕರ್ಮದಲ್ಲಿ ಶ್ರಮವೇನೂ ಇಲ್ಲ. ಚಿತ್ತಶುದ್ಧಿ ಯಿಂದ ಮಾಡಿದ ಕರ್ಮ ನಿರ್ಲೇಪವಾಗಿರುತ್ತದೆ. ಅದಕ್ಕೆ ಪಾಪಪುಣ್ಯ ಯಾವುದೂ ಅಂಟದು.

ಇಲ್ಲದಿದ್ದರೆ ಕರ್ಮದ ಭಾರ ನಮ್ಮ ಬುದ್ಧಿಯ ಮೇಲೆ, ಹೃದಯದ ಮೇಲೆ ಎಷ್ಟುಬಿದ್ದೀತೋ! ನಾಳೆ ರಾಜಕೀಯ ಕೈದಿಗಳನ್ನು ಬಿಡುತ್ತಾರೆಂಬ ಸುದ್ದಿ ಹರಡಿದರೆ ೨ ಗಂಟೆಯ ಹೊತ್ತಿಗೇ ಜನರ ನೆರವಿ ಹೇಗೆ ನೆರೆದಿದೆಯೋ ನೋಡಿ. ಎಲ್ಲಾ ಕಡೆ ಗಡಿಬಿಡಿ. ಕರ್ಮದ ಒಳಿತು-ಕೆಡುಕಿನಿಂದ ನಾವು ಎಷ್ಟು ವ್ಯಗ್ರರಾಗುತ್ತೇವೆ. ಕರ್ಮ ನಮ್ಮನ್ನು ಎಲ್ಲಾ ಕಡೆಗಳಿಂದಲೂ ಸುತ್ತುಗಟ್ಟುತ್ತದೆ. ಕರ್ಮ ನಮ್ಮ ಕತ್ತಿನ ಮೇಲೆ ಕೂತು ಸವಾರಿ

ಮಾಡುತ್ತದೆ. ಕಡಲ ನೀರು ಉಕ್ಕಿ ಬಂದು ನೆಲವನ್ನು ಕೊಚ್ಚಿ ಆಖಾತ ಮಾಡುವಂತೆ, ಕರ್ಮ ಚಿತ್ತದೊಳಗೆ ನುಗ್ಗಿ, ಅಲ್ಲಿ ಕ್ಷೋಭೆಯುಂಟು ಮಾಡುತ್ತದೆ. ಅದರಿಂದ ಸುಖ ದುಃಖದ ದ್ವಂದ್ವ ಹುಟ್ಟುತ್ತದೆ, ಶಾಂತಿಯೆಲ್ಲ ನಷ್ಟವಾಗುತ್ತದೆ. ಕರ್ಮ ಮುಗಿದುಹೋದರೂ ಅದರ ವೇಗವಿನ್ನೂ ಉಳಿದೇ ಇರುತ್ತದೆ. ಕರ್ಮ ಚಿತ್ತವನ್ನು ಸ್ವಾಧೀನಪಡಿಸಿಕೊಳ್ಳುತ್ತದೆ. ಆಮೇಲೆ ಅದಕ್ಕೆ ನಿದ್ದೆಯೇ ಇಲ್ಲ.

ಇಂಥ ಕರ್ಮದಲ್ಲೂ ವಿಕರ್ಮ ಬೆರೆತರೆ ಸಾಕು, ಎಷ್ಟು ಕರ್ಮ ಮಾಡಿದರೂ ಭಾರ ಶ್ರಮ ಎನಿಸದು. ಮನಸ್ಸು ಧ್ರುವದಂತೆ ಶಾಂತ, ಸ್ಥಿರ, ತೇಜೋಮಯ ಆಗಿರುತ್ತದೆ. ಕರ್ಮದಲ್ಲಿ ವಿಕರ್ಮ ತುಂಬಿದರೆ ಅದು ಅಕರ್ಮವಾಗುತ್ತದೆ. ಕರ್ಮ ಮಾಡಿ ಅಳಿಸಿಹಾಕಿದಂತೆ ಆಗುತ್ತದೆ.

## ೧೬. ಕರ್ಮದ ಕಲೆ – ಸಂತರಿಂದ ಕಲಿ

ಕರ್ಮ ಅಕರ್ಮವಾದೀತು ಹೇಗೆ? ಈ ಕಲೆಯನ್ನು ಯಾರಲ್ಲಿ ಕಾಣಬಹುದು? ಶರಣರಲ್ಲಿ. ಈ ಅಧ್ಯಾಯದ ಕೊನೆಗೆ ದೇವರು ಹೇಳುತ್ತಾನೆ: ಶರಣರ ಬಳಿಗೆ ಹೋಗಿ ಕಂಡು ಅವರಿಂದ ಪಾಠ ಕಲಿ. ಕರ್ಮ ಹೇಗೆ ಅಕರ್ಮವಾಗುತ್ತದೆ ಎಂಬುದನ್ನು ಹೇಳುವಾಗ ಭಾಷೆ ಬಯಲಾಗುತ್ತದೆ. ಅದನ್ನು ಗ್ರಹಿಸಲು ಶರಣರ ಪಾದವೇ ಗತಿ. ಪರಮೇಶ್ವರನ ವರ್ಣನೆಯಿದೆಯಲ್ಲ:

'ಶಾಂತಾಕಾರಂ ಭುಜಗಶಯನಂ'

ಪರಮೇಶ್ವರ ಸಾವಿರ ಹೆಡೆಯ ಶೇಷನ ಮೇಲೆ ಮಲಗಿಯೂ ಶಾಂತನಾಗಿದ್ದಾನೆ. ಶರಣರು ಸಾವಿರ ಬಗೆಯ ಕರ್ಮ ಮಾಡಿದರೂ ಮಾನಸ ಸರೋವರದಲ್ಲಿ ಕ್ಷೋಭತರಂಗಕ್ಕೆ ಅವಕಾಶ ಕೊಡರು. ಇಂಥ ಕೌಶಲವನ್ನು ಶರಣರ ಬಳಿಗೆ ಹೋಗದೆ ಅರಿಯಲು ಸಾಧ್ಯವಿಲ್ಲ.

ಈಗ ಪುಸ್ತಕಗಳಿಗೆ ಬೆಲೆ ಬಹಳ ಕಡಿಮೆ. ಆಣೆ ಎರಡಾಣೆಗೆ ಗೀತೆಯ ಪ್ರತಿ ಸಿಗುತ್ತದೆ. ಗುರುಗಳಂತೂ ಬೇಕಾದಷ್ಟು ಜನ ಇದಾರೆ. ಶಿಕ್ಷಣವೂ ಉದಾರ, ಸ್ವತಂತ್ರ ಆಗಿದೆ. ವಿದ್ಯಾಪೀಠಗಳಲ್ಲಿ ಜ್ಞಾನಪ್ರಸಾದಗಳನ್ನು ಹಂಚುತ್ತಿದಾರೆ. ಆದರೆ ಜ್ಞಾನಾಮೃತ ಭೋಜನದ ತೇಗು ಮಾತ್ರ ಕೇಳ

ಬರುತ್ತಿಲ್ಲ. ಪುಸ್ತಕದ ರಾಶಿರಾಶಿಗಳನ್ನು ನೋಡಿ ದಿನೇ ದಿನೇ ನನಗೆ ಶರಣರ ಸೇವೆಯೆ ಆಗತ್ಯ ಹೆಚ್ಚು ಅನಿಸುತ್ತದೆ. ಪುಸ್ತಕದ ಮಟ್ಟಸವಾದ ಬಟ್ಟೆಯ ಬೈಂಡಿನೊಳಗಿಂದ ಹೊರಗೆ ಬಾರದು ಜ್ಞಾನ. ತುಕಾರಾಮರ ಅಭಂಗವೊಂದು ಇಂಥ ಸಂದರ್ಭದಲ್ಲಿ ನನಗೆ ಸಹಜವಾಗಿ ನೆನವಾಗುತ್ತದೆ.

ಕಾಮಕ್ರೋಧ ಗುಡ್ಡ
ಅನಂತಕಿದು ಅಡ್ಡ *

'ಕಾಮಕ್ರೋಧಗಳ ಪರ್ವತದ ಆ ಕಡೆ ಇದಾನೆ ನಾರಾಯಣ. ಹಾಗೇ ಈ ಪುಸ್ತಕ ರಾಶಿಯ ಹಿಂದೆ ಅಡಗಿ ಕುಳಿತಿದಾನೆ ಜ್ಞಾನರಾಜ. ಗ್ರಂಥಾಲಯ ಪುಸ್ತಕಾಲಯಗಳು ಎಲ್ಲೆಲ್ಲೂ ಬೆಳಗುತ್ತಿದ್ದರೂ ಇನ್ನೂ ಎಲ್ಲೆಡೆಯಲ್ಲಿಯೂ ಮನುಷ್ಯ ಜ್ಞಾನಹೀನ ಸಂಸ್ಕಾರಹೀನ ಆಗಿ ಕೋತಿಯಂತೆ ಕಾಣುತ್ತಿದಾನೆ. ಬಡೋದೆಯಲ್ಲಿ ದೊಡ್ಡ ಗ್ರಂಥಾಲಯವಿದೆ. ಒಮ್ಮೆ ಒಬ್ಬ ಗೃಹಸ್ಥ ಒಂದು ಬಹಳ ದೊಡ್ಡ ಪುಸ್ತಕವನ್ನೊಯ್ಯುತ್ತಿದ್ದ. ಆ ಪುಸ್ತಕದಲ್ಲಿ ಚಿತ್ರ ಇದ್ದವು. ಇಂಗ್ಲೀಷಿನ ಪುಸ್ತಕ ಎಂದು ತಿಳಿದು ಅದನ್ನು ಆತ ಒಯ್ಯುತ್ತಿದ್ದ. ಹೇಗಿದೆ ಪುಸ್ತಕ ಎಂದು ನಾನು ಕೇಳಿದೆ. ಅವನು ತೋರಿಸಿದ. 'ಇದೇನು ಫ್ರೆಂಚ್ ಇದ್ದ ಹಾಗಿದೆಯಲ್ಲ' ಎಂದೆ. ಫ್ರೆಂಚು ಅಂತೇನೋ ಎಂದ ಆತ ಪರಮ ಪವಿತ್ರ ಇಂಗ್ಲೀಷ್ ಲಿಪಿ, ಅಂದವಾದ ಚಿತ್ರ, ನೊಗಸಾದ ಬೈಂಡು, ಇನ್ನು ಜ್ಞಾನಕ್ಕೇನು ಕೊರತೆ? ಇಂಗ್ಲೀಷಿನಲ್ಲಿ ಪ್ರತಿವರ್ಷ ೧೦ ಸಾವಿರ ಹೊಸ ಪುಸ್ತಕ ಬರುತ್ತವೆ. ಉಳಿದವುಗಳಲ್ಲೂ ಅದೇ ರೀತಿ. ಇಷ್ಟು ಜ್ಞಾನಪ್ರಸಾರವಾಗಿದ್ದರೂ ಲೋಕದಲ್ಲಿ ಮನುಷ್ಯನ ತಲೆ ಬರೀ ಬುರುಡೆಯಾಗಿದೆಯೇಕೆ? ಸ್ಮರಣಶಕ್ತಿ ಕಡಿಮೆಯಾಯಿತು ಎನ್ನುತ್ತಾರೆ ಕೆಲವರು. ಏಕಾಗ್ರತೆ ಸಾಧ್ಯವಿಲ್ಲ ಎನ್ನುತ್ತಾರೆ ಕೆಲವರು. ಓದಿದ್ದೆಲ್ಲಾ ಸರಿ ಅನಿಸುತ್ತದೆ ಎನ್ನುತ್ತಾರೆ. ಕೆಲವರು ವಿಚಾರಮಾಡಲು ವಿರಾಮವಿಲ್ಲವೆನ್ನುತ್ತಾರೆ. ಶ್ರೀಕೃಷ್ಣ ಹೇಳುತ್ತಾನೆ: ಅರ್ಜುನ, ಕೇಳಿ ಕೇಳಿ ಗೊಂದಲದಲ್ಲಿ ಬಿದ್ದ ನಿನ್ನ ಬುದ್ಧಿ ಸ್ಥಿರವಾಗದೆ ನಿನಗೆ ಯೋಗ ಲಭ್ಯವಾಗದು. ಶ್ರವಣ ಪಠನಗಳನ್ನು ಮುಗಿಸಿ ಇನ್ನು ಶರಣರನ್ನು

---

* ಕಾಮಕ್ರೋಧ ಆಡ ಪಡಿಲೇ ಪರ್ವತ
ರಾಹಿಲಾ ಅನಂತ ಪಲೀಕಡೆ

ಶರಣು ಹೋಗು. ಅವರು ಜೀವನ-ಗ್ರಂಥವನ್ನು ಓದಿಸಿಯಾರು. ಅವರ ಮುಖದಿಂದ ಮೌನ – ವ್ಯಾಖ್ಯಾನ ಕೇಳಿ ನೀನು ಛಿನ್ನ – ಸಂಶಯನಾದೀಯೆ. ಎಲ್ಲಾ ಸೇವಾಕರ್ಮವನ್ನು ಮಾಡಿಯೂ, ಹೇಗೆ ಅತ್ಯಂತ ಶಾಂತವಾಗಿರ ಬೇಕು, ಹೊರಗಣ ಕರ್ಮದ ಗಡಿಬಿಡಿಯಲ್ಲಿದ್ದರೂ ಹೃದಯದಲ್ಲಿ ಅಖಂಡ ಸಂಗೀತದ ಸಿತಾರನ್ನು ಮೀಟುವುದು ಹೇಗೆ ಎಂಬುದು ಅವರಲ್ಲಿ ಹೋದರೆ ತಿಳಿದೀತು.

ಭಾನುವಾರ,
೧೩-೩-೧೯೩೨.

## ೧೭. ಬಾಹ್ಯಕರ್ಮ ಮನದ ಕನ್ನಡಿ

ಸಂಸಾರ ಬಹಳ ಭಯಾನಕ ವಸ್ತು. ಅನೇಕ ಸಲ ಅದಕ್ಕೆ ಸಮುದ್ರದ ಹೋಲಿಕೆ ಕೊಡುವುದುಂಟು. ಸಮುದ್ರದಲ್ಲಿ ಎತ್ತ ನೋಡಿದರೂ ನೀರೇ ನೀರು. ಸಂಸಾರದಲ್ಲೂ ಹೀಗೇ. ಸಂಸಾರ ಎಲ್ಲೆಡೆಯಲ್ಲೂ ತುಂಬಿಕೊಂಡಿದೆ. ಮನೆಮಾರು ಬಿಟ್ಟು ಯಾರಾದರೂ ಸಾರ್ವಜನಿಕ ಕಾರ್ಯದಲ್ಲಿಯೇ ಸಂಪೂರ್ಣವಾಗಿ ಮುಳುಗಿದರೆ ಅದೇ ಆತನ ಸಂಸಾರವಾಗುತ್ತದೆ. ಲೋಕವನ್ನೆ ಬಿಟ್ಟು ಗುಹಾಂತರ್ವಾಸಿಯಾಗಿ ಕೂತರೂ ಚೋಟುದ್ದದ ಲಂಗೋಟಿಗೆ ಅಂಟಿಕೊಂಡೇ ಅವನ ಸಂಸಾರ. ಅವನ ಆ ಲಂಗೋಟಿಯೆ ಅವನ ಮಮತೆಯ ಸಾರ ಸರ್ವಸ್ವವಾಗಿಬಿಡುತ್ತದೆ. ಚಿಕ್ಕ ನೋಟಿನಲ್ಲಿ ಸಾವಿರಾರು ರೂಪಾಯಿ ಹುದುಗಿರುವಂತೆ ಆ ಚಿಕ್ಕ ಲಂಗೋಟಿಯಲ್ಲಿ ಅಪಾರ ಆಸಕ್ತಿ ಅಡಗಿದೆ. ಮನೆಮಾರು ಬಿಟ್ಟರೆ, ಜಂಜಡ ತಗ್ಗಿಸಿದರೆ, ಇಷ್ಟರಿಂದ ಸಂಸಾರ ಕಡಿಮೆಯಾಗಲಾರದು. $\frac{೧೦}{೨೫}$ ಅಥವಾ $\frac{೨}{೫}$ ಎಂದರೆ ಒಂದೇ. ಬೇರೆಯಲ್ಲ. ಮನೆಯಲ್ಲಿರು ವನದಲ್ಲಿರು, ಆಸಕ್ತಿ ನಿನ್ನ ಬಳಿಯಲ್ಲೇ ಇದೆ. ಸಂಸಾರ ಲೇಶ ಮಾತ್ರವೂ ಕಡಮೆಯಾಗದು. ಇಬ್ಬರು ಯೋಗಿಗಳು ಹಿಮಾಲಯದ ಗುಹೆಯಲ್ಲಿ ಹೋಗಿ ಕುಳಿತಾರು. ಅಲ್ಲಿ ಕೂಡ ಅವರಿಗೆ ಪರಸ್ಪರ ಕೀರ್ತಿಯನ್ನು ಕೇಳಿ ಹೊಟ್ಟೆ ಉರಿಯುತ್ತದೆ. ಸಾರ್ವಜನಿಕ ಸೇವೆಯಲ್ಲೂ ಇಂಥ ಪ್ರಸಂಗ ಬರುತ್ತವೆ.

ಸಂಸಾರ ಹೀಗೆ ನಮ್ಮ ಬೆನ್ನಂಟೆಯೇ ಬಂದಿರುವುದರಿಂದ ನಾವು ಎಷ್ಟೇ ಸ್ವಧರ್ಮಾಚರಣೆಯ ನಿಯಮಗಳನ್ನು ಹಾಕಿಕೊಂಡರೂ ಸಂಸಾರವೇನು ನಮ್ಮನ್ನು ಬಿಡದು. ಹಲವಾರು ಪರದಾಟ ಬಿಟ್ಟು ಉಳಿದ ವ್ಯಾಪಗಳನ್ನೆಲ್ಲ ತಗ್ಗಿಸಿ ತನ್ನ ಸಂಸಾರವನ್ನು ಕಿರಿದು ಮಾಡಿದರೂ ಅಷ್ಟರಲ್ಲೇ ಎಲ್ಲ ಮಮತೆಯೂ ತುಂಬಿರುತ್ತದೆ. ರಾಕ್ಷಸ ಚಿಕ್ಕವನೂ ಆಗುತ್ತಾನೆ, ದೊಡ್ಡವನೂ ಆಗುತ್ತಾನೆ. ಸಂಸಾರವೂ ಹಾಗೇ. ಚಿಕ್ಕವನೇನು ದೊಡ್ಡವನೇನು ರಾಕ್ಷಸ ರಾಕ್ಷಸನೇ! ದೊಡ್ಡ ಬಂಗಲೆಯೇನು ಚಿಕ್ಕ ಗುಡಿಸಲೇನು?

ಎರಡೂ ದುರ್ನಿವಾರ್ಯ. ಸ್ವಧರ್ಮಾಚರಣೆಯಿಂದ ಕಟ್ಟಿಬಿಗಿದು ಸಂಸಾರವನ್ನು ಎಷ್ಟೇ ಪ್ರಮಾಣಬದ್ಧವಾಗಿಸಿದರೂ ಇದರಲ್ಲಿ ಹಲವು ಕೀಟಲೆ ತಪ್ಪಿದ್ದಲ್ಲ. ಸಂಸಾರ ಬೇಡವಪ್ಪ ಎನಿಸೀತು. ಅದರಲ್ಲಿಯೆ ಅನೇಕ ಸಂಸ್ಥೆಗಳ, ಅನೇಕ ವ್ಯಕ್ತಿಗಳ ಸಂಬಂಧ ಬಂದು ನೀನು ಅಳದಕ್ಕಿ ಯಾದೀಯೆ. ಸಾಕುಸಾಕಾದೀತು. ಆಗಲೆ ನಿನ್ನ ಮನಸ್ಸಿನ ಪರೀಕ್ಷೆ. ಸ್ವಧರ್ಮಾಚರಣೆ ಮಾಡಿದ ಮಾತ್ರಕ್ಕೆ ಅಲಿಪ್ತತೆ ಬಾರದು. ಕರ್ಮದ ವ್ಯಾಪ್ತಿ ಕುಗ್ಗಿಸಿದರೆ ಅದು ಅಲಿಪ್ತತೆಯಲ್ಲ.

ಹಾಗಾದರೆ ಅಲಿಪ್ತತೆ ಹೇಗೆ ಸಿಕ್ಕೀತು? ಅದಕ್ಕೆ ಮನೋಮಯ ಪ್ರಯತ್ನ ಬೇಕು. ಮನಸ್ಸಿನ ಸಹಕಾರವಿಲ್ಲದೆ ಯಾವುದೂ ಸಿದ್ಧವಾಗದು. ತಂದೆತಾಯಿ ಒಂದು ಸಂಸ್ಥೆಯಲ್ಲಿ ಮಗನನ್ನು ಬಿಟ್ಟರು. ಅಲ್ಲಿ ಆ ಹುಡುಗ ನಸುಕಿನಲ್ಲಿ ಏಳುತ್ತಾನೆ. ಸೂರ್ಯನಮಸ್ಕಾರ ಹಾಕುತ್ತಾನೆ. ಕಾಫೀ ಕುಡಿಯ. ಮನೆಗೆ ಬಂದಾಗ ಎರಡೇ ದಿನದಲ್ಲಿ ಅದನ್ನೆಲ್ಲ ಬಿಟ್ಟುಬಿಡುತ್ತಾನೆ. ಇದು ಅನುಭವ. ಮನುಷ್ಯ ಎಂದರೆ ಮಣ್ಣಿನ ಮುದ್ದೆಯಲ್ಲ. ಯಾವ ಆಕಾರವನ್ನು ಅವನ ಮನಸ್ಸಿಗೆ ಕೊಡಬೇಕೆನ್ನುತ್ತೇವೊ ಅದನ್ನು ಅವನ ಮನಸ್ಸು ಗ್ರಹಿಸಬೇಕಲ್ಲ! ಆ ಆಕಾರದಲ್ಲಿ ಮನಸ್ಸು ಕೂಡದಿದ್ದರೆ ಎಲ್ಲ ಪ್ರಯತ್ನವೂ ವ್ಯರ್ಥವೆನ್ನಬೇಕು. ಅಂತೇ ಸಾಧನೆಯಲ್ಲಿ ಮನಸ್ಸಿನ ಸಹಕಾರ ಬಹಳ ಅಗತ್ಯ.

ಸಾಧನವಾಗಿ ಬಾಹ್ಯದಲ್ಲಿ ಸ್ವಧರ್ಮಾಚರಣೆ, ಅಂತರಂಗದಲ್ಲಿ ಮನಸ್ಸಿನ ವಿಕರ್ಮ ಎರಡೂ ಬೇಕು. ಬಾಹ್ಯಕರ್ಮ ಅತ್ಯಗತ್ಯ. ಕರ್ಮ ಮಾಡದೆ ಮನಸ್ಸಿನ ಪರೀಕ್ಷೆ ಆಗದು. ಮುಂಜಾನೆಯ ಪ್ರಶಾಂತ ಕಾಲದಲ್ಲಿ ನಮ್ಮ ಮನಸ್ಸೂ ಶಾಂತವಾಗಿದ್ದಂತೆ ಅನಿಸುತ್ತದೆ. ಆದರೆ ಮಗು ಸ್ವಲ್ಪ ಅಳಲಿ, ಆ ಮನಶ್ಶಾಂತಿ ಎಲ್ಲಿ ಮಾಯವಾಗುತ್ತದೆಯೋ! ಬಾಹ್ಯಕರ್ಮವನ್ನು ತಡೆದು ಪ್ರಯೋಜನವಿಲ್ಲ. ಬಾಹ್ಯಕರ್ಮದಿಂದ ಮನಸ್ಸಿನ ಸ್ವರೂಪ ಪ್ರಕಟವಾಗುತ್ತದೆ. ಮೇಲೆ ನೋಡಿದರೆ ನೀರು ನಿರ್ಮಲ. ಒಂದು ಕಲ್ಲೆಸೆದು ನೋಡಿ. ಒಳಗಿನ ಹೊಲಸು ಮೇಲೆ ಬರುತ್ತದೆ. ನಮ್ಮ ಮನಸ್ಸಿನದೂ ಹಾಗೇ. ಮನಸ್ಸಿನ ಅಂತಸ್ಸರೋವರದಲ್ಲಿ ರಾಶಿ ರಾಶಿ ಹೊಲಸು ಕೂಡಿರುತ್ತದೆ. ಬಾಹ್ಯವಸ್ತುವಿನ ಸಂಬಂಧ ಬಂದೊಡನೆ

ಆ ಹೊಲಸು ಕಾಣುತ್ತದೆ. ಅದನ್ನು ನಾವು ರಾಗ ಎನ್ನುತ್ತೇವೆ. ರಾಗ ವೇನು ಹೊರಗಿನಿಂದ ಬಂತೆ? ಅದು ಮೊದಲೇ ಒಳಗೆ ಇತ್ತು. ಮನಸ್ಸಿನೊಳಗೆ ಇರದಿದ್ದರೆ ಹೊರಗೆ ಬಾರದಲ್ಲ.

ಬಿಳಿಯ ಖಾದಿ ಬೇಡ, ಅದು ಹೊಲಸಾಗುತ್ತದೆ, ಉಳಿದ ಖಾದಿ ಹೊಲಸಾಗದು ಎನ್ನುತ್ತಾರೆ ಜನ ಅದೂ ಹೊಲಸಾಗುತ್ತದೆ. ಆದರೆ ಕಣ್ಣಿಗೆ ಕಾಣಿಸದು. ಬಿಳೀ ಖಾದಿ ಹೊಲಸಾದರೆ ಕಾಣುತ್ತದೆ, ನಾನು ಹೊಲಸಾಗಿದೇನೆ, ನನ್ನನ್ನು ಒಗೆ ಎನ್ನುತ್ತದೆ ಅದು. ಹೀಗೆ ಹೇಳುವ ಖಾದಿ ಮನುಷ್ಯನಿಗೆ ರುಚಿಸದು. ನಮ್ಮ ಕರ್ಮವೂ ಇದೇ ರೀತಿ ಹೇಳುತ್ತದೆ. ನೀನು ಸಿಡುಕನೋ ಸ್ವಾರ್ಥಿಯೋ ಎಂಬುದನ್ನು ಕರ್ಮ ತಿಳಿಸುತ್ತದೆ. ಕರ್ಮ ನಿನ್ನ ಸ್ವರೂಪವನ್ನು ತೋರಿಸುವ ಕನ್ನಡಿ. ಇದಕ್ಕಾಗಿಯೇ ಕರ್ಮವನ್ನು ವಂದಿಸಬೇಕು. ಮೋರೆಗೆ ಹತ್ತಿದ ಹೊಲಸನ್ನು ತೋರಿಸಿತೆಂದು ಕನ್ನಡಿಯನ್ನೆ ಒಡೆದುಬಿಡೋಣವೆ? ಇಲ್ಲ. ಅದರ ಬದಲು ಕನ್ನಡಿಯನ್ನು ವಂದಿಸಿ, ಮುಖ ತೊಳೆದುಕೊಂಡು ಮತ್ತೆ ಕನ್ನಡಿ ನೋಡು ಕರ್ಮದಿಂದ ನಿನ್ನ ಮನಸ್ಸಿನೊಳಗಣ ಹೊಲಸು ಬಯಲಿಗೆ ಬೀಳುತ್ತದೆಂದು ಕರ್ಮವನ್ನೇ ಬಿಟ್ಟುಬಿಡುವುದೆ? ಕರ್ಮ ಬಿಟ್ಟರೆ ಮನಸ್ಸು ನಿರ್ಮಲವಾದೀತೆ? ಕರ್ಮ ಮಾಡಬೇಕು. ನಿರ್ಮಲನಾಗುವ ಪ್ರಯತ್ನ ಮಾಡಬೇಕು.

ಒಬ್ಬ ಗುಹೆಯಲ್ಲಿ ಹೋಗಿ ಕೂಡುತ್ತಾನೆ. ಅಲ್ಲಿ ಯಾರ ಸಂಬಂಧವೂ ಇಲ್ಲ. ಅವನಿಗೆ ತಾನು ಸಂಪೂರ್ಣ ಶಾಂತಮತಿಯಾದೆ ಅನಿಸುತ್ತದೆ. ಅವನು ಗುಹೆಯನ್ನು ಬಿಟ್ಟು ಒಂದು ಮನೆಯ ಮುಂದೆ ಭಿಕ್ಷೆಗೆ ಹೋಗಲಿ. ಅಲ್ಲಿ ಆಟವಾಡುವ ಮಗು ಒಂದು ಮನೆಬಾಗಿಲ ಚಿಲುಕವನ್ನು ಸಪ್ಪಳ ಮಾಡಿದ. ಆ ಬಾಲಬ್ರಹ್ಮ ಆ ನಾದಬ್ರಹ್ಮದಲ್ಲಿ ತಲ್ಲೀನನಾಗಿದಾನೆ. ಆ ಯೋಗಿಗೆ ಆ ನಿಷ್ಪಾಪ ಮಗು ಮಾಡಿದ ಸಪ್ಪಳ ಸಹನವಾಗದು ಏನು ಹಾಳುಸದ್ದು ಎನ್ನುತ್ತಾನೆ. ಗುಹೆಯಲ್ಲಿದ್ದ ಅವನ ಮನಸ್ಸು ಇಷ್ಟು ಮಟ್ಟಿನ ಆಘಾತವನ್ನು ಸೈರಿಸದಂತಾಗಿದೆ. ಚಿಲುಕ ಬಾರಿಸಿದರೆ ಸಾಕು, ಅವನ ಶಾಂತಿ ಬಾಲ ಮುದುರಿತು. ಇಂಥ ದುರ್ಬಲ ಮನಃಸ್ಥಿತಿ ಒಳಿತಲ್ಲ.

ಇದರ ಅರ್ಥ— ನಮ್ಮ ಮನಸ್ಸಿನ ಸ್ವರೂಪವನ್ನರಿಯಲು ಕರ್ಮ ಬಹಳ ಉಪಯೋಗಿ. ದೋಷ ಕಂಡರೆ ಅದನ್ನು ನಿವಾರಿಸಲುಬಹುದು. ದೋಷವೆ ಕಾಣದಿದ್ದರೆ ಪ್ರಗತಿ ಕುಂದುತ್ತದೆ, ವಿಕಾಸ ನಿಲ್ಲುತ್ತದೆ. ಕರ್ಮ ಮಾಡುತ್ತಿದ್ದರೆ ದೋಷ ಕಾಣುತ್ತದೆ. ಅದನ್ನು ನಿವಾರಿಸಲು ವಿಕರ್ಮದ ಯೋಜನೆ ಮಾಡಬೇಕು. ಹೀಗೆ ಒಳಗೆ ವಿಕರ್ಮದ ಪ್ರಯತ್ನ ಹಗಲೂ ಇರುಳೂ ನಡೆದರೆ ಕಾಲಾನುಕಾಲದಲ್ಲಿ ಸ್ವಧರ್ಮವನ್ನು ಆಚರಿಸುತ್ತ ಹೇಗೆ ಅಲಿಪ್ತನಾಗಿರಬಹುದೋ, ಕಾಮಕ್ರೋಧಾತೀತನಾಗಿ ಲೋಭಮೋಹರಹಿತನಾಗಿ ಹೇಗೆ ಇರಬಹುದೋ, ತಿಳಿದುಬರುತ್ತದೆ. ಕರ್ಮವನ್ನು ನಿರ್ಮಲಗೊಳಿಸುವ ಪ್ರಯತ್ನ ನಿರಂತರ ನಡೆದರೆ ನಿರ್ಮಲ ಕರ್ಮವೆ ಸಹಜವಾದೀತು. ನಿರ್ವಿಕಾರ ಕರ್ಮ ಪದೇ ಪದೇ ನಹಜವಾಗಿ ಬಿಟ್ಟರೆ, ಕರ್ಮ ಯಾವಾಗ ನಡೆಯಿತೆಂಬುದು ಕೂಡ ತಿಳಿಯದಂತೆ ಆಗುತ್ತದೆ. ಕರ್ಮ ಸಹಜವಾದರೆ ಅದು ಅಕರ್ಮವಾಗುತ್ತದೆ. ಸಹಜ ಕರ್ಮವೇ ಅಕರ್ಮ. ನಾಲ್ಕನೆಯ ಅಧ್ಯಾಯದಲ್ಲಿ ನಾವಿದನ್ನು ನೋಡಿ ದೇವೆ. ಕರ್ಮ ಹೇಗೆ ಅಕರ್ಮವಾಗುತ್ತದೋ ಅದನ್ನು ಶರಣರ ಪಾದ ದಿಂದ ಕಲಿಯಬೇಕು ಎಂದು ನಾಲ್ಕನೆಯ ಅಧ್ಯಾಯದ ಕೊನೆಯಲ್ಲಿ ಭಗವಂತ ಹೇಳಿದಾನೆ. ಈ ಅಕರ್ಮ ಸ್ಥಿತಿಯನ್ನು ವರ್ಣಿಸಲು ಮಾತಿಗೆ ಅಳವಲ್ಲ.

## ೧೮. ಅಕರ್ಮದಶೆಯ ಸ್ವರೂಪ

ಕರ್ಮದ ಸಹಜತೆಯನ್ನು ಅರಿಯಲು ಪರಿಚಯದ ದೃಷ್ಟಾಂತವನ್ನು ತೆಗೆದುಕೊಳ್ಳೋಣ. ಚಿಕ್ಕಮಕ್ಕಳು ಮೊದಲು ನಡೆಯುವುದನ್ನು ಕಲಿಯು ತ್ತವೆ. ಆಗ ಅದಕ್ಕೆ ಎಷ್ಟು ಕಷ್ಟವಾಗುತ್ತದೆ. ಅದು ನಡೆಯುವುದನ್ನು ನೋಡಿ ನಾವು ಎಷ್ಟು ಕೌತುಕ ತೋರಿಸುತ್ತೇವೆ. ಮಗು ನಡೆಯ ತೊಡಗಿತು ಎನ್ನುತ್ತೇವೆ. ಮುಂದೆ ಆ ನಡಿಗೆ ಸಹಜವೇ ಆಗುತ್ತದೆ. ನಡೆನಡೆಯುತ್ತ ಹರಟೆ ಹೊಡೆಯುತ್ತದೆ. ನಡೆಯುವುದರ ಕಡೆ ಅದರ ಗಮನವೇ ಇರುವುದಿಲ್ಲ. ತಿನ್ನುವುದರ ವಿಷಯವೂ ಹೀಗೆ. ಚಿಕ್ಕಮಕ್ಕಳಿಗೆ ತಿನ್ನಿಸುವುದೂ ಒಂದು ದೊಡ್ಡ ಕೆಲಸ. ಅವಕ್ಕೆ ಅನ್ನಪ್ರಾಶನ ಮಾಡಿಸು

ತ್ತೀವೆ. ಮುಂದೆ ತಿನ್ನುವುದು ಅವಕ್ಕೆ ಸಹಜವಾಗುತ್ತದೆ. ಮನುಷ್ಯನಿಗೆ ಈಜು ಕಲಿವಾಗ ಮೊದಲು ಎಷ್ಟು ಕಷ್ಟ. ಕ್ರಮೇಣ ಅದು ಸಹಜವಾಗುತ್ತದೆ. ಮೊದಲು ಉಸಿರು ಕಟ್ಟುತ್ತದೆ. ಆದರೆ ಮುಂಬರಿದು ನೋಡೋಣವೆಂದು ಹೋದರೆ ಈಜಿನಲ್ಲಿ ಬಳಲಿಕೆ ಕಾಣಿಸದು. ಮೈ ತನ್ನಷ್ಟಕ್ಕೆ ತಾನೇ ತೇಲಾಡುತ್ತದೆ. ಶ್ರಮಪಡುವುದು ಮನಸ್ಸಿನ ಧರ್ಮ. ಮನಸ್ಸು ಆಯಾ ಕರ್ಮದಲ್ಲಿ ಮಗ್ನವಾದರೆ ಶ್ರಮ ಹುಟ್ಟುತ್ತದೆ. ಆದರೆ ಕರ್ಮ ಸಹಜವಾಗಿಬಿಟ್ಟರೆ ಅದರ ಭಾರ ತಿಳಿಯುವುದಿಲ್ಲ. ಕರ್ಮ ಅಕರ್ಮವಾಗುತ್ತದೆ. ಆನಂದಮಯವಾಗುತ್ತದೆ.

ಕರ್ಮ ಅಕರ್ಮವಾಗಬೇಕು — ಇದೇ ನಮ್ಮ ಗುರಿ. ಇದಕ್ಕಾಗಿ ಸ್ವಧರ್ಮಾಚರಣರೂಪ ಕರ್ಮವನ್ನು ಮಾಡಬೇಕು ; ಮಾಡುತ್ತಿರುವಾಗ ದೋಷ ಕಂಡುಬಂದಾವು. ಅದನ್ನು ನಿವಾರಿಸಲು ವಿಕರ್ಮದ ವೀರಗಚ್ಚೆ ಕಟ್ಟಬೇಕು. ಅಭ್ಯಾಸ ಮಾಡುತ್ತ ಬಂದರೆ ಕರ್ಮದಿಂದ ಕಿಂಚಿತ್ತೂ ಕಷ್ಟವಾಗದ ಮನಃಸ್ಥಿತಿ ಪ್ರಾಪ್ತವಾಗುತ್ತದೆ. ಸಾವಿರ ಕೈಗಳಿಂದ ಕರ್ಮ ಮಾಡುತ್ತಿದ್ದರೂ ಮನಸ್ಸು ನಿರ್ಮಲವೂ ಶಾಂತವೂ ಆಗಿರುತ್ತದೆ. ಆಕಾಶವನ್ನು ಕೇಳು : 'ಬಿಸಿಲಿನ ಝಳಕ್ಕೆ ನೀನು ಸೀದುಹೋಗುತ್ತೀಯಲ್ಲವೆ? ಮಳೆಗೆ ಪೂರಾ ನೆನೆದುಹೋಗುತ್ತೀಯಲ್ಲವೆ? ಛಳಿಗೆ ನಡುಗುತ್ತೀಯಲ್ಲವೆ?' ಎಂತ. ಆಕಾಶ ಏನು ಹೇಳೀತು. 'ನನಗೆ ಏನೇನು ಆಗುತ್ತದೆಯೋ ನೀನೇ ನಿರ್ಧರಿಸಿಬಿಡು, ನನಗಂತೂ ಒಂದೂ ಗೊತ್ತಿಲ್ಲ' ಎಂದೀತು.

> ಬರಿಮೈಯೊ ಬಟ್ಟೆಯೋ ಹುಚ್ಚನೇಂ ಬಲ್ಲ?
> ಅರಿಯಬೇಕು ತಾವೇ ನೋಡಿದವರೆಲ್ಲ.*

ಹುಚ್ಚ ಬೆತ್ತಲೆಯಿದಾನೋ ಬಟ್ಟೆ ಉಟ್ಟಿದಾನೋ ಜನರು ಹೇಳಬೇಕು. ಅವನಿಗದೊಂದೂ ತಿಳಿಯದು.

ಭಾವಾರ್ಥ ಇಷ್ಟು : ವಿಕರ್ಮದ ಸಹಾಯದಿಂದ ಸ್ವಧರ್ಮಾಚರಣೆಯ ಕರ್ಮ ನಿರ್ವಿಕಾರವಾಗುವ ದಾರಿ ಹಿಡಿದು ಸ್ವಾಭಾವಿಕವಾಗುತ್ತದೆ. ದೊಡ್ಡ

---

* ಪಿಸೇ ನೇಸಲೇ ಕಿ ನಾಗವೇ
ಲೋಸೆ ಕೀ ಯೇವೂನ್ ಜಾಣಾವೇ

ದೊಡ್ಡ ಪ್ರಸಂಗಗಳೂ ಆಗ ಕಠಿಣವೆನಿಸವು. ಕರ್ಮಯೋಗದ ಅಂಥ ಬೀಗದ ಕೈ ಇದು. ಬೀಗದ ಕೈ ಇರದಿದ್ದರೆ ಬೀಗವನ್ನು ಒಡೆದೊಡೆದು ಕೈಯೆಲ್ಲ ಬೊಬ್ಬೆಯಾದಾವು. ಬೀಗದ ಕೈ ಸಿಕ್ಕರೆ ಒಂದೇ ಗಳಿಗೆಯಲ್ಲಿ ಮುಗಿಯಿತು ಕೆಲಸ. ಕರ್ಮಯೋಗದ ಈ ಬೀಗದ ಕೈಯಿಂದ ಎಲ್ಲ ಕರ್ಮವೂ ನಿರುಪದ್ರವಿಯಾಗುತ್ತದೆ. ಮನೋಜಯದಿಂದ ಈ ಬೀಗದ ಕೈ ಸಿಗುತ್ತದೆ. ಮನೋಜಯಕ್ಕಾಗಿ ಅವಿರತ ಪ್ರಯತ್ನ ನಡೆಯಬೇಕು. ಕರ್ಮ ಮಾಡುವಾಗ ಕಾಣುವ ಮನೋಮಲವನ್ನು ತೊಳೆದುಹಾಕುವ ಪ್ರ ಯ ತ್ನ ನಡೆಯಬೇಕು. ಆಗ ಬಾಹ್ಯಕರ್ಮದ ಕಿರುಕುಳವಿರದು. ಕರ್ಮದ ಅಹಂಕಾರವೇ ಇಲ್ಲದಂತಾಗುತ್ತದೆ. ಕಾಮಕ್ರೋಧದ ವೇಗ ಕಡಿಮೆಯಾಗುತ್ತದೆ. ಕ್ಲೇಶದ ಪರಿವೆಯೇ ಇಲ್ಲದಾಗುತ್ತದೆ. ಕರ್ಮದ ಪರಿವೆಯೇ ಉಳಿಯದು.

ಒಮ್ಮೆ ಒಬ್ಬ ದೊಡ್ಡ ಮನುಷ್ಯ ನನಗೊಂದು ಪತ್ರ ಬರೆದ. '೧೩ ಕೋಟಿ ರಾಮನಾಮ ಜಪ ಮಾಡಬೇಕು, ನೀನೂ ಅದರಲ್ಲಿ ಭಾಗವಹಿಸು, ದಿನವೂ ಎಷ್ಟು ಜಪ ಮಾಡುತ್ತೀ ತಿಳಿಸು' ಎಂತ. ಆ ಮನುಷ್ಯ ತನ್ನ ಬುದ್ಧಿಗೆ ತಕ್ಕಂತೆ ಖಟಪಿಟ ಮಾಡಿದ. ಅದನ್ನು ನಾನು ದೋಷವೆನ್ನಲಾರೆ. ಆದರೆ ರಾಮನಾಮ ಹೀಗೆ ಅಳೆಯುವ ವಸ್ತುವಲ್ಲ. ತಾಯಿ ಮಗುವಿನ ಸೇವೆ ಮಾಡುತ್ತಾಳೆ. ಆಕೆ ಅದರ ವರದಿ ಪ್ರಕಟಿಸುತ್ತಾಳೆಯೆ? ವರದಿ ಪ್ರಕಟಿಸಿದರೆ 'ಥ್ಯಾಂಕ್ ಯು' ಎಂದು ಹೇಳಿ ಆ ಸಾಲವನ್ನು ಬಗೆಹರಿಸಲು ಬಂದೀತು. ಆದರೆ ತಾಯಿ ವರದಿ ಕೊಡಳು. ನಾನೇನು ಮಾಡಿದೆ, ಏನೂ ಮಾಡಲಿಲ್ಲವಲ್ಲ ಎಂದಾಳು ಆಕೆ. ವಿಕರ್ಮದ ಸಹಾಯದಿಂದ ಮನಸ್ಸನ್ನು ಅಳೆದು ಹೃದಯವನ್ನು ಸುರಿದು ಮನುಷ್ಯ ಕರ್ಮ ಮಾಡಿದರೆ ಆ ಕರ್ಮ ಕರ್ಮವಾಗಿ ಉಳಿಯದು, ಅದು ಅಕರ್ಮವಾಗುತ್ತದೆ. ಅದರಲ್ಲಿ ಕ್ಲೇಶ, ಕಷ್ಟ, ಅಡ್ಡತಿಡ್ಡ ಏನೂ ಇಲ್ಲ.

ಈ ಸ್ಥಿತಿಯನ್ನು ವರ್ಣಿಸಲು ಬಾರದು. ಅದರ ಮಸಕು ಕಲ್ಪನೆಯೊಂದನ್ನು ಸೂಚಿಸಬಹುದು. ಸೂರ್ಯ ಹುಟ್ಟುತ್ತಾನಲ್ಲ. ಹಕ್ಕಿಗಳನ್ನು ಹಾರಗೊಟ್ಟೇನು, ಲೋಕವನ್ನು ಕರ್ಮಪ್ರವೃತ್ತವಾಗಿ ಮಾಡೇನು — ಎಂದು ಸೂರ್ಯನ ಮನಸ್ಸಿನಲ್ಲಿರುತ್ತದೆಯೆ? ಹುಟ್ಟುತ್ತಾನೆ, ಹಾಗೇ ನಿಲ್ಲುತ್ತಾನೆ.

ಅವನ ಇರವೇ ವಿಶ್ವಕ್ಕೆ ಚಾಲನೆ ಕೊಡುತ್ತದೆ. ಆದರೆ ಸೂರ್ಯನಿಗೆ ಅದರ ಪರಿವೆಯೇ ಇಲ್ಲ. ಸೂರ್ಯನಿಗೆ ಕೈಮುಗಿದು, ಕತ್ತಲೆಯನ್ನು ಕಳೆದ ಮಹಾರಾಯ ಎಂದರೆ ಏನು ಹೇಳಿಯಾನು ಸೂರ್ಯ — 'ಕತ್ತಲೆ ಎಂದರೇನೋ ಸ್ವಲ್ಪ ಒಂದು ಚಿಟಿಕೆಯಷ್ಟು ತೋರಿಸಿ, ಆಮೇಲೆ ಅದನ್ನು ದೂರಮಾಡಿಯೇನು.' ಆಗ ನನ್ನ ಕರ್ತೃತ್ವ ಕತ್ತಲೆಯನ್ನು ಸೂರ್ಯನ ಕಡೆಗೆ ಒಯ್ಯಲು ಬಂದೀತೆ? ಸೂರ್ಯನ ಇರವಿನಿಂದ ಕತ್ತಲು ಹರಿದೀತು. ಅವನ ಬೆಳಕಿನಲ್ಲಿ ಕೆಲವರು ಸದ್ಗ್ರಂಥವನ್ನು ಓದಿಯಾರು, ಕೆಲವರು ಅಸದ್ಗ್ರಂಥವನ್ನು ಓದಿಯಾರು. ಒಬ್ಬ ಬೆಂಕಿ ಹತ್ತಿಸಿದರೆ ಒಬ್ಬ ಪರೋಪಕಾರ ಮಾಡಿಯಾನು. ಆದರೆ ಈ ಪಾಪಪುಣ್ಯದ ಹೊಣೆಗಾರ ಸೂರ್ಯನಲ್ಲ. 'ಬೆಳಕು ನನ್ನ ಸಹಜ ಗುಣ. ನನ್ನಲ್ಲಿ ಬೆಳಕಿಲ್ಲದಿದ್ದರೆ ಮತ್ತೇನಿದ್ದೀತು? ನಾನು ಬೆಳಗುತ್ತಿದೇನೆಂಬುದು ನನಗೆ ಗೊತ್ತಿಲ್ಲ. ನಾನು ಇರುವುದೆಂದರೇನೆ ಬೆಳಕು. ಬೆಳಕು ಬೀರುವ ಕೆಲಸದ ಕಷ್ಟ ನನಗಿಲ್ಲ. ಇದೊಂದು ಕೆಲಸ ಎನಿಸುವುದೇ ಇಲ್ಲ ನನಗೆ' ಎಂದಾನು ಸೂರ್ಯ.

ಸೂರ್ಯನಿಗೆ ಬೆಳಗುವುದು ಹೇಗೆ ಸ್ವಭಾವವೋ ಸಾಧುಶರಣರದೂ ಹಾಗೇ· ಇರುವಿಕೆಯೇ ಬೆಳಗುವಿಕೆ. ನೀನು ಸತ್ಯವಾದಿ ಎಂದು ಜ್ಞಾನಿಗೆ ಹೇಳಿ. ಸತ್ಯವನ್ನು ಅನುಸರಿಸದಿದ್ದರೆ ಮತ್ತೇನು ಮಾಡಲಿ ಎಂದಾನು. ಇದರಲ್ಲಿ ವಿಶೇಷವೇನು ಎಂದಾನು. ಜ್ಞಾನಿಗಳಿದ್ದಲ್ಲಿ ಅಸತ್ಯ ಸಂಭವನೀಯವೆ ಅಲ್ಲ

ಇದು ಅಕರ್ಮದ ಭೂಮಿಕೆ. ಸಾಧನೆ ನೈಸರ್ಗಿಕವೂ ಸ್ವಾಭಾವಿಕವೂ ಆಗಿಬಿಡುತ್ತದೆ; ಬಂದದ್ದೂ ಹೋದದ್ದೂ ತಿಳಿಯುವುದೇ ಇಲ್ಲ. ಇಂದ್ರಿಯ ಗಳಿಗೆ ರೂಢಿಯಾಗುತ್ತದೆ. ಸಹಜವಾದ ಮಾತೇ ಹಿತೋಪದೇಶವಾಗುತ್ತದೆ. ಅಂಥ ಸ್ಥಿತಿ ಪ್ರಾಪ್ತವಾದಾಗ ಕರ್ಮ ಅಕರ್ಮವಾಗುತ್ತದೆ. ಜ್ಞಾನಿಗಳ ಕೈಯಿಂದ ಸತ್ಕರ್ಮ ಸಹಜವಾಗಿಯೆ ಆಗುತ್ತದೆ. ತಾಯಿಯ ನೆನವು ಆಗುವುದು ಮಗುವಿಗೆ ಸಹಜ ಧರ್ಮ. ಇದೇ ರೀತಿ ದೇವರ ನೆನವಾಗುವುದು ಶರಣರ ಸಹಜ ಧರ್ಮ. ಮುಂಜಾನೆ ಕೊ ಕೋ ಕೋ ಎಂದು ಕೂಗುವುದು ಕೋಳಿಯ ಧರ್ಮ. ಸ್ವರಲಕ್ಷಣವನ್ನು ತಿಳಿಸಲು ಪಾಣಿನಿ ಕೋಳಿಯ ಉದಾಹರಣೆ ಕೊಟ್ಟಿದಾರೆ. ಪಾಣಿನಿಯ ಕಾಲದಿಂದ ಇಂದಿನವರೆಗೂ ಕೋಳಿ ಬೆಳಗ್ಗೆ ಕೂಗುತ್ತಲೇ ಇದೆ, ಹಾಗೆಂದು ಯಾರಾದರೂ ಅದಕ್ಕೆ

ಮಾನಪತ್ರ ಕೊಟ್ಟಿದಾರೆಯೆ? ಅದು ಅದರ ಸಹಜ ಧರ್ಮ. ಹಾಗೆಯೇ ಸತ್ಯ ಹೇಳುವುದು, ಭೂತಮಾತ್ರದಲ್ಲಿ ದಯೆ, ಪರರ ದೋಷ ಗಮನಿಸದಿರುವುದು, ಪರರ ಶುಶ್ರೂಷೆ ಮಾಡುವುದು ಇತ್ಯಾದಿ ಶರಣರ ಕರ್ಮ ಸಹಜವಾಗಿ ನಡೆದಿರುತ್ತವೆ. ಅವನ್ನು ಮಾಡದೆ ಅವರು ಬದುಕಲಾರರು. ಊಟ ಮಾಡಿದರು ಎಂದು ನಾವು ಯಾರಿಗಾದರೂ ಮನ್ನಣೆ ಮಾಡುತ್ತೇವೆಯೆ? ಊಟ ನಿದ್ದೆ ಸಂಸಾರಿಗನಿಗೆ ಸಹಜ ಕರ್ಮ, ಶರಣರಿಗೆ ಸೇವಾಕರ್ಮ ಸಹಜ ಕರ್ಮ. ಉಪಕಾರ ಮಾಡುವುದು ಅವರ ಸ್ವಭಾವ. ನಾನು ಉಪಕಾರ ಮಾಡೆ ಎಂದರೂ ಅವರಿಗದು ಸಾಧ್ಯವಿಲ್ಲ. ಅಂಥ ಜ್ಞಾನಿಯ ಕರ್ಮ ಅಕರ್ಮದ ಮೆಟ್ಟಿಲನ್ನು ಮುಟ್ಟಿದಂತೆ. ಈ ಸ್ಥಿತಿಗೆ ಸಂನ್ಯಾಸವೆಂಬ ಪವಿತ್ರ ಪದವಿ ಕೊಟ್ಟಿದಾರೆ. ಸಂನ್ಯಾಸವೆಂದರೆ ಈ ಪರಮಧನ್ಯ ಅಕರ್ಮ ದಶೆ. ಇದನ್ನು ಕರ್ಮಯೋಗವೆಂದೇ ಎನ್ನಬೇಕು ಕರ್ಮ ಮಾಡುತ್ತೇವಾದುದರಿಂದ ಅದು ಯೋಗ; ಮಾಡಿದರೂ ಮಾಡಿದಂತೆ ಎನಿಸದು ಎಂತ ಅದು ಸಂನ್ಯಾಸ. ಮಾಡಿದರೂ ಅದರ ಲೇಪ ಅಂಟದಂಥ ಯುಕ್ತಿಯಿಂದ ಅದು ಯೋಗ; ಏನೂ ಮಾಡದಂತೆಯೆ ಎನಿಸುವುದರಿಂದ ಅದು ಸಂನ್ಯಾಸ.

## ೧೯. ಅಕರ್ಮದ ಒಂದು ನೋಟ: ಯೋಗ

ಸಂನ್ಯಾಸದ ಕಲ್ಪನೆಯಾದರೂ ಏನು? ಕೆಲವು ಕರ್ಮ ಮಾಡುವುದು, ಕೆಲವನ್ನು ಬಿಡುವುದು — ಹೀಗಿದೆಯೆ? ಹಾಗಲ್ಲ ಸರ್ವ ಕರ್ಮವನ್ನೂ ಬಿಡುವುದೇ ಸಂನ್ಯಾಸ ಎಂದು ವ್ಯಾಖ್ಯೆ ಇದೆ. ಸರ್ವ ಕರ್ಮದಿಂದಲೂ ಮುಕ್ತನಾಗುವುದು, ಕಿಂಚಿತ್ತೂ ಕರ್ಮ ಮಾಡದಿರುವುದು ಸಂನ್ಯಾಸ. ಕರ್ಮ ಮಾಡುವುದಿಲ್ಲವೆಂದರೆ ಏನು? ಕರ್ಮ ಬಹಳ ಚಮತ್ಕಾರವಾದುದು. ಸರ್ವ ಕರ್ಮ ಸಂನ್ಯಾಸ ಹೇಗಾಗಬೇಕು? ಹಿಂದೆಯೂ ಮುಂದೆಯೂ ಸರ್ವತ್ರ ಕರ್ಮ ಹಬ್ಬಿಕೊಂಡಿದೆ. ಕಿಕ್ಕಿರಿ ತುಂಬಿದೆ. ಕೂತರೂ ಅದು ಕರ್ಮ. ಕೂಡುವುದು ಎಂಬುದು ಕ್ರಿಯಾಪದ. ಬರೀ ವ್ಯಾಕರಣದಲ್ಲಲ್ಲ, ಸೃಷ್ಟಿ ಶಾಸ್ತ್ರದಲ್ಲೂ ಕೂಡುವುದು ಕ್ರಿಯೆಯೇ, ಕೂತು ಕೂತು ಕಾಲು ನೋಯುತ್ತವೆ. ಕೂಡುವುದೂ ಶ್ರಮವೇ, ಮಾಡದಿರುವುದೂ ಕರ್ಮವೇ ಎಂಬಲ್ಲಿ ಕರ್ಮಸಂನ್ಯಾಸವೆಂದರೇನು? ಭಗವಂತ ಅರ್ಜುನನಿಗೆ ವಿಶ್ವರೂಪ

ತೋರಿಸಿದ. ಸರ್ವತ್ರ ವ್ಯಾಪಿಯಾದ ವಿಶ್ವರೂಪವನ್ನು ನೋಡಿ ಅರ್ಜುನ ಬೆದರಿ ಕಣ್ಣು ಮುಚ್ಚಿದ. ಕಣ್ಣು ಮುಚ್ಚಿ ನೋಡಿದಾಗ ಅದು ಒಳಗೇ ಕಾಣಿಸತೊಡಗಿತು. ಕಣ್ಣು ಮುಚ್ಚಿದರೂ ಕಾಂಬುದನ್ನು ತೊಲಗಿಸುವುದು ಹೇಗೆ? ಮಾಡದಿದ್ದರೂ ಆಗುವುದನ್ನು ಹೇಗೆ ತಪ್ಪಿಸುವುದು? ಒಂದು ಸ್ವಾರಸ್ಯವಾದ ಕಥೆಯಿದೆ. ಒಬ್ಬನ ಬಳಿ ಹೇರಳವಾದ ಒಡವೆಗಳಿದ್ದವು. ದೊಡ್ಡ ಪೆಟ್ಟಿಗೆಯೊಂದರಲ್ಲಿ ಅವನ್ನೆಲ್ಲ ಬೀಗ ಹಾಕಿ ಇಟ್ಟಿದ್ದ. ಆಳುಗಳು ದೊಡ್ಡ ಕಬ್ಬಿಣದ ಪೆಟ್ಟಿಗೆಯೊಂದನ್ನು ಮಾಡಿಸಿ ತಂದರು. 'ಎಂಥ ಮೂರ್ಖರೋ ನೀವು! ರಸಿಕತನವೇ ಇಲ್ಲವಲ್ಲ. ಸುಂದರವಾದ ಆಭರಣ ಗಳನ್ನು ಕಬ್ಬಿಣದ ಪೆಟ್ಟಿಗೆಯಲ್ಲಿಡುವುದೆ? ಒಳ್ಳೇ ಬಂಗಾರದ ಪೆಟ್ಟಿಗೆ ಮಾಡಿಸಿ ತರಿಸಿ' ಎಂದ. ಅವರು ಬಂಗಾರದ ಪೆಟ್ಟಿಗೆ ತರಿಸಿದರು. ಅದಕ್ಕೆ ಚಿನ್ನದ ಚಿಲುಕ ಬೀಗಗಳನ್ನೇ ತರಿಸಿದ. ಅದರೊಳಗೆ ಒಡವೆ ಗಳನ್ನಿಟ್ಟು ಚಿನ್ನವನ್ನು ಬಚ್ಚಿಟ್ಟ. ಬಚ್ಚಿಟ್ಟನೋ ಬಿಚ್ಚಿಟ್ಟನೋ? ಕಳ್ಳರಿಗೆ ಒಡವೆ ಹುಡುಕುವ ಅಗತ್ಯವೇ ಇಲ್ಲ. ಆ ಪೆಟ್ಟಿಗೆ ಹೊತ್ತರೆ ಆಯಿತು. ಕರ್ಮ ಮಾಡದಿದ್ದರೂ ಮಾಡಿದಂಥ ಪ್ರಕಾರಗಳಿವೆ. ಇಷ್ಟು ವ್ಯಾಪಕ ವಾದ ಕರ್ಮಗಳನ್ನು ಸಂನ್ಯಸಿಸುವುದು ಹೇಗೆ? ಯಚ್ಚ ಯಾವತ್ ಕರ್ಮ ಮಾಡುತ್ತಲೇ ಇದ್ದರೂ ಅದು ಉದುರಿಹೋಯಿತು ಎಂಬುದು ಇಂಥ ಕರ್ಮವನ್ನು ಸಂನ್ಯಸಿಸುವ ಮಾರ್ಗ. ಹಾಗಾದಾಗಲೇ ಸಂನ್ಯಾಸ. ನಿಜವಾಗಿ ಸಂನ್ಯಾಸದ ಕಲ್ಪನೆ ಅತಿ ರಮಣೀಯ. ಕರ್ಮ ಮಾಡಿದರೂ ಎಲ್ಲವೂ ಉದುರಿಹೋಗುವುದು ಎಂಥದು ಇದು? ಸೂರ್ಯನ ಹಾಗೆ. ಹಗಲೂ ಇರುಳೂ ಸೂರ್ಯ ಕರ್ಮವನ್ನು ಮಾಡುತ್ತಾನೆ. ಇರುಳಿನಲ್ಲೂ ಮಾಡು ತ್ತಾನೆ. ಅವನ ಬೆಳಕು ಉಳಿದ ಅರ್ಧ ಗೋಲದ ಮೇಲೆ ಬೀಳುತ್ತಲೇ ಇದೆ. ಇಷ್ಟು ಕರ್ಮ ಮಾಡುತ್ತಿದ್ದರೂ ಅವನು ಕರ್ಮವನ್ನೇ ಮಾಡುತ್ತಿಲ್ಲ ಎನ್ನುತ್ತಾರೆ. ಎಂತಲೇ ನಾಲ್ಕನೆಯ ಅಧ್ಯಾಯದಲ್ಲಿ ಭಗವಂತ ಮೊದಲು ನಾನೀ ಯೋಗವನ್ನು ಸೂರ್ಯನಿಗೆ ಹೇಳಿದೆ ಎನ್ನುತ್ತಾನೆ. ಸೂರ್ಯನಿಂದ ವಿಚಾರಶೀಲನೂ ಮನನಶೀಲನೂ ಆದ ಮನು ಕಲಿತ. ೨೪ ಗಂಟೆ ಕರ್ಮ ಮಾಡಿಯೂ ಸೂರ್ಯ ಲೇಶಮಾತ್ರವೂ ಕರ್ಮ ಮಾಡನು. ಈ ಸ್ಥಿತಿ ಅದ್ಭುತ ರಮ್ಯವಾಗಿದೆ. ಇದರಲ್ಲಿ ಸಂದೇಹವಿಲ್ಲ.

## ೨೦. ಅಕರ್ಮದ ಇನ್ನೊಂದು ನೋಟ : ಸಂನ್ಯಾಸ

ಇದು ಸಂನ್ಯಾಸದ ಒಂದು ಬಗೆ ಮಾತ್ರ. ಕರ್ಮ ಮಾಡಿಯೂ ಮಾಡನು ಎಂಬುದು ಒಂದು ಭಾಗವಾದರೆ ಇನ್ನೊಂದೂ ಇದೆ: ಅವನು ಒಂದೂ ಕರ್ಮ ಮಾಡುತ್ತಿಲ್ಲ, ಇಡೀ ಲೋಕವನ್ನೆ ಕರ್ಮ ಮಾಡಲು ತೊಡಗಿಸುತ್ತಾನೆ. ಅವನಲ್ಲಿ ಅಪರಂಪಾರ ಪ್ರೇರಕ ಶಕ್ತಿಯಿದೆ. ಅಕರ್ಮದ ಕೌಶಲ ಇದುವೇ. ಕೂರಿ ತುಂಬಿದ ಕರ್ಮ, ಅದುಮಿ ತುಂಬಿದ ಕರ್ಮ–ಅಕರ್ಮ. ಈ ಅಕರ್ಮದಲ್ಲಿ ಅನಂತ ಕಾರ್ಯಕ್ಕೆ ಅನುಕೂಲಿಸುವ ಶಕ್ತಿಯಿದೆ. ಆವಿಯಲ್ಲಿ ಆ ಶಕ್ತಿಯಿಲ್ಲವೆ? ಆವಿಯನ್ನು ತುಂಬಿಬಿಟ್ಟರೆ ಪ್ರಚಂಡ ಕೆಲಸ ಮಾಡುತ್ತದೆ. ತುಂಬಿಟ್ಟ ಆವಿಯಲ್ಲಿ ಅಪರಂಪಾರ ಶಕ್ತಿ ಹುಟ್ಟುತ್ತದೆ. ಅದು ಭಾರಿ ಗಾಡಿಗಳನ್ನೆಲ್ಲ ಸಹಜವಾಗಿ ಎಳೆಯುತ್ತದೆ. ಸೂರ್ಯನದೂ ಹಾಗೆಯೆ. ಅವನು ಲೇಶಮಾತ್ರವೂ ಕರ್ಮ ಮಾಡ. ಆದರೆ ೨೪ ಗಂಟೆಯೂ ಒಂದೇ ಸಮನೆ ಕೆಲಸ ಮಾಡುತ್ತಾನೆ. ಅವನನ್ನು ಕೇಳಿದರೆ 'ನಾನು ಏನೂ ಮಾಡೆನಲ್ಲ' ಎಂದಾನು. ಸೂರ್ಯನಂತೆ ಹಗಲಿರುಳೂ ಕೆಲಸ ಮಾಡಿಯೂ ಮಾಡದಿರುವುದು ಒಂದು ಬಗೆ; ಹಗಲಿರುಳೂ ಅನಂತ ಕರ್ಮ ಮಾಡುವುದು ಮತ್ತೊಂದು ಬಗೆ. ಸಂನ್ಯಾಸ ಈ ಎರಡೂ ಬಗೆಯಲ್ಲಿ ನಡೆದಿದೆ. ಎರಡೂ ಅಸಾಮಾನ್ಯವೆ. ಒಂದರಲ್ಲಿ ಕರ್ಮ ಪ್ರಕಟ, ಅಕರ್ಮಾವಸ್ಥೆ ಗುಪ್ತ. ಇನ್ನೊಂದರಲ್ಲಿ ಅಕರ್ಮ ಪ್ರಕಟ. ಅನಂತ ಕರ್ಮ ಆ ಯೋಗದಿಂದ ಆಗುತ್ತವೆ. ಈ ಅವಸ್ಥೆಯಲ್ಲಿ ಕರ್ಮ ತುರುಕಿ ತುಂಬಿರುತ್ತದೆಯಾಗಿ ಪ್ರಚಂಡ ಕರ್ಮವಾಗುತ್ತದೆ. ಇಂಥವನಿಗೂ ಸೋಮಾರಿಗೂ ಮಹದಂತರ. ಸೋಮಾರಿ ಬಳಲಿಯಾನು, ಬೇಸತ್ತಾನು. ಅಕರ್ಮಿ ಸಂನ್ಯಾಸಿ, ಕರ್ಮ ಶಕ್ತಿಯನ್ನೂ ತುಂಬಿಬಿಡುತ್ತಾನೆ; ಲೇಶ ಮಾತ್ರವೂ ಕರ್ಮ ಮಾಡ. ಕೈಕಾಲು ಆಡಿಸ. ಆದರೂ ಏನೂ ಮಾತಾಡದೆಯೆ ಅನಂತ ಕರ್ಮ ಮಾಡುತ್ತಾನೆ.

ಒಬ್ಬನಿಗೆ ಸಿಟ್ಟು ಬರುತ್ತದೆ. ನಮ್ಮದು ತಪ್ಪಿದ್ದಾಗ ಅವನು ಸಿಟ್ಟಾದರೂ ಅವನ ಬಳಿಗೆ ಹೋಗುತ್ತೇವೆ. ಅವನು ಆಗ ಮಾತಾಡಲೊಲ್ಲ. ಆ ಕರ್ಮ ತ್ಯಾಗದ ಪರಿಣಾಮ ಎಷ್ಟು? ಇನ್ನೊಬ್ಬ ಬಡಬಡ ಏನಾದರೂ ಹೇಳಿಯಾನು. ಇಬ್ಬರಿಗೂ ಸಿಟ್ಟೇ. ಒಬ್ಬ ಮೂಕ, ಒಬ್ಬ ಮಾತಾಳಿ.

ಎರಡೂ ಸಿಟ್ಟಿನ ರೀತಿಯೇ. ಮಾತಾಡದಿರುವುದೂ ಸಿಟ್ಟಿನ ರೀತಿಯೇ. ಅದರಿಂದಲೂ ಕೆಲಸವಾಗುತ್ತದೆ. ತಾಯಿ ತಂದೆ ಮಗುವಿನೊಡನೆ ಮಾತಾಡದಿದ್ದರೆ ಎಷ್ಟು ಪ್ರಚಂಡ ಪರಿಣಾಮವಾಗುತ್ತದೆ! ಮಾತಾಡುವ ಕರ್ಮವನ್ನು ಮಾಡದುದರಿಂದ ಆಗುವಷ್ಟು ಪ್ರಚಂಡ ಕರ್ಮ ಪ್ರತ್ಯಕ್ಷವಾಗಿ ಆ ಕರ್ಮ ಮಾಡಿದ್ದರೂ ಆಗುತ್ತಿರಲಿಲ್ಲ. ಆಡದೆಯೆ ಆದ ಪರಿಣಾಮ ಆಡಿದ್ದರೆ ಆಗುತ್ತಿರಲಿಲ್ಲ. ಜ್ಞಾನಿಯ ವಿಷಯವೆ ಹೀಗೆ. ಅವನ ಅಕರ್ಮ, ಅವನ ಸ್ವಸ್ಥ ತಿಷ್ಠೆ ಪ್ರಚಂಡ ಕರ್ಮ ಮಾಡುತ್ತದೆ. ಪ್ರಚಂಡ ಸಾಮರ್ಥ್ಯ ಉತ್ಪತ್ತಿ ಮಾಡುತ್ತದೆ. ಅಕರ್ಮಿಯಾಗಿದ್ದೂ ಅವನು ಮಾಡುವ ಇಷ್ಟೆಲ್ಲ ಕರ್ಮ ಕ್ರಿಯೆಯಲ್ಲಿ ಪ್ರಕಟವಾಗಲೇ ಆಗದು. ಹೀಗೆ ಇದು ಸಂನ್ಯಾಸದ ಎರಡನೆ ಬಗೆ.

ಹೀಗೆ ಸಂನ್ಯಾಸದ ಸರ್ವ ಖಟಿಪಿಟಿಯೂ ಒಂದು ಆಸನದಲ್ಲಿ ಪರ್ಯವಸಾನವಾಗುತ್ತದೆ.

ತುಕಾರಾಮ ಹೇಳುತ್ತಾನೆ: 'ನಾನೀಗ ತೆರವಾಗಿದೇನೆ. ಮೂಲೆಯಾಗಿ ಬಿದ್ದಿದೇನೆ. ಎಲ್ಲಾ ಉದ್ಯೋಗವೂ ಮುಗಿಯಿತು.' ತುಕಾರಾಮ ಬರಿದಾಗಿದಾನೆ. ಆದರೆ ಆ ಬರೀ ಚೀಲದಲ್ಲಿ ಪ್ರಚಂಡ ಪ್ರೇರಕ ಶಕ್ತಿಯಿದೆ. ಸೂರ್ಯ ಸ್ವತಃ ಕೈ ಬೀಸಿ ಕರೆಯ. ಆದರೂ ಅವನು ಕಂಡುಬಂದರೆ, ಸಾಕು—ಹಕ್ಕಿ ಹಾರುತ್ತವೆ; ಕುರಿಮರಿ ಕುಣಿಯುತ್ತವೆ; ದನ ಮೇಯಲಿಕ್ಕೆ ಹೊರಡುತ್ತವೆ; ವರ್ತಕರು ಅಂಗಡಿ ತೆಗೆಯುತ್ತಾರೆ; ಒಕ್ಕಲಿಗರು ಹೊಲಕ್ಕೆ ಹೋಗುತ್ತಾರೆ; ಲೋಕದಲ್ಲಿ ನಾನಾ ವ್ಯವಹಾರ ಪ್ರಾರಂಭವಾಗುತ್ತವೆ. ಸೂರ್ಯ ಇದ್ದರೆ ಸಾಕು, ಅನಂತ ಕರ್ಮ ಮೊದಲಾಗುತ್ತವೆ. ಈ ಅಕರ್ಮಾವಸ್ಥೆಯಲ್ಲಿ ಅನಂತ ಕರ್ಮದ ಪ್ರೇರಣೆ ತುಂಬಿ ತುಳುಕುತ್ತಿರುತ್ತದೆ; ಸಾಮರ್ಥ್ಯವೂ ತುಂಬಿ ತುರುಕಿರುತ್ತದೆ. ಇದು ಸಂನ್ಯಾಸದ ಎರಡನೆಯ ಅದ್ಭುತ ಬಗೆ.

### ೨೧. ಎರಡರ ಹೋಲಿಕೆ—ಶಬ್ದಾತೀತ

ಐದನೆಯ ಅಧ್ಯಾಯದಲ್ಲಿ ಸಂನ್ಯಾಸದ ಎರಡು ಬಗೆಯನ್ನೂ ಹೇಳಿದಾರೆ. ಒಬ್ಬ, ೨೪ ಗಂಟೆ ಕೆಲಸ ಮಾಡಿಯೂ ಏನೂ ಮಾಡ; ಇನ್ನೊಬ್ಬ ಕ್ಷಣಮಾತ್ರವೂ ಕೆಲಸ ಮಾಡದೆಯೆ ಎಲ್ಲವನ್ನೂ ಮಾಡುತ್ತಾನೆ.

ಮಾತಾಡಿಯೂ ಆಡದಂತೆ ಒಂದು; ಮಾತಾಡದೆಯೆ ಆಡಿದಂತೆ ಇನ್ನೊಂದು. ಹೀಗೆ ಈ ಎರಡನ್ನೂ ಹೋಲಿಸಿದಾರೆ. ಇದನ್ನು ವಿಚಾರ ಮಾಡಿದರೆ, ಮನನ ಮಾಡಿದರೆ, ಅದೇ ಅಪೂರ್ವ ಆನಂದ.

ಈ ವಿಷಯವೆ ಅಪೂರ್ವ ಉದಾತ್ತ! ಸಂನ್ಯಾಸದ ಕಲ್ಪನೆಯೆ ನಿಜವಾಗಿ ಪವಿತ್ರ ಭವ್ಯ. ಈ ಕಲ್ಪನೆಯನ್ನು ಮೊದಲು ಶೋಧಿಸಿ ತೆಗೆದವನಿಗೆ ಎಷ್ಟು ಧನ್ಯವಾದ ಅರ್ಪಿಸೋಣ. ಇದು ಉಜ್ವಲ ಕಲ್ಪನೆ.

ಮಾನವೀಯ ಬುದ್ಧಿ, ಮಾನವೀಯ ವಿಚಾರ ಮೇಲೇರಿದಾಗ, ಎಲ್ಲಕ್ಕಿಂತ ಹೆಚ್ಚು ಮೇಲೇರಿದಾಗ ಸಂನ್ಯಾಸದವರೆಗೆ ಮುಟ್ಟಿತು. ಅದನ್ನು ದಾಟಿ ಇನ್ನೂ ಯಾರೂ ಹೋಗಿಲ್ಲ. ಮೇಲೇರುವುದು ನಡೆದೇ ಇದೆ. ಆದರೆ ವಿಚಾರ ಅನುಭವ ಇಷ್ಟು ಮೇಲೆ ಏರಿದುದನ್ನು ಮತ್ತೆಲ್ಲೂ ನಾನು ಅರಿಯೆ. ಈ ಎರಡು ಬಗೆಯ ಯುಕ್ತ ಸಂನ್ಯಾಸದ ಕಲ್ಪನೆ ಯಾವುದೇ ಕಣ್ಣೆದಿರಿಗೆ ಬಂದರೂ ಅಪೂರ್ವ ಆನಂದವಾಗುತ್ತದೆ. ಆದರೆ ಭಾಷೆಯ, ವ್ಯವಹಾರದ ಈ ಜಗತ್ತಿನಲ್ಲಿ ಬಂದೊಡನೆ ಆನಂದ ಕುಗ್ಗುತ್ತದೆ. ಏನೋ ಕೆಳಗೆ ಉರುಳಿದಂತೆ ಅನಿಸುತ್ತದೆ. ಗೆಳೆಯರೊಂದಿಗೆ ಯಾವಾಗಲೂ ನಾನಿದನ್ನು ಹೇಳುತ್ತಿರುತ್ತೇನೆ. ಎಷ್ಟೋ ವರ್ಷಗಳಿಂದ ನಾನೀ ದಿವ್ಯ ವಿಚಾರಗಳ ಮನನ ಮಾಡುತ್ತಿದೇನೆ. ಇಲ್ಲಿ ಭಾಷೆ ಅರೆಬರೆಯಾಗುತ್ತದೆ. ಶಬ್ದಕ್ಕೆ ಇದು ಎಟುಕದು

'ಏನೂ ಮಾಡದೆಯೆ ಎಲ್ಲವನ್ನೂ ಮಾಡಿದಂತೆ; ಎಲ್ಲಾ ಮಾಡಿಯೂ ಏನೂ ಮಾಡದಂತೆ' ಎಂಬುದು ಎಂಥ ಉದಾತ್ತ, ರಸಮಯ, ಕಾವ್ಯಮಯ ಕಲ್ಪನೆ! ಕಾವ್ಯವೆಂದರೆ ಮತ್ತೇನು? ಕಾವ್ಯ ಪ್ರಪಂಚವೆಲ್ಲ ಈ ಕಾವ್ಯದ ಮುಂದೆ ನೀರಸ. ಈ ಕಲ್ಪನೆಯಲ್ಲಿ ಇರುವ ಆನಂದ, ಉತ್ಸಾಹ, ಸ್ಫೂರ್ತಿ, ದಿವ್ಯತೆ ಮತ್ತಾವ ಕಾವ್ಯದಲ್ಲೂ ಇಲ್ಲ. ಹೀಗೆ ಐದನೆಯ ಅಧ್ಯಾಯವನ್ನು ಉನ್ನತೋನ್ನತ ಪೀಠದಲ್ಲಿ ಕೂಡಿಸಿದಾರೆ. ನಾಲ್ಕನೆಯ ಅಧ್ಯಾಯದ ವರೆಗೆ ಕರ್ಮ–ವಿಕರ್ಮವನ್ನು ಹೇಳಿ ಇಲ್ಲಿ ಏಕಾಏಕಿ ಮೇಲೇರಿದಾರೆ. ಇಲ್ಲಿ ಅಕರ್ಮದಶೆಯ ಎರಡು ಪ್ರಕಾರಗಳನ್ನು ಹೋಲಿಸಿದಾರೆ. ಇಲ್ಲಿ ಭಾಷೆ ತಡವರಿಸುತ್ತದೆ. ಕರ್ಮಯೋಗಿ ಶ್ರೇಷ್ಠನೋ ಕರ್ಮಸಂನ್ಯಾಸಿ ಶ್ರೇಷ್ಠನೋ? ಯಾರು ಹೆಚ್ಚು ಕರ್ಮ ಮಾಡುತ್ತಾರೆ? ಹೇಳಲು ಬಾರದು. ಸಂನ್ಯಾಸದ

ಈ ದ್ವಿಮುಖ ಕಲ್ಪನೆ ಬಹಳ ಭವ್ಯ. ಎಲ್ಲಾ ಮಾಡಿ ಏನೂ ಮಾಡದುದು ಏನೂ ಮಾಡದೆ ಎಲ್ಲಾ ಮಾಡಿದುದು — ಎರಡೂ ಸಂನ್ಯಾಸವೆ, ಎರಡೂ ಯೋಗವೆ. ಹೋಲಿಸಲಿಕ್ಕೆಂದು ಒಂದನ್ನು ಸಂನ್ಯಾಸ ಎಂದರು, ಇನ್ನೊಂದನ್ನು ಯೋಗ ಎಂದರು.

## ೨೨. ಭೂಮಿತಿ - ಮೀಮಾಂಸೆಗಳ ದೃಷ್ಟಾಂತ

ಇನ್ನು ಇದರ ತುಲನೆ ಹೇಗೆ? ಯಾವುದಾದರೂ ಉದಾಹರಣೆ ಕೊಟ್ಟೇ ಮಾಡಬೇಕು. ಉದಾಹರಣೆ ಕೊಡಹೋದರೆ ಕೆಳಗುರುಳಿದಂತೆ ಆಗುತ್ತದೆ. ಆದರೆ ಕೆಳಗೆ ಇಳಿಯಲೇಬೇಕು. ನಿಜವಾಗಿ ನೋಡಿದರೆ, ಪೂರ್ಣ ಕರ್ಮಸಂನ್ಯಾಸ ಪೂರ್ಣ ಕರ್ಮಯೋಗದ ಕಲ್ಪನೆ ಈ ದೇಹದಲ್ಲಿ ಹಿಡಿಸಲಾರದು. ಆ ಕಲ್ಪನೆ ಈ ದೇಹವನ್ನು ಸೀಳಿಹಾಕೀತು. ಆದರೆ ಈ ಕಲ್ಪನೆಯನ್ನು ಸಮೀಪಿಸಿದ ಮಹಾಪುರುಷರ ಉದಾಹರಣೆಯನ್ನು ಗ್ರಹಿಸಿ ಮುಂಬರಿಯಬೇಕು. ಉದಾಹರಣೆ ಎಂದರೆ ಅದು ಅಪೂರ್ಣವೇ. ಅದನ್ನೇ ಪೂರ್ಣವೆಂದು ಒಂದು ಗಳಿಗೆ ತಿಳಿಯಬೇಕು.

ರೇಖಾಗಣಿತದಲ್ಲಿ ಸ, ರೆ, ಗ ಇದು ತ್ರಿಕೋಣವೆನ್ನಿ ಎನ್ನರೆ? Let ABC be a triangle. ಈ Let ಏನು? ಅನ್ನುವುದೇಕೊ? ಈ ತ್ರಿಕೋಣ ರೇಖೆ ಯಥಾರ್ಥ ರೇಖೆಯಲ್ಲ. ರೇಖೆಯ ಲಕ್ಷಣ ಹೀಗೆ, ಉದ್ದ ಇದೆ, ಅಗಲ ಇಲ್ಲ. ಅಗಲವೇ ಇಲ್ಲದೆ ಉದ್ದವನ್ನು ಹೇಗೆ ತೋರಬೇಕು? ಉದ್ದ ಎಂದರೆ ಅಗಲವೂ ಜೊತೆಯಲ್ಲೇ ಬಂತು, ಗೆರೆ ಎಳೆದರೆ ಸ್ವಲ್ಪವಾದರೂ ಅಗಲ ಇದ್ದೇ ಇರಬೇಕು. ಅಂತೇ ರೇಖಾಗಣಿತದಲ್ಲಿ ರೇಖೆ 'ಎನ್ನ'ದಿದ್ದರೆ ನಾಗದು. ಭಕ್ತಿಶಾಸ್ತ್ರದಲ್ಲೂ ಹೀಗೇ ತಾನೆ? ಆ ಚಿಕ್ಕ ಸಾಲಿಗ್ರಾಮದಲ್ಲಿ ಸರ್ವ ಬ್ರಹ್ಮಾಂಡದ ಧಣಿಯೆ ಇದಾನೆ ಎಂದುಕೊಳ್ಳಿ ಎನ್ನುತ್ತಾನೆ ಭಕ್ತ. ಇವನೆಲ್ಲೋ ಹುಚ್ಚ ಎಂದಾರು ಯಾರಾದರೂ. ಈ ರೇಖಾಗಣಿತದ ಹುಚ್ಚು ಏನು ಎಂದು ಕೇಳಿ. ಸ್ಪಷ್ಟವಾಗಿ ನಿಕರವಾಗಿ ಕಾಣುತ್ತಿರುವ ಗೆರೆಗೆ ಅಗಲ ಇಲ್ಲ ಎನ್ನು ಎಂದರೆ ಇದೆಂಥ ಹುಚ್ಚು? ಭೂತಕನ್ನಡಿಯಲ್ಲಿ ನೋಡಿದರೆ ಆ ಗೆರೆ ಅರ್ಧ ಅಂಗುಲ ದಪ್ಪವಾಗಿ ಕಂಡೀತು. ನೀನು ಆ ರೇಖಾಶಾಸ್ತ್ರದ ಮಾತನ್ನು ಒಪ್ಪುವಂತೆ, ಸಾಲಿಗ್ರಾಮದಲ್ಲಿ ಪರಮೇಶ್ವರ ಎಂದು ತಿಳಿದುಕೊ

ಎನ್ನುತ್ತದೆ ಭಕ್ತಿಶಾಸ್ತ್ರ. ಪರಮೇಶ್ವರ ಒಡೆಯಲಾರ, ಹರಿಯಲಾರ; ಈ ಸಾಲಿಗ್ರಾಮ ಒಡೆಯುತ್ತದಲ್ಲ ಎಂದರೆ ಅದು ವಿಚಾರದ ರೀತಿಯಲ್ಲ. ರೇಖಾಶಾಸ್ತ್ರದಲ್ಲಿ ' ತಿಳಿದುಕೊ ' ಆಗಬಹುದು; ಭಕ್ತಿಶಾಸ್ತ್ರದಲ್ಲೇಕೆ ಬೇಡ? ಬಿಂದು ಎನ್ನುತ್ತೀಯೆ. ಹಲಗೆಯ ಮೇಲೆ ಬಿಂದುವನ್ನು ಬರೆಯುತ್ತೀಯೆ. ಬಿಂದುವೇನು ಬಂತು? ಅದು ಒಂದು ಒಳ್ಳೆಯ ವರ್ತುಲ. ಬಿಂದುವಿನ ವ್ಯಾಖ್ಯೆ ಪರಬ್ರಹ್ಮನ ವ್ಯಾಖ್ಯೆಯಿದ್ದಂತೆ. ಬಿಂದುವಿಗೆ ಉದ್ದ ಅಗಲ ದಪ್ಪ ಯಾವುದೂ ಇಲ್ಲ. ಲಕ್ಷಣವೇನೋ ಇದು. ಆದರೆ ಹಲಗೆಯ ಮೇಲೆ ಬಿಂದುವನ್ನು ಬರೆಯುತ್ತೀಯೆ. ಬಿಂದು ಬರೀ ಹೆಸರು, ಬರೀ ಅಸ್ತಿತ್ವ. ಅದಕ್ಕೆ ಮೂರೂ ಪರಿಣಾಮ ಇಲ್ಲ. ಎಂದರೆ ನಿಜವಾದ ಬಿಂದು, ನಿಜವಾದ ತ್ರಿಕೋಣ ಬರೀ ಹೆಸರು, ಬರೀ ವ್ಯಾಖ್ಯೆ. ಆದರೂ ನಾವು ಅದನ್ನು ಒಪ್ಪಿ ನಡೆಯಬೇಕು. ಭಕ್ತಿಶಾಸ್ತ್ರದಲ್ಲಿ, ಅಚ್ಛೇದ್ಯನಾದ ಸರ್ವವ್ಯಾಪಿ ದೇವರು ಸಾಲಿಗ್ರಾಮದಲ್ಲಿ ಇದಾನೆಂದು ತಿಳಿದು ನಡೆಯಬೇಕು. ನಾವೂ ಹೀಗೆಯೆ ಕಾಲ್ಪನಿಕ ದೃಷ್ಟಾಂತದಿಂದ ಹೋಲಿಸೋಣ

ಮೀಮಾಂಸಕರು ಒಂದು ಭಾರಿ ವಿನೋದ ಮಾಡಿದಾರೆ. ದೇವರು ಎಲ್ಲಿದಾನೆ ಎಂದು ಚರ್ಚಿಸುತ್ತಾ ಅವರು ಸೊಗಸಾದ ವಿವರಣೆ ಕೊಟ್ಟಿದಾರೆ. ವೇದದಲ್ಲಿ ಇಂದ್ರ ವರುಣ ಅಗ್ನಿ ಇತ್ಯಾದಿ ದೇವತೆಗಳಿದಾರೆ, ಇವರ ಲಕ್ಷಣವನ್ನು ಚರ್ಚಿಸುವಾಗ ಮೀಮಾಂಸಕರಲ್ಲಿ ಒಂದು ಪ್ರಶ್ನೆ ಬರುತ್ತದೆ: ಇಂದ್ರ ಹೇಗಿದಾನೆ? ಅವನ ರೂಪವೇನು? ಎಲ್ಲಿರುತ್ತಾನೆ? ಮೀಮಾಂಸಕರು ಹೇಳುತ್ತಾರೆ: ಇಂದ್ರಶಬ್ದವೇ ಇಂದ್ರನ ರೂಪ. ಅದರಲ್ಲೇ ಅವನು ಇರುತ್ತಾನೆ. ಇ, ಆಮೇಲೆ ಅನುಸ್ವಾರ, ಮುಂದೆ ದ್ರ— ಇದೇ ಇಂದ್ರನ ಸ್ವರೂಪ. ಇದೇ ಅವನ ಮೂರ್ತಿ. ಇದೇ ಪ್ರಮಾಣ. ವರುಣ ದೇವತೆ ಹೇಗೆ? ಹೀಗೇ—ಮೊದಲು ವ. ಆಮೇಲೆ ರು-ಣ ಇದೇ ಅವನ ರೂಪ. ಹೀಗೆ ಉಳಿದ ಎಲ್ಲ ದೇವತೆಗಳೂ ಅಕ್ಷರರೂಪಧಾರಿಗಳು. ದೇವರೆಲ್ಲ ಅಕ್ಷರಮೂರ್ತಿಗಳೆಂಬ ಕಲ್ಪನೆಯೆ ಮಧುರ. ದೇವರೆಂಬ ಕಲ್ಪನೆ, ಆ ವಸ್ತು ಆಕಾರದಲ್ಲಿ ಅಡಕವಾಗುವಂತಿಲ್ಲ. ಆ ಕಲ್ಪನೆಯನ್ನು ಸೂಚಿಸಲು ಅಕ್ಷರದ ಗುರುತು ಸಾಕು. ಈಶ್ವರ ಹೇಗಿದಾನೆ? ಹೀಗೇ. ಮೊದಲು ಈ, ಆಮೇಲೆ ಶ್ವ, ಆಮೇಲೆ ರ. ಓಂಕಾರ ಚಮತ್ಕಾರ ಮಾಡಿತು. ಓಂ ಎಂಬ ಒಂದು

ಅಕ್ಷರವೇ ಈಶ್ವರ. ಈಶ್ವರನನ್ನು ಒಂದು ಸಂಜ್ಞೆಯಾಗಿ ಮಾಡಿತು. ಅಂಥಾ ಸಂಜ್ಞೆಗಳನ್ನು ನಿರ್ಮಿಸಬೇಕಾಗುತ್ತದೆ. ಮೂರ್ತಿಯಲ್ಲಿ, ಆಕಾರದಲ್ಲಿ ಈ ವಿಶಾಲ ಕಲ್ಪನೆಯನ್ನು ಹುದುಗಿಸಲಳವಲ್ಲ. ಆದರೆ ಮನುಷ್ಯನ ಬಯಕೆ ಬಹಳ ದೊಡ್ಡದು. ಈ ಕಲ್ಪನೆಯನ್ನು ಮೂರ್ತಿಯೊಳಗೆ ಅಡಗಿಸಲು ಯತ್ನಿಸುತ್ತಾನೆ.

### ೨೩. ಸಂನ್ಯಾಸಿ - ಯೋಗಿ ಇಬ್ಬರೂ ಒಂದೇ : ಶುಕ - ಜನಕರಂತೆ

ಸಂನ್ಯಾಸ, ಯೋಗಗಳೆರಡೂ ಅತ್ಯುಚ್ಚ ಕಲ್ಪನೆ. ಪೂರ್ಣ ಸಂನ್ಯಾಸ, ಪೂರ್ಣಯೋಗಗಳ ಕಲ್ಪನೆ ಈ ದೇಹದಲ್ಲಿ ಅಡಗಲಾರದು ದೇಹದಲ್ಲಿ ಈ ಧ್ಯೇಯ ಅಡಗದಿದ್ದರೂ ವಿಚಾರದಲ್ಲಿ ಅಡಗುತ್ತದೆ. ಪೂರ್ಣ ಯೋಗಿ ಪೂರ್ಣ ಸಂನ್ಯಾಸಿಗಳು ಕಲ್ಪನೆಯಲ್ಲೇ ಇದ್ದಾರು, ಆದರ್ಶವಾಗಿ ಅಪ್ರಾಪ್ಯವಾಗಿ ಇದ್ದಾರು. ಆದರೆ ಉದಾಹರಣೆಗಾಗಿ ಆ ಕಲ್ಪನೆಗೆ ತೀರ ಸಮೀಪ ಹೋದವರನ್ನು ಹೆಸರುಗೊಳ್ಳಬೇಕು. ರೇಖಾಗಣಿತದಂತೆ ಹೇಳಬೇಕು—ಇವನು ಪೂರ್ಣಯೋಗಿ, ಅವನು ಪೂರ್ಣ ಸಂನ್ಯಾಸಿ ಎಂದುಕೊಳ್ಳಿ. ಸಂನ್ಯಾಸಕ್ಕೆ ಶುಕ ಯಾಜ್ಞವಲ್ಕ್ಯರ ಉದಾಹರಣೆ ಕೊಡುತ್ತಾರೆ. ಜನಕ, ಶ್ರೀ ಕೃಷ್ಣರು ಕರ್ಮಯೋಗಿಗಳೆಂದು ಗೀತೆ ಹೇಳಿದೆ ಲೋಕಮಾನ್ಯರು 'ಗೀತಾರಹಸ್ಯ'ದಲ್ಲಿ ಒಂದು ಪಟ್ಟಿ ಮಾಡಿದಾರೆ : ಜನಕ, ಶ್ರೀ ಕೃಷ್ಣರು ಈ ದಾರಿಯಲ್ಲಿ ಹೋದರು ; ಶುಕ, ಯಾಜ್ಞವಲ್ಕ್ಯರು ಈ ಹಾದಿಯಲ್ಲಿ ಹೋದರು—ಎಂದು. ಆದರೆ ಈ ಪಟ್ಟಿಯನ್ನು ಒದ್ದೆಬೆರಳಿನಿಂದ ಬರೆದ ಅಕ್ಷರದಂತೆ ಅಳಿಸಬಹುದು. ಯಾಜ್ಞವಲ್ಕ್ಯರು ಸಂನ್ಯಾಸಿ, ಜನಕ ಕರ್ಮಯೋಗಿ. ಸಂನ್ಯಾಸಿ ಯಾಜ್ಞವಲ್ಕ್ಯನಿಗೆ ಕರ್ಮಯೋಗಿ ಜನಕ ಶಿಷ್ಯ. ಜನಕನ ಶಿಷ್ಯ ಶುಕ ಸಂನ್ಯಾಸಿ. ಸಂನ್ಯಾಸಿ—ಕರ್ಮಯೋಗಿ—ಸಂನ್ಯಾಸಿ. ಹೀಗಿದೆ ಈ ಸರ. ಯೋಗ ಸಂನ್ಯಾಸ ಎರಡೂ ಒಂದೇ ಪರಂಪರೆ.

ಶುಕಾಚಾರ್ಯನಿಗೆ ವ್ಯಾಸರು ಹೇಳಿದರು : " ಶುಕ, ನೀನು ಜ್ಞಾನಿ. ಆದರೆ ಗುರುಮುದ್ರೆ ನಿನಗೆ ಬಿದ್ದಿಲ್ಲ. ನೀನು ಜನಕನ ಬಳಿಗೆ ಹೋಗು." ಶುಕಾಚಾರ್ಯ ಹೊರಟ. ಜನಕ ಮೂರನೆ ಅಂತಸ್ತಿನಲ್ಲಿ ದಿವಾನಖಾನೆಯಲ್ಲಿದ್ದ. ಶುಕಾಚಾರ್ಯ ಅಡವಿಯಲ್ಲಿದ್ದವನು. ನಗರವನ್ನು ನೋಡುತ್ತ

ಹೊರಟ. ಜನಕ ಅವನನ್ನು ಕೇಳಿದ—' ಏಕೆ ಬಂದೆ ? ' ಶುಕ ಹೇಳಿದ : 'ಜ್ಞಾನಾರ್ಥಿಯಾಗಿ.' 'ಯಾರು ಕಳಿಸಿದರು ?' 'ವ್ಯಾಸರು.' 'ಎಲ್ಲಿಂದ ಬಂದೆ ? 'ಆಶ್ರಮದಿಂದ.' 'ಆಶ್ರಮದಿಂದ ಬರುವಾಗ ಬೀದಿಯಲ್ಲಿ ಏನು ನೋಡಿದೆ ?' 'ಎಲ್ಲಿ ನೋಡಿದರೂ ಸಕ್ಕರೆ ಮಿಠಾಯಿ ಕಾಣಿಸಿತು.' 'ಮತ್ತೇನು ?' 'ಓಡಾಡುವ ಮಾತಾಡುವ ಸಕ್ಕರೆ ಗೊಂಬೆಗಳು.' 'ಆಮೇಲೆ ?' 'ಇಲ್ಲಿಗೆ ಬರುವಾಗ ಸಕ್ಕರೆಯ ಕಲ್ಲೊಂದು ಕಾಲಿಗೆ ತಗುಲಿತು.' 'ಆಮೇಲೆ ?' 'ಎಲ್ಲವೂ ಸಕ್ಕರೆಯ ಚಿತ್ರ.' 'ಈಗೇನು ನೋಡುತ್ತಿದ್ದೀಯೆ ?' 'ಒಂದು ಸಕ್ಕರೆಗೊಂಬೆ ಇನ್ನೊಂದು ಸಕ್ಕರೆ ಗೊಂಬೆಯೊಡನೆ ಮಾತಾಡುತ್ತಿದೆ.' ಜನಕ ಹೇಳಿದ—' ಹೋಗು, ನಿನಗೆ ಸರ್ವಜ್ಞಾನವೂ ಲಭಿಸಿದೆ.' ಜನಕನಿಂದ ಬೇಕಾಗಿದ್ದ ಪ್ರಶಂಸಾಪತ್ರ ಸಿಕ್ಕಿತು. ವಿಷಯ ಇದು : ಕರ್ಮಯೋಗಿ ಜನಕ ಸಂನ್ಯಾಸಿ ಶುಕಾಚಾರ್ಯರನ್ನು ಶಿಷ್ಯನೆಂದು ಒಪ್ಪಿದ. ಶುಕಾಚಾರ್ಯ ಸಂನ್ಯಾಸಿಯೇ. ಆದರೆ ಪ್ರಸಂಗದ ವಿಲಕ್ಷಣತೆಯನ್ನು ನೋಡಿ. ಪರೀಕ್ಷಿತನಿಗೆ ಶಾಪ ದೊರೆಯಿತು—ಏಳು ದಿನದಲ್ಲಿ ನೀನು ಸಾಯುತ್ತೀಯೆ. ಇನ್ನು ಸಾಯುವ ಸಿದ್ಧತೆ ಮಾಡಬೇಕು. ಹೇಗೆ ಸಾಯಬೇಕು ಎಂಬುದನ್ನು ಕಲಿಸುವ ಗುರು ಅವನಿಗೆ ಬೇಕಿತ್ತು. ಅವನು ಶುಕನನ್ನು ಬೇಡಿದ. ಶುಕಾಚಾರ್ಯ ಬಂದು ಕೂತ. ೨೪×೭=೧೬೮ ಗಂಟೆ ಪದ್ಮಾಸನಸ್ಥನಾಗಿ ಭಾಗವತವನ್ನು ಉಪದೇಶ ಮಾಡಿದ. ಕೂತವನು ಏಳಲೇ ಇಲ್ಲ. ಉಪದೇಶ ಮಾಡುತ್ತಲೇ ಇದ್ದ ಇದರಲ್ಲೇನು ವಿಶೇಷ ? ಏಳು ದಿನ ಒಂದೇ ಸಮನೆ ದುಡಿದರೂ ಅವನಿಗೇನೂ ಅನಿಸಲೇ ಇಲ್ಲ. ಇದೇ ವಿಶೇಷ. ಇಷ್ಟು ಕರ್ಮ ಮಾಡಿದರೂ ಅವನು ಕರ್ಮವನ್ನೇ ಮಾಡಲಿಲ್ಲ. ಶ್ರಮದ ಭಾವನೆಯೇ ಇರಲಿಲ್ಲ. ಅಂತೇ ಈ ಕರ್ಮಯೋಗ—ಸಂನ್ಯಾಸಗಳಲ್ಲಿ ಭೇದವಿಲ್ಲ.

ಭಗವಂತ ಹೇಳಿಲ್ಲವೇ—'ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ,' ಸಾಂಖ್ಯ - ಯೋಗ, ಸಂನ್ಯಾಸ - ಯೋಗ, ಎರಡೂ ಒಂದೇ ಎಂದು ತಿಳಿದವನಿಗೆ ಗುಟ್ಟು ತಿಳಿದಂತೆ. ಒಬ್ಬ ಮಾಡದೆ ಮಾಡುವವನು, ಇನ್ನೊಬ್ಬ ಮಾಡಿ ಮಾಡದವನು. ಸದಾ ಸಮಾಧಿಸ್ಥನಾದ ನಿರ್ವಿಕಾರ ಸಂನ್ಯಾಸಿಯೊಬ್ಬ ನಮ್ಮೊಡನೆ ನಾಲ್ಕೆಂಟು ದಿನವಿರಲಿ—ಎಷ್ಟು ಬೆಳಕು,

ಸ್ಫೂರ್ತಿ ಕೊಟ್ಟಾನು! ಬಹುಕಾಲದಿಂದ ಆಗದಿದ್ದ ಕೆಲಸವೆಲ್ಲ ಅವನ ದರ್ಶನ ಮಾತ್ರದಿಂದ ಆಗಿಹೋಗುತ್ತವೆ. ಭಾವಚಿತ್ರ ನೋಡಿದರೆ, ಸತ್ಪುರುಷರ ಚಿತ್ರ ನೋಡಿದರೆ, ಮನಸ್ಸಿನಲ್ಲಿ ಪವಿತ್ರತೆ, ಭಕ್ತಿ ಹುಟ್ಟುವುದಾದರೆ ಜೀವಂತ ಸಂನ್ಯಾಸಿಯನ್ನು ನೋಡಿದರೆ ಎಷ್ಟು ಪ್ರೇರಣೆ ಆಗಬೇಡ. ಸಂನ್ಯಾಸಿ-ಯೋಗಿ ಇಬ್ಬರೂ ಲೋಕಸಂಗ್ರಹ ಮಾಡುತ್ತಾರೆ. ಹೊರಗೆ ಕರ್ಮತ್ಯಾಗದಂತೆ ಕಂಡರೆ ಕೆಲವು ನಲ ಆ ತ್ಯಾಗದಲ್ಲಿ ಕರ್ಮ ತುಂಬಿರುತ್ತದೆ. ಅದರಲ್ಲಿ ಅನಂತಸ್ಫೂರ್ತಿ ತುಂಬಿದೆ. ಜ್ಞಾನಿ-ಸಂನ್ಯಾಸಿ, ಜ್ಞಾನಿ-ಕರ್ಮಯೋಗಿ ಇಬ್ಬರೂ ಒಂದೇ ಸಿಂಹಾಸನದಲ್ಲಿ ಕೂಡುವವರು. ಸಂಜ್ಞೆ ಬೇರೆ ಬೇರೆಯಾದರೂ ಅರ್ಥ ಒಂದೇ. ಒಂದೇ ತತ್ವದ ಎರಡು ಮುಖ, ಅತಿ ವೇಗವಾಗಿ ತಿರುಗುವಾಗ ಯಂತ್ರ ಸ್ಥಿರವಾಗಿ ಕಾಣುತ್ತದೆ; ತಿರುಗುತ್ತಿಲ್ಲ ಎನಿಸುತ್ತದೆ. ಸಂನ್ಯಾಸಿಯೂ ಹೀಗೆ. ಅವನ ಶಾಂತಿ ಸ್ಥಿರತೆಗಳಿಂದ ಅನಂತ ಪ್ರೇರಣೆ ಹೊರಹೊಮ್ಮುತ್ತದೆ. ಭಗವಾನ್ ಬುದ್ಧ, ಮಹಾವೀರರು ಅಂಥ ವ್ಯಕ್ತಿಗಳು. ಸಂನ್ಯಾಸದ ಸರ್ವ ಕಾರ್ಯವೂ ಒಂದೇ ಒಂದು ಆಸನದಲ್ಲಿ ನಿಷ್ಕ್ರಿಯವಾಗಿದ್ದರೂ ಅದು ಪ್ರಚಂಡ ಕರ್ಮ ಮಾಡುತ್ತದೆ. ಸಾರಾಂಶ: ಸಂನ್ಯಾಸಿ ಎಂದರೂ ಒಂದೇ, ಯೋಗಿ ಎಂದರೂ ಒಂದೇ. ಶಬ್ದ ಬೇರೆ, ಅರ್ಥ ಒಂದು. ಕಲ್ಲು ಎಂದರೂ ಬಂಡೆ, ಬಂಡೆ ಎಂದರೂ ಕಲ್ಲು. ಹಾಗೆಯೇ ಕರ್ಮಯೋಗಿ ಎಂದರೆ ಸಂನ್ಯಾಸಿ, ಸಂನ್ಯಾಸಿ ಎಂದರೆ ಕರ್ಮಯೋಗಿ.

## ೨೪. ಸಂನ್ಯಾಸಕ್ಕಿಂತ ಯೋಗ ವಿಶೇಷ

ಆದರೂ ಒಂದು ಕೋಡು ಮೇಲಿಟ್ಟಿದಾನೆ ಭಗವಂತ. ಸಂನ್ಯಾಸಕ್ಕಿಂತ ಕರ್ಮಯೋಗ ಶ್ರೇಷ್ಠ ಎಂದಿದಾನೆ. ಎರಡೂ ಒಂದೇ ಆದರೆ ಹೀಗೇಕೆ ಹೇಳಬೇಕು? ಇದೇನು ವಿಚಿತ್ರ ಮತ್ತೆ? ಇದು ಸಾಧಕನ ದೃಷ್ಟಿಯಿಂದ ಹೇಳಿದ ಮಾತು. ಏನೂ ಕರ್ಮ ಮಾಡದೆ ಎಲ್ಲವನ್ನೂ ಮಾಡುವುದು ಕೇವಲ ಸಿದ್ಧರಿಗೆ ಸಾಧ್ಯ; ಸಾಧಕರಿಗೆ ಸಾಧ್ಯವಿಲ್ಲ. ಆದರೆ ಎಲ್ಲವನ್ನೂ ಮಾಡುತ್ತಾ ಏನನ್ನೂ ಮಾಡದಿರುವುದನ್ನು ಸ್ವಲ್ಪವಾದರೂ ಅನುಕರಿಸಬಹುದಾಗಿದೆ. ಒಂದು ಸಾಧನಿಕನಿಗಲ್ಲ; ಸಿದ್ಧನಿಗೇ ಸಾಧ್ಯ, ಎರಡನೆಯದು

ಸಾಧಕನಿಗೂ ಕೆಲಮಟ್ಟಿಗೆ ಸಾಧ್ಯ. ಕರ್ಮವನ್ನೇ ಮಾಡದೆ ಎಲ್ಲವನ್ನೂ ಮಾಡಿದಂತಿರುವುದು ಗೂಢವಾಗಿ ಸಾಧಕನಿಗೆ ತಿಳಿಯದಾದೀತು. ಸಾಧಕನಿಗೆ ಕರ್ಮಯೋಗ ದಾರಿ; ನೆಲೆಯೂ ಹೌದು. ಸಂನ್ಯಾಸ ದಾರಿಯಲ್ಲ, ನೆಲೆ. ಕರ್ಮಯೋಗ ಎರಡೂ ಹೌದು. ಅಂತೇ ಸಾಧಕನಿಗೆ ಅದಕ್ಕಿಂತ ಇದು ಶ್ರೇಷ್ಠ.

ಮುಂದೆ ೧೨ನೇ ಅಧ್ಯಾಯದಲ್ಲಿ ನಿರ್ಗುಣಕ್ಕಿಂತ ಸಗುಣವನ್ನೇ ಭಗವಂತ ಶ್ರೇಷ್ಠವೆಂದಿದಾನೆ. ಸಗುಣ ಎಲ್ಲ ಇಂದ್ರಿಯಗಳಿಗೂ ಕೆಲಸ ಕೊಡುತ್ತದೆ. ನಿರ್ಗುಣ ಹಾಗಲ್ಲ. ನಿರ್ಗುಣದಲ್ಲಿ ಕೈ ವ್ಯರ್ಥ, ಕಾಲು ವ್ಯರ್ಥ, ಕಣ್ಣು ವ್ಯರ್ಥ. ಕಣ್ಣು, ಕಿವಿ ಎಲ್ಲ ಇಂದ್ರಿಯಗಳೂ ಕರ್ಮಶೂನ್ಯವಾಗುತ್ತವೆ. ಸಾಧಕನಿಗೆ ಅದು ಸಾಧ್ಯವಾಗದು. ಸಗುಣದಲ್ಲಿ ಹಾಗಲ್ಲ. ಕಣ್ಣು ರೂಪು ನೋಡುತ್ತದೆ, ಕಿವಿ ಕೀರ್ತನೆ ಕೇಳುತ್ತದೆ, ಕಾಲು ಯಾತ್ರೆ ಮಾಡುತ್ತದೆ, ಕೈ ಪೂಜೆ ಮಾಡುತ್ತದೆ, ಜನರ ಸೇವೆ ಮಾಡುತ್ತದೆ. ಹೀಗೆ ಎಲ್ಲಾ ಇಂದ್ರಿಯಗಳಿಗೂ ಕೆಲಸ ಕೊಟ್ಟು, ಮೆಲ್ಲಮೆಲ್ಲನೆ ಅದನ್ನು ಹರಿಮಯ ಮಾಡಬಹುದು. ನಿರ್ಗುಣದಲ್ಲಿ ಎಲ್ಲವೂ ಕಟ್ಟು. ನಾಲಗೆ ಕಟ್ಟು, ಕಿವಿ ಮುಚ್ಚು, ಕೈಕಾಲು ಕಟ್ಟು. ಈ ಎಲ್ಲಾ ಕಟ್ಟುಗಳ ರೀತಿಯನ್ನು ಕಂಡು ಸಾಧಕ ಗಾಬರಿಯಾಗಬೇಕಾದುದೇ! ಅವನ ಚಿತ್ತದಲ್ಲಿ ನಿರ್ಗುಣ ನಾಟೀತು ಹೇಗೆ? ಸುಮ್ಮನೆ ಕೂತರೂ ಅವನ ಮನಸ್ಸಿನಲ್ಲಿ ಅಡ್ಡತಿಡ್ಡ ವಿಚಾರ ಆಡತೊಡಗಿಯಾವು. ಇಂದ್ರಿಯಗಳ ಸ್ವಭಾವವೇ ಹಾಗೆ. ಜಾಹೀರಾತು ಹೀಗೇ ಅಲ್ಲವೆ? 'ಓದಬೇಡಿ' ಎಂದು ಮೇಲೆ ಬರೆಯುತ್ತಾರೆ. 'ಇದೇನಪ್ಪ ಓದಬಾರದುದು, ಮೊದಲು ಓದಿ ನೋಡೋಣ' ಎನ್ನುತ್ತಾನೆ ಓದುಗ. ಆ 'ಓದಬೇಡಿ' ಎಂದರೆ ಓದಿ ಎಂತ. ಮನುಷ್ಯ ಅದನ್ನು ತಪ್ಪದೆ ಓದುತ್ತಾನೆ. ನಿರ್ಗುಣದಲ್ಲಿ ಮನಸ್ಸು ಸುತ್ತಾಡುತ್ತಿದ್ದೀತು. ಸಗುಣದಲ್ಲಿ ಹಾಗಲ್ಲ. ಅದರಲ್ಲಿ ಆರತಿಯಿದೆ, ಪೂಜೆಯಿದೆ, ಸೇವೆಯಿದೆ, ಭೂತದಯೆ ಇದೆ. ಇಂದ್ರಿಯಗಳಿಗೆ ಕೆಲಸವಿದೆ. ಎಲ್ಲ ಇಂದ್ರಿಯಗಳಿಗೂ ಕೆಲಸ ಹೊಂದಿಸಿಕೊಟ್ಟು ಮನಸ್ಸಿಗೆ ಎಲ್ಲಿಗೆ ಬೇಕೋ ಅಲ್ಲಿಗೆ ಹೋಗೆಂದು ಹೇಳು. ಆಗ ಮನಸ್ಸು ಹೋಗಲಾರದು. ಅಲ್ಲೇ ವಿಹರಿಸೀತು. ತನಗೆ ತಿಳಿಯದೆಯೆ ಏಕಾಗ್ರವಾದೀತು. ಒಂದೇ ಕಡೆ ಕೂಡೆಂದು ಹೇಳಿದರೆ ಮಾತ್ರ ಓಡಿಯೇ

ಹೋದೀತು. ಒಂದೊಂದು ಇಂದ್ರಿಯಕ್ಕೂ ಚಲೋ ಕೆಲಸ ಕೊಟ್ಟು 'ಮನಸ್ಸಿಗೆ ಬಂದಲ್ಲಿ ಹೋಗು' ಎಂದರೆ ಹೋಗದು. ಹೋಗಲು ಅದಕ್ಕೆ ಸ್ವಾತಂತ್ರ್ಯ ಕೊಟ್ಟರೆ 'ನಾನು ಇಲ್ಲೇ ಕೂತೆ' ಎನ್ನುತ್ತದೆ. ಸುಮ್ಮನೆ ಕೂಡು ಎಂದರೆ 'ಹೋಗುತ್ತೇನೆ' ಎನ್ನುತ್ತದೆ.

ದೇಹಧಾರಿಯಾದವನಿಗೆ ಸುಲಭತೆಯಲ್ಲಿ ನಿರ್ಗುಣಕ್ಕಿಂತ ಸಗುಣವೇ ಶ್ರೇಷ್ಠ. ಕರ್ಮ ಮಾಡುತ್ತಲಿದ್ದು ಅದನ್ನು ನೀಗಿಕೊಳ್ಳುವ ದಾರಿ ಕರ್ಮ ಮಾಡದೆಯೆ ಮಾಡಿದಂತೆನಗುವ ದಾರಿಗಿಂತ ಶ್ರೇಷ್ಠ; ಇದು ಸುಲಭ. ಕರ್ಮಯೋಗದಲ್ಲಿ ಪ್ರಯತ್ನ, ಅಭ್ಯಾಸಗಳಿಗೆ ಸ್ಥಾನವಿದೆ ಸರ್ವ ಇಂದ್ರಿಯ ಗಳನ್ನೂ ನಿಗ್ರಹಿಸಿ ಮೆಲ್ಲಮೆಲ್ಲನೆ ಎಲ್ಲ ಉದ್ಯೋಗದಿಂದಲೂ ಮನಸ್ಸನ್ನು ಹೊರಸೆಳೆದುಕೊಳ್ಳಲು ಕರ್ಮಯೋಗದಲ್ಲಿ ಅವಕಾಶವಿದೆ. ಇವೊತ್ತು ಈ ಉಪಾಯ ಸಾಧ್ಯವಲ್ಲದಿದ್ದರೂ ನಾಳೆ ಸಾಧ್ಯವಾಗಬಲ್ಲದು. ಬಾಯಿ ಬಿಡದೆ ಮಾತಾಡುವುದು ಕಠಿನ. ಕರ್ಮಯೋಗ ಅನುಕರಣಕ್ಕೆ ಸುಲಭ. ಇದೇ ಸಂನ್ಯಾಸಕ್ಕಿಂತ ಇದರ ಹೆಚ್ಚುಗಾರಿಕೆ. ಆದರೂ ಪೂರ್ಣಾವಸ್ಥೆಯಲ್ಲಿ ಎರಡೂ ಒಂದೇ; ಪೂರ್ಣ ಕರ್ಮಯೋಗ, ಪೂರ್ಣ ಸಂನ್ಯಾಸ ಎರಡೂ ಒಂದೇ. ಹೆಸರು ಎರಡು. ನೋಡಲಿಕ್ಕೆ ಭಿನ್ನ. ಆದರೂ ಎರಡೂ ಒಂದೇ. ಒಂದು ಕಡೆ ಕರ್ಮದ ಭೂತ ಹೊರಗಡೆ ನಿಂತು ಕುಣಿಯುತ್ತಿದ್ದರೂ ಒಳಗೆ ಶಾಂತಿ. ಇನ್ನೊಂದರಲ್ಲಿ ಕಣ್ಣು ಕೂಡ ಮಿಟುಕಿಸದೆಯೆ ಮೂರು ಲೋಕ ಗಳನ್ನು ಅಲ್ಲಾಡಿಸುವ ಶಕ್ತಿ. ಮೇಲೆ ಕಂಡಂತೆ ಒಳಗೆ ಇಲ್ಲದಿರುವುದೇ ಇವೆರಡರ ಲಕ್ಷಣ. ಪೂರ್ಣ ಕರ್ಮಯೋಗವೆ ಸಂನ್ಯಾಸ; ಪೂರ್ಣ ಸಂನ್ಯಾಸವೇ ಕರ್ಮಯೋಗ. ಏನೂ ಭೇದವಿಲ್ಲ. ಆದರೆ ಸಾಧಕನಿಗೆ ಕರ್ಮಯೋಗ ಸುಲಭ. ಪೂರ್ಣಾವಸ್ಥೆಯಲ್ಲಿ ಎರಡೂ ಒಂದೇ.

ಚಾಂಗದೇವ ಜ್ಞಾನದೇವನಿಗೆ ಒಂದು ಪತ್ರ ಕಳಿಸಿದ, ಬರೀ ಕೋರಾ ಕಾಗದ. ಚಾಂಗದೇವನಿಗಿಂತ ಜ್ಞಾನದೇವ ಚಿಕ್ಕವನು; ಆದರೆ ಜ್ಞಾನದಲ್ಲಿ ಹಿರಿಯ. ತೀರ್ಥರೂಪ ಎಂದಾರೇ,—ವಯಸ್ಸಿನಲ್ಲಿ ಚಿಕ್ಕವನು; ಚಿರಂಜೀವ ಎಂದಾರೇ,—ಜ್ಞಾನವೃದ್ಧ! ಅಂತೇ ಚಾಂಗದೇವ ಬರೀ ಕಾಗದವನ್ನು ಕಳಿಸಿದ. ಅದು ಮೊದಲು ನಿವೃತ್ತಿನಾಥನ ಕೈಗೆ ಬಿತ್ತು. ಅದನ್ನು ಓದಿ ಅವನು ಜ್ಞಾನೇಶ್ವರನಿಗೆ ಕೊಟ್ಟ. ಆತ ಮುಕ್ತಾಬಾಯಿಗೆ ಅದನ್ನು

ಓದಲು ಕೊಟ್ಟ. ಮುಕ್ತಾಬಾಯಿ ಅದನ್ನು ಓದಿ ಹೀಗೆಂದಳು : ಚಾಂಗ್ಯಾ ಇಷ್ಟು ದೊಡ್ಡವನಾದರೂ ಇನ್ನೂ ಬರಿದೇನೆ? ನಿವೃತ್ತಿನಾಥ ಆ ಪತ್ರದಲ್ಲಿ ಓದಿಕೊಂಡ ಅರ್ಥವೇ ಬೇರೆ. ಚಾಂಗದೇವ ಶುದ್ಧ, ನಿರ್ಮಲ ಉಪದೇಶಕ್ಕೆ ಅರ್ಹ ಎಂದು ಅದಕ್ಕೆ ಉತ್ತರ ಬರೆಯಲು ಹೇಳಿದ. ಜ್ಞಾನದೇವ ೬೫ ಓಲೆಗಳ ಪತ್ರ ಕಳಿಸಿದ. ಅದನ್ನು ಚಾಂಗದೇವನ ೬೫ ಎನ್ನುತ್ತಾರೆ. ಹೀಗಿದೆ ಈ ಪತ್ರದ ವಿಚಿತ್ರ ಕಥೆ! ಬರೆದುದನ್ನು ಓದುವುದು ಸುಲಭ. ಬರೆಯದುದನ್ನು ಓದುವುದು ಕಷ್ಟ. ಅದನ್ನು ಎಷ್ಟು ಓದಿದರೂ ಮುಗಿಯದು. ಹೀಗೆ ಸಂನ್ಯಾಸಿ ತೆರವಾಗಿ ಬರಿದಾಗಿ ಕಂಡರೂ ಅವನಲ್ಲಿ ಅಪರಂಪಾರ ಕರ್ಮ ತುಂಬಿಕೊಂಡಿದೆ.

ಸಂನ್ಯಾಸ ಕರ್ಮಯೋಗಗಳಿಗೆ ಪೂರ್ಣ ರೂಪದಲ್ಲಿ ಒಂದೇ ಬೆಲೆ. ಕರ್ಮಯೋಗಕ್ಕೆ ವ್ಯಾವಹಾರಿಕ ಬೆಲೆ ಮಾತ್ರ. ನೋಟೂ ಇದೆ, ನಾಣ್ಯವೂ ಇದೆ. ಸರಕಾರ ಸ್ಥಿರವಾಗಿರುವ ತನಕ ಎರಡಕ್ಕೂ ಬೆಲೆ ಒಂದೇ. ಸರಕಾರ ಬದಲಾದರೆ ನೋಟಿಗೆ ಕುರುಡು ಕಾಸಿನ ಬೆಲೆಯೂ ಇಲ್ಲ. ಬಂಗಾರದ ನಾಣ್ಯದ ಬೆಲೆ ಮಾತ್ರ ಸ್ವಲ್ಪವಾದರೂ ಇದ್ದೇ ಇರುತ್ತದೆ. ಅದರಲ್ಲಿ ಬಂಗಾರವಿದೆಯಲ್ಲ! ಪೂರ್ಣಾವಸ್ಥೆಯಲ್ಲಿ ಕರ್ಮತ್ಯಾಗ ಕರ್ಮಯೋಗ ಗಳೆರಡೂ ಒಂದೇ. ಏಕೆಂದರೆ ಎರಡೂ ಕಡೆ ಜ್ಞಾನವಿದೆ. ಜ್ಞಾನಕ್ಕೆ ಬೆಲೆಯಿದೆ. ಅನಂತಕ್ಕೆ ಅನಂತವನ್ನು ಸೇರಿಸಿದರೆ ಫಲ ಅನಂತವೇ. ಇದು ಗಣಿತದ ಸಿದ್ಧಾಂತ. ಕರ್ಮತ್ಯಾಗ ಕರ್ಮಯೋಗಗಳು ಪರಿಪೂರ್ಣ ಜ್ಞಾನದಲ್ಲಿ ಸೇರಿದಾಗ ಎರಡರ ಬೆಲೆಯೂ ಒಂದೇ. ಎರಡೂ ಕಡೆಯಿಂದ ಜ್ಞಾನವನ್ನು ತೆಗೆದಿಟ್ಟರೆ ಮಾತ್ರ ಸಾಧಕನಿಗೆ ಕರ್ಮತ್ಯಾಗಕ್ಕಿಂತ ಕರ್ಮ ಯೋಗವೇ ಶ್ರೇಷ್ಠವಾದೀತು. ಶುದ್ಧ ಜ್ಞಾನವನ್ನು ಎರಡೂ ಕಡೆ ಹಾಕಿದರೆ ಆಗ ಬೆಲೆ ಒಂದೇ. ಗುರಿ ಮುಟ್ಟಿದಾಗ ಜ್ಞಾನ + ಕರ್ಮ = ಜ್ಞಾನ + ಕರ್ಮಾಭಾವ. ಆದರೆ ಜ್ಞಾನವನ್ನು ಎರಡೂ ಕಡೆಯಿಂದ ತೆಗೆದುಹಾಕಿ. ಆಗ ಕರ್ಮಾಭಾವಕ್ಕಿಂತ ಕರ್ಮವೇ ಶ್ರೇಷ್ಠವೆನಿಸದೆ? ಮಾಡದೆಯೆ ಮಾಡುವುದು ಸಾಧಕನಿಗೆ ಅರ್ಥವೇ ಆಗದು. ಮಾಡಿ ಮಾಡದಂತಿರುವುದು ಅವನಿಗೆ ಅರ್ಥವಾಗುತ್ತದೆ. ಕರ್ಮಯೋಗ ಈ ದಾರಿಯಲ್ಲಿ, ಈ ಗುರಿ ಯಲ್ಲೂ ಇದೆ. ಸಂನ್ಯಾಸ ಗುರಿಯಲ್ಲಿದೆ, ದಾರಿಯಲ್ಲಿಲ್ಲ. ಇದನ್ನೇ

ಶಾಸ್ತ್ರೀಯ ಭಾಷೆಯಲ್ಲಿ ಹೇಳಿದರೆ—ಕರ್ಮಯೋಗ ಸಾಧನೆಯೂ ಹೌದು, ನಿಷ್ಠೆಯೂ ಹೌದು. ಆದರೆ ಸಂನ್ಯಾಸ ಬರೀ ನಿಷ್ಠೆ. ನಿಷ್ಠೆ ಎಂದರೆ ಅಂತಿಮ ಅವಸ್ಥೆ.

ಭಾನುವಾರ,

೨೦-೩-೧೯೩೨.

## ೨೫. ಆತ್ಮೋದ್ಧಾರದ ಆಕಾಂಕ್ಷೆ

ಮನುಷ್ಯನ ಮೇಲ್ಮೆಗೆತ ಎಲ್ಲಿಯತನಕ ಹೋದೀತೋ ಐದನೆಯ ಅಧ್ಯಾಯದಲ್ಲಿ ನೋಡಿದೇವೆ. ಕರ್ಮ-ವಿಕರ್ಮ-ಅಕರ್ಮ ಎಲ್ಲವೂ ಸೇರಿ ಸರ್ವಸಾಧನೆ ಪೂರ್ಣವಾಗುತ್ತದೆ. ಕರ್ಮ ಸ್ಥೂಲವಸ್ತು. ನಾವು ಮಾಡುವ ಸ್ವಧರ್ಮ-ಕರ್ಮದಲ್ಲಿ ನಮ್ಮ ಮನಸ್ಸು ಸಹಕರಿಸಬೇಕು. ಈ ಮಾನಸಿಕ ಶಿಕ್ಷಣದ ಕರ್ಮಮಾಡುವುದು ವಿಕರ್ಮ, ವಿಶೇಷ ಕರ್ಮ ಅಥವಾ ಸೂಕ್ಷ್ಮ ಕರ್ಮ ಎನಿಸುತ್ತದೆ, ಕರ್ಮ ವಿಕರ್ಮ ಎರಡೂ ಬೇಕು. ಇವೆರಡನ್ನೂ ಪ್ರಯೋಗ ಮಾಡುಮಾಡುತ್ತ, ಅಕರ್ಮದ ಭೂಮಿಕೆ ಸಿದ್ಧವಾಗುತ್ತದೆ. ಈ ಭೂಮಿಕೆಯಲ್ಲಿ ಕರ್ಮ ಸಂನ್ಯಾಸ ಎರಡೂ ಒಂದೇ ಆಗುತ್ತವೆಂಬು ದನ್ನು ಹಿಂದಿನ ಅಧ್ಯಾಯ ತಿಳಿಸಿದೆ. ಆರನೆಯ ಅಧ್ಯಾಯದ ಪ್ರಾರಂಭ ದಲ್ಲಿ ಮತ್ತೆ ಅದನ್ನೇ ಹೇಳಿದೆ. ಕರ್ಮಯೋಗ-ಸಂನ್ಯಾಸಗಳ ಭೂಮಿಕೆ ಗಳು ಬೇರೆ ಬೇರೆ ಕಂಡರೂ ಅಕ್ಷರಶಃ ಅವು ಒಂದೇ ರೂಪು. ನಮ್ಮ ದೃಷ್ಟಿ ಯಲ್ಲೇ ಈ ಭೇದವಿದೆ. ಐದನೆಯ ಅಧ್ಯಾಯದಲ್ಲಿ ಬಣ್ಣಿಸಿದ ಅವಸ್ಥೆಯ ಸಾಧನೆಯೆ ಆರನೆಯದರ ಮುಖ್ಯ ವಿಷಯ.

ಪರಮಾರ್ಥ, ಗೀತೆ, ಇವೆಲ್ಲ ಕೇವಲ ಸಾಧುಗಳಿಗೆ ಮಾತ್ರ ಎಂಬ ಭ್ರಾಂತಿ ಜನರಲ್ಲಿದೆ. ನಾನೇನು ಸಾಧುವಲ್ಲ ಎಂದ ಒಬ್ಬ ಗೃಹಸ್ಥ. ಸಾಧುವೆಂಬ ಪ್ರಾಣಿ ಒಂದಿದೆ, ಅದು ನಾನಲ್ಲ ಎಂದ ಹಾಗೆ. ಕುದುರೆ ಹುಲಿ ಸಿಂಹಗಳ ಹಾಗೆ ಸಾಧುಪ್ರಾಣಿ ಒಂದು ಇದೆ ; ಪರಮಾರ್ಥದ ಕಲ್ಪನೆ ಆ ಪ್ರಾಣಿಗೆ ಮಾತ್ರ ! ವ್ಯವಹಾರದಲ್ಲಿ ತೊಡಗಿದ ಜನರು ಬೇರೆ. ಅವರ ಆಚಾರ ಬೇರೆ, ವಿಚಾರ ಬೇರೆ. ಇದರಲ್ಲಿ ಸಾಧುಶರಣರೂ ಲೋಕದ ಜನರೂ ಬೇರೆ ಬೇರೆ ಎಂದಂತಾಗುತ್ತದೆ. 'ಗೀತಾರಹಸ್ಯ'ದಲ್ಲಿ ಟಿಳಕರು ಈ ವಿಷಯದ ಕಡೆ ಗಮನ ಸೆಳೆದಿದ್ದಾರೆ. ಗೀತೆ ಸರ್ವಸಾಮಾನ್ಯ ವ್ಯಾವ ಹಾರಿಕರಿಗಾಗಿ ಹೇಳಿದ ಗ್ರಂಥ ಎನ್ನುತ್ತಾರೆ ಟಿಳಕರು. ಅಕ್ಷರಶಃ ನಿಜ ಎನ್ನುತ್ತೇನೆ ನಾನು. ಭಗವದ್ಗೀತೆ ಇಡೀ ಜಗತ್ತಿಗಾಗಿ ಇದೆ. ಪರಮಾರ್ಥದ ಸರ್ವಸಾಧನವೂ ಪ್ರತಿಯೊಬ್ಬ ವ್ಯಾವಹಾರಿಕನಿಗೂ ಇದೆ. ತನ್ನ ವ್ಯವಹಾರ ವನ್ನು ಶುದ್ಧವಾಗಿ ನಡೆಸಿ, ಅದರಲ್ಲಿ ಶಾಂತಿ ಹೇಗೆ ದೊರೆತೀತೆಂಬುದನ್ನು

ಕಲಿಸುವುದೇ ಪರಮಾರ್ಥ. ವ್ಯವಹಾರವನ್ನು ಹೇಗೆ ಶುದ್ಧಗೊಳಿಸ ಬೇಕೆಂಬುದನ್ನು ಕಲಿಸಲು ಗೀತೆ ಹುಟ್ಟಿದೆ. ಎಲ್ಲಿ ವ್ಯವಹಾರವಿದೆಯೋ ಅಲ್ಲಿ ಗೀತೆ ಬರುತ್ತದೆ. ಆದರೆ ಅಲ್ಲೇ ಯಾರನ್ನೂ ಇರಗೊಡದು. ಮುಂದಿನ ಮಜಲಿಗೆ ಕೈಹಿಡಿದೆಳೆದೊಯ್ಯುತ್ತದೆ. ಪ್ರಸಿದ್ಧಗಾದೆಯಿಲ್ಲವೆ— ಬೆಟ್ಟ ಮಹಮ್ಮದನ ಬಳಿಗೆ ಬಾರದಿದ್ದರೆ ಮಹಮ್ಮದನೇ ಬೆಟ್ಟದ ಬಳಿಗೆ ಹೋದಾನು. ಜಡ ಪರ್ವತಕ್ಕೂ ತನ್ನ ಸಂದೇಶ ಸಿಕ್ಕಲಿ ಎಂಬ ಚಿಂತೆ ಮಹಮ್ಮದನಿಗೆ. ಪರ್ವತ ಜಡವಾದುದರಿಂದ ಅದರ ಬರವಿಗಾಗಿ ಮಹಮ್ಮದ್ ಕಾದು ಕೂತಿರುವಂತಿಲ್ಲ. ಗೀತೆಯೂ ಹೀಗೇ. ಬಡವ, ನಿರ್ಬಲ, ತುಂಟ ಇವರಿದ್ದಲ್ಲಿ ಗೀತೆ ಬರುತ್ತದೆ. ಅವರನ್ನು ಅಲ್ಲೇ ಇಡಲಿಕ್ಕಲ್ಲ, ಅವರನ್ನು ಕೈಹಿಡಿದು ಮುಂದಕ್ಕೆ ಎಳೆಯಲು, ಮೇಲಕ್ಕೆ ಎತ್ತಲು. ಮನುಷ್ಯ ತನ್ನ ವ್ಯವಹಾರವನ್ನು ಶುದ್ಧಮಾಡಿಕೊಳ್ಳಲಿ, ಅವನಿಗೆ ಪರಮೋಚ್ಚ ಸ್ಥಿತಿ ಸಿಕ್ಕಲಿ—ಇದೇ ಗೀತೆಯ ಇಚ್ಛೆ. ಇದಕ್ಕಾಗಿಯೇ ಗೀತೆ ಹುಟ್ಟಿತು.

ಆದ್ದರಿಂದ 'ನಾನು ವ್ಯಾವಹಾರಿಕ, ಸಾಂಸಾರಿಕ ಜೀವ' ಎಂದು ಹೇಳಿಕೊಂಡು ನಿಮ್ಮ ಸುತ್ತಮುತ್ತ ಬೇಲಿ ಹಾಕಿಕೊಳ್ಳಬೇಡಿ. 'ನನ್ನ ಕೈಯಿಂದೇನಾದೀತು? ಈ ಮೂರೂವರೆ ಮೊಳದಗಲದ ದೇಹದಲ್ಲೇ ನನ್ನ ಸಾರಸರ್ವಸ್ವವುಂಟೆಂದು ಹೇಳಬೇಡಿ. ಈ ಬಂಧನದ ಕೋಟೆಯನ್ನು, ಸೆರೆಮನೆಯನ್ನು, ನಿಮ್ಮ ಸುತ್ತಲೂ ನಿಲ್ಲಿಸಿಕೊಂಡು ಪಶುಗಳು ವರ್ತಿಸುವ ಹಾಗೆ ವರ್ತಿಸಬೇಡಿ. ಮುಂದೆ ನಡೆಯುವ, ಮೇಲೆ ಏರುವ, ಧೈರ್ಯ ವಿರಲಿ. 'ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್'— ಖಂಡಿತವಾಗಿ ಮೇಲಕ್ಕೇರುತ್ತೇನೆ ಎಂಬ ಧೈರ್ಯವಿರಲಿ. ಕ್ಷುದ್ರ ಸಾಂಸಾರಿಕ ಜೀವ ನಾನು ಎಂದುಕೊಂಡು ಮನಸ್ಸಿನ ಶಕ್ತಿಯನ್ನು ನಾಶ ಗೊಳಿಸಬೇಡಿ. ಕಲ್ಪನೆಯ ರೆಕ್ಕೆಗಳನ್ನು ಮುರಿಯಬೇಡಿ. ಕಲ್ಪನೆ ವಿಶಾಲವಾಗಲಿ, ಹಕ್ಕಿಯದು ಹೀಗೇ ಅಲ್ಲವೆ? ಬೆಳಗ್ಗೆ ಸೂರ್ಯನನ್ನು ನೋಡಿ ಅದು ಹೇಳುತ್ತದೆ—ಮೇಲೆ ಹಾರಿ ಅವನನ್ನು ಮುಟ್ಟುತ್ತೇನೆ. ನಾವೂ ಹಾಗಿರಬೇಕು. ಹಕ್ಕಿ ತನ್ನ ದುರ್ಬಲ ರೆಕ್ಕೆಗಳಿಂದ ಎಷ್ಟು ದೂರ ಹಾರಿದರೂ ಸೂರ್ಯನನ್ನು ಮುಟ್ಟಲಾರದು. ಆದರೂ ಕಲ್ಪನಾಶಕ್ತಿ

ಯಿಂದ ಅದು ಸೂರ್ಯನನ್ನು ಮುಟ್ಟಬಲ್ಲದು. ನಮ್ಮ ವರ್ತನೆ ಇದಕ್ಕೆ ವ್ಯತಿರಿಕ್ತ. ನಮ್ಮಿಂದ ಸಾಧ್ಯವಾಗುವಷ್ಟು ಮೇಲೆ ಕೂಡ ಏರಲಾರದೆ, ನಮ್ಮ ಕಲ್ಪನೆಗೂ ಭಾವನೆಗೂ ಕಟ್ಟುಹಾಕಿಕೊಳ್ಳುತ್ತೇವೆ. ನಮ್ಮಲ್ಲಿರುವ ಶಕ್ತಿಯನ್ನು ಹೀನಭಾವನೆಯಿಂದ ಕೊಂದುಬಿಡುತ್ತೇವೆ. ಕಲ್ಪನೆಯ ಕಾಲುಗಳನ್ನೇ ಮುರಿದುಬಿಟ್ಟ ಬಳಿಕ ಕೆಳಕ್ಕೆ ಬೀಳದಿನ್ನೇನು ? ಕಲ್ಪನೆಯ ಜೋಲಿ ಯಾವಾಗಲೂ ಮೇಲಕ್ಕೆ ಇರಬೇಕು. ಕಲ್ಪನೆಯ ನೆರವಿನಿಂದ ಮನುಷ್ಯ ಮುಂಬರಿಯುತ್ತಾನೆ. ಆದುದರಿಂದ ಕಲ್ಪನೆಯನ್ನು ಸಂಕುಚಿತಗೊಳಿಸಿಕೊಳ್ಳಬೇಡಿ.

ಗಸ್ಟೆಜಾಡ ಬಿಡಲು ಬೇಡ ।
ಅಡ್ಡಹಾದಿ ಹಿಡಿಯಬೇಡ, ಅತ್ತ ಇತ್ತ ಸುಳಿಯಬೇಡ ।*

ಹೀಗೆ ಅಳುಬುರುಕರಾಗಿ ಕೂತಿರಬೇಡಿ. ಆತ್ಮದ ಅವಮಾನ ಮಾಡಿಕೊಳ್ಳಬೇಡಿ. ಸಾಧಕನಲ್ಲಿ ವಿಶಾಲ ಕಲ್ಪನೆ, ಆತ್ಮವಿಶ್ವಾಸ ಇದ್ದರೆ ಅವನಿಗೆ ನೆಲೆ. ಅಂಥವನಿಗೇ ಉದ್ಧಾರ. ಆದರೆ ಧರ್ಮವೆಲ್ಲ ಸಾಧುಗಳದು ; ಅವರ ಬಳಿ ಹೋಗುವುದಾದರೂ 'ನೀವು ವರ್ತಿಸುವುದು ನಿಮ್ಮ ಪರಿಸ್ಥಿತಿಗೆ ಯೋಗ್ಯವಾದುದೇ' ಎಂಬ ಪ್ರಶಸ್ತಿಪತ್ರವನ್ನು ಅವರಿಂದ ಪಡೆಯುವುದಕ್ಕಾಗಿ— ಎಂಬ ಕಲ್ಪನೆಯನ್ನು ತ್ಯಜಿಸಿ. ಇಂಥ ಭೇದಾತ್ಮಕ ಕಲ್ಪನೆಗಳಿಂದ ನಿಮ್ಮನ್ನು ನೀವು ಕಟ್ಟಿಹಾಕಿಕೊಳ್ಳದಿರಿ. ಉಚ್ಚ ಆಕಾಂಕ್ಷೆಗಳನ್ನಿಟ್ಟುಕೊಳ್ಳದಿದ್ದರೆ ಹೆಜ್ಜೆ ಎಂದೂ ಮುಂದೆ ಹೋಗಲಾರದು.

ಈ ದೃಷ್ಟಿ, ಈ ಆಕಾಂಕ್ಷೆ, ಈ ಮಹತ್ತರ ಭಾವನೆಯಿದ್ದರೆ ಮಾತ್ರ ಇತರ ಸಾಧನೆಗಳ ವಿಚಾರ ಅಗತ್ಯವಾದೀತು. ಇಲ್ಲವಾದರೆ ಕತೆಯೇ ಮುಗಿದಂತೆ. ಬಾಹ್ಯಕರ್ಮಗಳಿಗೆ ಜೊತೆಯಾಗಿ ಮಾನಸಿಕ ಸಾಧನೆ ವಿಕರ್ಮ ಎಂದು ಹೇಳಲಾಯಿತು. ಕರ್ಮದ ನೆರವಿಗೆ ವಿಕರ್ಮ ಸದಾ ಅಗತ್ಯ. ಈ ಎರಡರ ಸಹಾಯದಿಂದ ಪ್ರಾಪ್ತವಾಗುವ ಅಕರ್ಮದ ದಿವ್ಯಸ್ಥಿತಿಯನ್ನೂ ಅದರ ರೀತಿಗಳನ್ನೂ ಐದನೆ ಅಧ್ಯಾಯದಲ್ಲಿ ವಿವರಿಸಲಾಯಿತು. ಈಗ ಈ ಆರನೆ ಅಧ್ಯಾಯದಲ್ಲಿ ವಿಕರ್ಮದ ರೀತಿಗಳನ್ನು

---

* ಥೋಪಟಿಮಾರ್ಗಾ ಸೋಡೂ ನಕೋ ।
ಸಂಸಾರಾಮಧಿ ಅವುಲಾ ಉಗಾಚ ಭಟಕತ ಫಿರೂ ನಕೋ ॥

ವಿವರಿಸಿದೆ. ಮಾನಸಿಕ ಸಾಧನೆಯನ್ನೂ ಹೇಳಿದೆ. ಈ ಮಾನಸಿಕ ಸಾಧನೆ ಗಳನ್ನರಿತು ವಿವರಿಸುವುದಕ್ಕೆ ಮೊದಲು "ಎಲೆ ಜೀವ, ನೀನೂ ದೇವತೆ ಯಾಗಬಲ್ಲೆ. ಈ ದಿವ್ಯ ಆಕಾಂಕ್ಷೆ ಯಾವಾಗಲೂ ನಿನ್ನಲ್ಲಿರಲಿ. ಮನಸ್ಸನ್ನು ಮುಕ್ತವಾಗಿರಿಸಿ ರೆಕ್ಕೆಗಳನ್ನು ಸಜ್ಜುಗೊಳಿಸಿರು" ಎಂದು ಗೀತೆ ಹೇಳುತ್ತದೆ. ಸಾಧನೆಯ ರೀತಿ, ವಿಕರ್ಮದ ರೀತಿ ಬೇರೆ ಬೇರೆ. ಭಕ್ತಿಯೋಗ, ಧ್ಯಾನ, ಜ್ಞಾನ, ವಿಜ್ಞಾನ, ಗುಣವಿಕಾಸ, ಆತ್ಮಾನಾತ್ಮ ವಿವೇಕ, ಹೀಗೆ ಎಷ್ಟೋ ಪ್ರಕಾರಗಳುಂಟು. ಧ್ಯಾನಯೋಗ ಸಾಧನೆಯನ್ನು ಕುರಿತು ಆರನೆ ಅಧ್ಯಾಯದಲ್ಲಿ ಹೇಳಿದೆ.

## ೨೬. ಚಿತ್ತದ ಏಕಾಗ್ರತೆ

ಧ್ಯಾನಯೋಗದಲ್ಲಿ ಮುಖ್ಯ ವಿಷಯ ಮೂರು. (೧) ಚಿತ್ತದ ಏಕಾಗ್ರತೆ. (೨) ಚಿತ್ತದ ಏಕಾಗ್ರತೆಗೆ ಉಪಯುಕ್ತವಾದ ಬಾಳಿನ ಪರಿಮಿತತನ, (೩) ಸಾಮ್ಯದಶೆ ಅಥವಾ ಸಮದೃಷ್ಟಿ. ಈ ಮೂರು ವಸ್ತುಗಳಿಲ್ಲವೆ ನಿಜವಾದ ಸಾಧನೆಯಾಗಲಾರದು. ಚಿತ್ತದ ಏಕಾಗ್ರತೆ ಯೆಂದರೆ ಚಿತ್ತದ ಚಂಚಲತೆಗೆ ಅಂಕುಶ. ಜೀವನದ ಪರಿಮಿತತನ ವೆಂದರೆ ಎಲ್ಲ ಕ್ರಿಯೆಯನ್ನೂ ತೂಕಮಾಡಿ ನಡೆಸುವುದು. ಸಮದೃಷ್ಟಿ ಯೆಂದರೆ ವಿಶ್ವದ ಬಗ್ಗೆ ಉದಾರದೃಷ್ಟಿ. ಈ ಮೂರು ವಸ್ತುಗಳಿಂದ ಧ್ಯಾನಯೋಗ ಸಿದ್ಧಿಸುತ್ತದೆ. ಈ ಮೂರು ಸಾಧನೆಗಳಿಗೂ ಸಾಧನ ಗಳುಂಟು: ಅಭ್ಯಾಸ ಮತ್ತು ವೈರಾಗ್ಯ. ಈ ಐದು ವಿಷಯಗಳನ್ನು ಸ್ವಲ್ಪ ವಿವೇಚಿಸೋಣ.

ಮೊದಲು ಮನಸ್ಸಿನ ಏಕಾಗ್ರತೆ. ಪ್ರತಿಯೊಂದು ಕೆಲಸಕ್ಕೂ ಇದು ಅಗತ್ಯ. ವ್ಯಾವಹಾರಿಕ ವಿಷಯಗಳಿಗೂ ಇದು ಬೇಕೇ ಬೇಕು. ವ್ಯವ ಹಾರಕ್ಕೆ ಬೇಕಾದ ಗುಣ ಬೇರೆ, ಪರಮಾರ್ಥಕ್ಕೆ ಗುಣ ಬೇರೆ ಇಲ್ಲ. ವ್ಯವ ಹಾರವನ್ನು ಶುದ್ಧಗೊಳಿಸುವುದೆಂದರೇನೇ ಪರಮಾರ್ಥ. ವ್ಯವಹಾರ ಯಾವುದಿದ್ದರೂ ಅದರ ಸೋಲು ಗೆಲವು ನಿಮ್ಮ ಏಕಾಗ್ರತೆಯನ್ನವ ಲಂಬಿಸಿದೆ. ವ್ಯಾಪಾರ, ವ್ಯವಹಾರ, ಶಾಸ್ತ್ರಶೋಧನೆ, ರಾಜಕೀಯ ಮುತ್ಸದ್ದಿತನ—ಯಾವುದೇ ಇದ್ದರೂ ಅದರಲ್ಲಿ ಯಶಸ್ಸು ಸಿಕ್ಕಬೇಕಾದರೆ

ಆಯಾಯಾ ಪುರುಷನ ಮನಸ್ಸಿನ ಏಕಾಗ್ರತೆಯೇ ಕಾರಣ. ನೆಪೋಲಿಯನ್ ಬಗ್ಗೆ ಒಂದು ಕತೆ ಇದೆ. ಯುದ್ಧದ ಏರ್ಪಾಟು ಮಾಡಿಕೊಟ್ಟು, ತರುವಾಯ ಆತ ಸಮರರಂಗದಲ್ಲಿ ಗಣಿತದ ಸಿದ್ಧಾಂತಗಳನ್ನು ಬಿಡಿಸುತ್ತಿದ್ದನಂತೆ. ಡೇರೆಯ ಮೇಲೆ ಗುಂಡು ಹಾರಲಿ, ಸೈನಿಕರು ಸಾಯುತ್ತಿರಲಿ, ನೆಪೋಲಿಯನ್ನಿನ ಚಿತ್ತ ಮಾತ್ರ ಗಣಿತದಲ್ಲೇ. ಅವನ ಏಕಾಗ್ರತೆ ಬಹಳ ಗಾಢವಾದುದೆಂದು ನಾನನ್ನುವುದಿಲ್ಲ. ಅದಕ್ಕೂ ಹೆಚ್ಚಿನ ಏಕಾಗ್ರತೆಯ ದೃಷ್ಟಾಂತವನ್ನು ತೋರಿಸಬಹುದು. ಆದರೂ ಅದು ಅವನ ಹತ್ತಿರ ಎಷ್ಟಿತ್ತು ಎಂಬುದನ್ನು ನೋಡಿ. ಖಲೀಫ ಉಮರನ ಬಗೆಗೂ ಇಂಥದೇ ಒಂದು ಕತೆಯುಂಟು. ಕಾಳಗ ನಡೆದಿದ್ದಾಗ ಪ್ರಾರ್ಥನೆಯ ಸಮಯವಾದಲ್ಲಿ (ಮುಸಲ್ಮಾನೀ ಧರ್ಮದಲ್ಲಿ ಐದು ಸಲ ಪ್ರಾರ್ಥನೆ ಹೇಳಿದೆ) ತತ್‌ಕ್ಷಣ ಮನಸ್ಸನ್ನು ಏಕಾಗ್ರಗೊಳಿಸಿ, ಮೊಳಕಾಲೂರಿ ರಣರಂಗದಲ್ಲೇ ಆತ ಪ್ರಾರ್ಥನೆಗಾರಂಭಿಸುತ್ತಿದ್ದ. ಆ ಏಕಾಗ್ರತೆಯಲ್ಲಿ ಯಾರನ್ನು ಯಾರು ಕೊಲ್ಲುತ್ತಿರುವರೆಂಬುದರ ಅರಿವೂ ಅವನಿಗುಳಿಯುತ್ತಿರಲಿಲ್ಲ. ಮೊದಮೊದಲಿನ ಮುಸಲ್ಮಾನರ ಈ ಪರಮೇಶ್ವರ ನಿಷ್ಠೆಯಿಂದ, ಈ ಏಕಾಗ್ರತೆಯಿಂದ, ಇಸ್ಲಾಮ್ ಧರ್ಮ ಪ್ರಸಾರವಾಯಿತು.

ಮೊನ್ನೆ ಒಂದು ಕತೆ ಕೇಳಿದೆ. ಒಬ್ಬ ಮುಸಲ್ಮಾನ ಸಾಧು ಇದ್ದ. ಅವನ ಶರೀರದಲ್ಲೊಂದು ಬಾಣ ನೇರಿತು. ಆದರಿಂದ ತುಂಬಾ ನೋವಾಗುತ್ತಿತ್ತು. ಬಾಣವನ್ನು ಕೀಳಲು ಹೋದರೆ, ಕೈ ಹಚ್ಚುತ್ತಲೂ ನೋವು ಇನ್ನೂ ಹೆಚ್ಚುತ್ತಿತ್ತು. ಅದರಿಂದಾಗಿ ಅದನ್ನು ತೆಗೆಯುವುದೂ ಅಸಾಧ್ಯವಾಯಿತು. ಈಗಿನ ಕ್ಲೋರೋಫಾರ್ಮಿನಂಥ ಅಮಲಿನ ಔಷಧವೂ ಆಗ ಇರಲಿಲ್ಲ. ಸರಿ, ದೊಡ್ಡ ಸಮಸ್ಯೆಯೇ. ಆ ಸಾಧುವನ್ನು ಬಲ್ಲ ಕೆಲವರು ಮುಂದೆ ಬಂದು “ಬಾಣ ತೆಗೆಯುವುದು ಸದ್ಯ ಹಾಗಿರಲಿ. ಮೊದಲು ಈತ ಪ್ರಾರ್ಥನೆಗೆ ತೊಡಗಲಿ. ಅನಂತರ ಅದನ್ನು ತೆಗೆದರಾಯಿತು” ಎಂದರು. ಸಾಯಂಕಾಲದ ಪ್ರಾರ್ಥನೆಯ ಸಮಯವಾಯಿತು. ಸಾಧು ಪ್ರಾರ್ಥನೆಗೆ ತೊಡಗಿದ. ಒಂದು ಕ್ಷಣದಲ್ಲಿಯೆ ಆತ ಚಿತ್ತವನ್ನೇಕಾಗ್ರಗೊಳಿಸಿ ಪ್ರಾರ್ಥನೆಯಲ್ಲಿ ತಲ್ಲೀನನಾದ. ಆಗ ಅವನ ಶರೀರದಿಂದ ಬಾಣವನ್ನು ಕಿತ್ತರೂ ಅದರ ಅರಿವು ಅವನಿಗಿರಲಿಲ್ಲ. ಇದು ಎಂಥ ಏಕಾಗ್ರತೆ!

ಸಾರಾಂಶ: ವ್ಯವಹಾರವಿರಲಿ, ಪರಮಾರ್ಥವಿರಲಿ, ಚಿತ್ತದ ಏಕಾಗ್ರತೆ ಯಿಲ್ಲದೆ ಅದರಲ್ಲಿ ಯಶಸ್ಸು ಸಿಕ್ಕುವುದು ಕಠಿನ. ಚಿತ್ತ ಏಕಾಗ್ರವಾದರೆ ಎಂದಿಗೂ ಸಾಮರ್ಥ್ಯ ಕಡಮೆಯಾಗಲಾರದು. ನಿಮಗೆ ಅರವತ್ತು ವರ್ಷ ವಯಸ್ಸಾಗಿದ್ದರೂ ಕೂಡ ನಿಮ್ಮಲ್ಲಿ ಯೌವನದ ಉತ್ಸಾಹ, ಶಕ್ತಿ ಕಾಣಿಸೀತು. ವಯಸ್ಸಾದ ಹಾಗೆಲ್ಲ ಮನುಷ್ಯನ ಮನಸ್ಸು ಗಟ್ಟಿಯಾಗುತ್ತ ಹೋಗಬೇಕು. ಹಣ್ಣನ್ನು ನೋಡಿ. ಅದು ಕಸುಕಾಗಿರುತ್ತದೆ, ಪಕ್ವ ವಾಗುತ್ತದೆ, ಕೊಳೆಯುತ್ತದೆ, ನಾಶಹೊಂದುತ್ತದೆ. ಆದರೂ ಅದರೊಳಗಿನ ಬೀಜಮಾತ್ರ ಗಟ್ಟಿಯಾಗೇ ಉಳಿಯುತ್ತದೆ. ಹೊರಗಿನ ಶರೀರ ಒಣಗೀತು, ಬಿದ್ದೀತು. ಆದರೆ ಅದೇ ಕಾಯಿಯ ಸಾರ ಸರ್ವಸ್ವವಲ್ಲ. ಅದರ ಆತ್ಮ ವೆಂದರೆ ಬೀಜ. ಶರೀರದ ವಿಷಯವೂ ಹೀಗೇ. ಶರೀರ ವೃದ್ಧವಾದರೂ ಸ್ಮರಣಶಕ್ತಿ ಹೆಚ್ಚುತ್ತಿರಬೇಕು. ಬುದ್ಧಿ ತೇಜಸ್ವಿಯಾಗಿರಬೇಕು. ಆದರೆ ಹಾಗಾಗದು. ಮನುಷ್ಯ ಹೇಳುತ್ತಾನೆ—'ಈಚೆಗೆ ಏನೂ ನೆನಪಾಗುವು ದಿಲ್ಲ.' ಏಕೆ? 'ವಯಸ್ಸಾಯಿತು.' ನಿನ್ನ ಜ್ಞಾನ, ವಿದ್ಯೆ, ಸ್ಮರಣೆ–ಇವು ನಿನ್ನ ಬೀಜ. ಮುಪ್ಪೇರಿದಂತೆಲ್ಲ ಶರೀರ ಸಡಿಲುಬೀಳುವ ಹಾಗೆ ಒಳಗಿನ ಆತ್ಮ ಬಲಶಾಲಿಯಾಗಬೇಕು. ಅದಕ್ಕಾಗಿ ಏಕಾಗ್ರತೆ ಬೇಕು.

## ೨೭. ಏಕಾಗ್ರತೆ ಸಾಧಿಸುವುದು ಹೇಗೆ

ಏಕಾಗ್ರತೆ ಬೇಕೆ? ಸರಿಯೆ. ಅದನ್ನು ಸಾಧಿಸುವುದು ಹೇಗೆ? ಅದಕ್ಕೆ ಮಾಡಬೇಕಾದುದೇನು? ಭಗವಂತ ಹೇಳುತ್ತಾನೆ. ಆತ್ಮದಲ್ಲಿ ಮನಸ್ಸು ನಿಲ್ಲಿಸು—

**"ನ ಕಿಂಚಿದಪಿ ಚಿಂತಯೇತ್"**–ಬೇರೇನೂ ಯೋಚಿಸಬೇಡ.

ಸರಿ. ಆದರದನ್ನು ಹೇಗೆ ಸಾಧಿಸುವುದು? ಮನಸ್ಸನ್ನು ನಿಯತಗೊಳಿಸು ವುದು ಬಹಳ ಮಹತ್ವದ್ದು. ವಿಚಾರ ಚಕ್ರಗಳನ್ನು ಬಲವಾಗಿ ನಿಲ್ಲಿಸದೆ ಏಕಾಗ್ರತೆ ಎಲ್ಲಿಯದು? ಹೊರಗಿನ ಚಕ್ರಗಳನ್ನು ಹೇಗಾದರೂ ನಿಲ್ಲಿಸ ಬಹುದು. ಒಳಗಿನ ಚಕ್ರ ಮಾತ್ರ ತಿರುಗುತ್ತಲೇ ಇರುತ್ತದೆ. ಚಿತ್ತದ ಏಕಾಗ್ರತೆಗೆ ಬಾಹ್ಯಸಾಧನಗಳನ್ನು ಮಾಡಿದಂತೆಲ್ಲ ಈ ಒಳಗಿನ ಚಕ್ರ ಹೆಚ್ಚು ಹೆಚ್ಚು ವೇಗದಿಂದ ತಿರುಗಲಾರಂಭಿಸುತ್ತದೆ. ನೀವು ನೆಟ್ಟಗೆ

ಕುಳಿತುಕೊಳ್ಳಿ, ಕಣ್ಣು ಸ್ಥಿರವಾಗಿರಿಸಿ, ಆಸನ ಹಾಕಿ. ಇವುಗಳಿಂದ ಮನಸ್ಸನ್ನು ಏಕಾಗ್ರಗೊಳಿಸಲಾಗುವುದಿಲ್ಲ. ಮನಸ್ಸಿನೊಳಗಿನ ಚಕ್ರವನ್ನು ನಿಲ್ಲಿಸಲು ಸಾಧಿಸಬೇಕು. ಅದು ಮುಖ್ಯ ವಿಚಾರ.

ಹೊರಗಿನ ಅಪರಂಪಾರ ಸಂಸಾರ ಮನಸ್ಸಿನಲ್ಲಿ ತುಂಬಿರುತ್ತದೆ. ಅದನ್ನು ನಿಲ್ಲಿಸಿದ ಹೊರತು ಏಕಾಗ್ರತೆ ಅಸಾಧ್ಯ. ನಮ್ಮ ಆತ್ಮದ ಅಪಾರ ಜ್ಞಾನ ಶಕ್ತಿಯನ್ನು ಹೊರಗಿನ ಕ್ಷುದ್ರವಸ್ತುಗಳಿಗಾಗಿ ನಾವು ಹಾಳು ಮಾಡುತ್ತೇವೆ. ಅದು ಸಲ್ಲದು ಯಾರನ್ನೂ ಲೂಟಿ ಮಾಡದೆ ಸ್ವಂತ ಪ್ರಯತ್ನದಿಂದ ಶ್ರೀಮಂತನಾದ ಮನುಷ್ಯ ಹೇಗೆ ಅತಿವ್ಯಯ ಮಾಡ ಲಾರನೋ ಹಾಗೆ ನಾವೂ ನಮ್ಮ ಆತ್ಮದ ಜ್ಞಾನಶಕ್ತಿಯನ್ನು ಕ್ಷುದ್ರ ವಸ್ತುಗಳ ಚಿಂತನೆಯಲ್ಲಿ ಹಾಳುಮಾಡಕೂಡದು. ನಮ್ಮ ಅಮೂಲ್ಯ ನಿಧಿ ಈ ಜ್ಞಾನಶಕ್ತಿ. ಅಂಥದನ್ನು ಸ್ಥೂಲವಿಷಯಗಳಲ್ಲಿ ನಾವು ಹಾಳು ಮಾಡುತ್ತೇವೆ. ಈ ಪಲ್ಯ ಚೆನ್ನಾಗಿಲ್ಲ; ಇದಕ್ಕೆ ಉಪ್ಪು ಸಾಲದು. ಎಷ್ಟು ಗುಂಜಿಯಯ್ಯಾ ಕಡಿಮೆಯಾದದ್ದು ? ಅರ್ಧ ಹರಳು ಉಪ್ಪು ಕಡಿಮೆಯಾದರೆ ಆ ಮಹಾ ವಿಚಾರಕ್ಕಾಗಿ ನಮ್ಮ ಜ್ಞಾನ ಹಾಳು. ಶಾಲೆಯ ನಾಲ್ಕು ಗೋಡೆಗಳೊಳಗೆ ಮಕ್ಕಳಿಗೆ ಪಾಠ ಹೇಳುತ್ತಾರೆ. ಗಿಡದ ಕೆಳಗೆ ಕೂಡಿಸಿದರೆ ಗುಬ್ಬಿ ಕಾಗೆಗಳನ್ನು ಕಂಡು ಅವರ ಮನಸ್ಸು ಏಕಾಗ್ರ ವಾಗಲಾರದಂತೆ! ಚಿಕ್ಕ ಮಕ್ಕಳು ಅವರು. ಗುಬ್ಬಿ ಕಾಗೆ ಕಾಣಿಸದಿದ್ದರೆ ಸರಿ, ಆಯಿತು ಅವರ ಏಕಾಗ್ರತೆ. ನಾವೋ ದೊಡ್ಡ ದಡ್ಡರು. ನಮಗೆ ಕೊಂಬು ಬೆಳೆದಿವೆ. ಏಳೇಳು ಗೋಡೆಗಳೊಳಗಡೆ ನಮ್ಮನ್ನಿಟ್ಟರೂ ಏಕಾಗ್ರತೆ ಬರಲಿಕ್ಕಿಲ್ಲ. ಏಕೆಂದರೆ ಲೋಕದಲ್ಲಿನ ತೀರ ಕ್ಷುಲ್ಲಕ ವಿಷಯ ಗಳನ್ನು ಚರ್ಚಿಸುವವರು ನಾವು. ಪರಮಾತ್ಮನನ್ನು ಕಾಣಬಲ್ಲ ಜ್ಞಾನ ವನ್ನು ಪಲ್ಯದ ರುಚಿಯ ಚರ್ಚೆಗಳಿಗಾಗಿ ಹಾಳುಮಾಡುವವರು. ಅದರಲ್ಲೇ ಕೃತಕೃತ್ಯರಾಗುವವರು!

ಇಂಥ ಈ ಭಯಾನಕ ಸಂಸಾರ ಹಗಲಿರುಳೂ ನಮ್ಮ ಸುತ್ತ ಹೊರಗೂ ಒಳಗೂ ತಿರುಗುತ್ತಿದೆ. ಪ್ರಾರ್ಥನೆ ಭಜನೆಗಳಲ್ಲೂ ಸಹ ನಮ್ಮ ಉದ್ದೇಶ್ಯ ಹೊರಗಿನದೇ. ಪರಮಾತ್ಮನೊಂದಿಗೆ ತನ್ಮಯವಾಗಿ ಒಂದು ಕ್ಷಣವಾದರೂ ಸಂಸಾರವನ್ನು ಮರೆಯೋಣ ಎಂಬ ಭಾವನೆ ಶೂನ್ಯ. ಪ್ರಾರ್ಥನೆಯೂ

ಒಂದು ಪ್ರದರ್ಶನ ಎನ್ನುವಂತಾಗಿದೆ ನಮ್ಮ ಮನಸ್ಸಿನ ಸ್ಥಿತಿ. ಇಂಥಲ್ಲಿ ಆಸನ ಹಾಕಿದರೇನು, ಕಣ್ಣು ಮುಚ್ಚಿಕೊಂಡರೇನು? ಎಲ್ಲವೂ ವ್ಯರ್ಥ. ನಮ್ಮ ಮನಸ್ಸಿನ ಓಟ ಸದಾ ಹೊರಗೇ ಹರಿಯುತ್ತಿದ್ದರೆ ನಮ್ಮ ಸಾಮರ್ಥ್ಯವೆಲ್ಲವೂ ನಷ್ಟವಾಗುತ್ತದೆ. ಯಾವ ಬಗೆಯ ವ್ಯವಸ್ಥೆಯೂ ನಿಯಂತ್ರಣ ಶಕ್ತಿಯೂ ಉಳಿಯುವುದಿಲ್ಲ. ಈ ವಿಷಯ ಈಗ ನಮ್ಮ ದೇಶದಲ್ಲಿ ಪದೇ ಪದೇ ಅನುಭವವಾಗುತ್ತಿದೆ.

ವಾಸ್ತವವಾಗಿ ಭಾರತವರ್ಷ ಪರಮಾರ್ಥದ ಭೂಮಿ. ಇಲ್ಲಿನ ಜನ ಈಗಲೂ ಮೇಲ್ಮಟ್ಟದಲ್ಲಿದ್ದಾರು ಎಂದು ತಿಳಿಯುತ್ತಾರೆ. ಇಂಥ ದೇಶದಲ್ಲಿ ನಮ್ಮ ನಿಮ್ಮ ಸ್ಥಿತಿ ಹೇಗಿದೆ! ತೀರ ಸಣ್ಣಪುಟ್ಟ ವಿಷಯಗಳಲ್ಲಿ ನಾವು ತೋರಿಸುವ ಆಸಕ್ತಿಯನ್ನು ನೋಡಿದರೆ ವಿಷಾದವಾಗುತ್ತದೆ. ನಮ್ಮ ಚಿತ್ತ ಕ್ಷುದ್ರ ವಿಷಯಗಳಲ್ಲಿ ತೊಡಗಿಕೊಂಡಿದೆ.

> ಕೇಳಲು ಕಥೆ ಪುರಾಣ ಸವಿ-ನಿದ್ದೆ
> ಮಲಗಿದರೆ ಮನವು ಚಿಂತೆಯ ಮುದ್ದೆ
> ಗಹನ ಕರ್ಮಗತಿ ಏಕಳುತಿದ್ದೆ? *

ಕತೆ, ಪುರಾಣ ಕೇಳಲು ಹೋದರೆ ನಿದ್ದೆ ಬಂದುಬಿಡುತ್ತದೆ. ನಿದ್ದೆ ಮಾಡಬೇಕೆಂದು ಮಲಗಿದರೆ ಚಿಂತೆ, ವಿಚಾರಚಕ್ರ ಪ್ರಾರಂಭವಾಗುತ್ತವೆ. ಶೂನ್ಯಾಗ್ರತೆ ಒಂದು ಕಡೆ, ಅನೇಕಾಗ್ರತೆ ಇನ್ನೊಂದು ಕಡೆ. ಇಷ್ಟುಮಟ್ಟಿಗೆ ಮನುಷ್ಯ ಇಂದ್ರಿಯಗಳ ಗುಲಾಮನಾಗಿದಾನೆ, ಒಮ್ಮೆ ಒಬ್ಬ 'ಕಣ್ಣು ಅರ್ಧೋನ್ಮೀಲಿತವಾಗಿರಬೇಕೆಂದು ಏಕೆ ಹೇಳಿದಾರೆ?' ಎಂದು ನನ್ನನ್ನು ಕೇಳಿದ. ಅದಕ್ಕೆ ನಾನು 'ಸುಲಭವಾಗಿಯೇ ಹೇಳುತ್ತೇನೆ. ಪೂರ್ತಿಯಾಗಿ ಕಣ್ಣುಮುಚ್ಚಿದರೆ ನಿದ್ರೆ ಬರುತ್ತದೆ. ಪೂರ್ತಿ ತೆರೆದಿಟ್ಟರೆ ನಾಲ್ಕು ಕಡೆಗೂ ದೃಷ್ಟಿ ಹೋಗುವುದರಿಂದ ಏಕಾಗ್ರತೆಯುಂಟಾಗುವುದಿಲ್ಲ. ಮುಚ್ಚಿದರೆ ನಿದ್ರೆ —ಅದು ತಮೋಗುಣ, ತೆರೆದಿಟ್ಟರೆ ಎಲ್ಲ ಕಡೆಗೂ ದೃಷ್ಟಿ ಹರಿಯುತ್ತದೆ —ಅದು ರಜೋಗುಣ. ಅದಕ್ಕಾಗಿ ಮಧ್ಯದ ಸ್ಥಿತಿಯನ್ನು ಹೇಳಿದೆ' ಎಂದೆ. ಅರ್ಥವಿಷ್ಟೆ, ಮನಸ್ಸಿನ ನಿಲುವನ್ನು ಬದಲಾಯಿಸದೆ ಏಕಾಗ್ರತೆ ಬರಲಾರದು.

---

*ಕಥಾ ಪುರಾಣ ಐಕತಾಂ। ಝೋಪೇ ನಾಡಿಲೇಂ ತತ್ವತಾಂ।
ಖಾಟೇವರಿ ಪಡತಾಂ। ವ್ಯಾಪೀ ಚಿಂತಾ ತಳಮಳ।
ಐಸೀ ಗಹನ ಕರ್ಮಗತಿ। ಕಾಯ ತಯಾಸಿ ರಡತೀ॥

ಅದಕ್ಕಾಗಿ ಮನದ ನಿಲುವು ಶುದ್ಧವಾಗಿರಬೇಕು. ಬರೀ ಆಸನ ಹಾಕಿದರೆ ಅದು ಆಗದು. ವ್ಯವಹಾರವೆಲ್ಲವೂ ಶುದ್ಧವಾಗಿರಬೇಕಾದುದು ಅಗತ್ಯ. ವ್ಯವಹಾರ ಶುದ್ಧವಾಗಬೇಕಾದರೆ ಅದರ ಉದ್ದೇಶ್ಯ ಬದಲಾಗಬೇಕು. ವೈಯಕ್ತಿಕ ಲಾಭ, ವಾಸನಾತೃಪ್ತಿ, ಇಂಥ ಬಾಹ್ಯವಿಷಯಗಳಿಗಾಗಿ ವ್ಯವಹಾರ ಮಾಡಬಾರದು.

ದಿನವೆಲ್ಲ ನಾವು ವ್ಯವಹಾರ ಮಾಡುತ್ತೇವೆ. ಇದೆಲ್ಲ ಪಟಾಟೋಪದ ಉದ್ದೇಶ್ಯವೇನು?

ಇನಿತೇಕೆ ಸಕಲ ಅಟ್ಟಹಾಸ?
ಇನಿದಾಗಲೆನ್ನ ಕಡೆಯ ನಿಮಿಷ।

ಎಲ್ಲ ಅಟ್ಟಹಾಸ, ಎಲ್ಲ ಆರ್ಭಟ, ನಮ್ಮ ಕೊನೆಯ ಗಳಿಗೆ ಮಧುರವಾಗಲೆಂದಲ್ಲವೇ? ಬದುಕಿನುದ್ದಕ್ಕೂ ಕಹಿ ವಿಷವನ್ನುಣ್ಣಬೇಕು. ಏಕೆ? ಆ ಕೊನೆಯ ಗಳಿಗೆ, ಆ ಸಾವು, ಪವಿತ್ರವಾಗಲಿ ಎಂದು. ನಿತ್ಯದ ಕೊನೆಯ ಕ್ಷಣ ಬರುವುದು ಸಂಜೆಯಲ್ಲಿ. ನಿತ್ಯಕರ್ಮಗಳನ್ನೆಲ್ಲಾ ಪವಿತ್ರ ಭಾವನೆಯಿಂದ ನಡೆಸಿದ್ದರೆ ರಾತ್ರಿಯ ಪ್ರಾರ್ಥನೆ ಮಧುರವಾದೀತು. ಆ ಕೊನೆಯ ಕ್ಷಣ ಮಧುರವಾದರೆ ಅಂದಿನ ಕರ್ಮಗಳೆಲ್ಲ ಸಫಲವಾದಂತೆ. ಆಗ ನನ್ನ ಮನಸ್ಸಿನ ಏಕಾಗ್ರತೆ ಸಾಧ್ಯ.

ಏಕಾಗ್ರತೆಗಾಗಿ ಇಂಥ ಜೀವನಶುದ್ಧಿ ಅಗತ್ಯ. ಬಾಹ್ಯವಸ್ತುಗಳ ಯೋಚನೆ ನಿಲ್ಲಬೇಕು. ಮಾನವನ ಆಯುಸ್ಸು ಹೆಚ್ಚೇನೂ ಇಲ್ಲ. ಆದರೂ ಈ ಅಲ್ಪ ಆಯುಸ್ಸಿನಲ್ಲೂ ಸಹ ಪರಮೇಶ್ವರ–ಸುಖವನ್ನನುಭವಿಸುವ ಸಾಮರ್ಥ್ಯವುಂಟು. ಇಬ್ಬರು ಮನುಷ್ಯರು ಒಂದೇ ರೂಪದವರು. ಇಬ್ಬರಿಗೂ ಎರಡು ಕಣ್ಣು, ಅವುಗಳ ನಡುವೆ ಒಂದು ಮೂಗು, ಅದಕ್ಕೆ ಎರಡು ಹೊಳ್ಳೆಗಳು. ಎಲ್ಲವೂ ಒಂದೇ ತರದ್ದಾಗಿದ್ದರೂ ಒಬ್ಬ ದೇವತ್ವಕ್ಕೆ ಏರಲು ಅರ್ಹ, ಇನ್ನೊಬ್ಬ ಪಶು ಸಮಾನ. ಹೀಗೇಕಾಗಬೇಕು? ಒಬ್ಬನೇ ಒಬ್ಬ ದೇವರ ಮಕ್ಕಳು ಎಲ್ಲರೂ.† ಹಾಗಿದ್ದರೂ ಈ ಅಂತರವೇಕೆ?

---

* ಯಾಜಸಾರೀ ಕೇಲಾ ಹೋತಾ ಅಟ್ಟಹಾಸ।
ಶೇವಟಚಾ ದೀಸ ಗೋಡಾ ವ್ಹಾವಾ॥

† 'ಅವಘೀ ಏಕಾಚೀಚ ವೀಣ'।

ಈ ಇಬ್ಬರೂ ಮನುಷ್ಯರ ಜಾತಿ ಒಂದೇ ಇದ್ದೀತೆಂದು ಅನಿಸುವುದಿಲ್ಲ. ನರನಿಂದ ನಾರಾಯಣ ಒಬ್ಬ ; ನರನಿಂದ ವಾನರ ಒಬ್ಬ !

ಮನುಷ್ಯ ಎಂಥ ಉಚ್ಚಸ್ಥಿತಿಗೇರಬಲ್ಲ ಎಂಬುದರ ದೃಷ್ಟಾಂತವಾಗಿ ಹಿಂದೆ ಅನೇಕ ಮಹಾ ಪುರುಷರು ಬಾಳಿದರು. ಈಗಲೂ ಅಂಥವರನೇಕರು ನಮ್ಮಲ್ಲಿ ಬದುಕಿದಾರೆ. ಇದು ಅನುಭವದ ಮಾತು. ಈ ನರದೇಹದ ಶಕ್ತಿಯೇನು ಎಂಬುದನ್ನು ತೋರಿಸುವ ಶರಣರು ಆಗಿಹೋದರು. ಈಗಲೂ ಇದಾರೆ. ಈ ದೇಹ ಧರಿಸಿಕೊಂಡೇ ಮನುಷ್ಯ ಇಂಥ ಅದ್ಭುತ ಕೃತಿಗಳನ್ನು ಮಾಡಬಲ್ಲನಾದರೆ ನಾನೇಕೆ ಮಾಡಲಾರೆ ? ನನ್ನ ಕಲ್ಪನೆಗೆ ನಾನೇಕೆ ತಡೆ ಹಾಕಬೇಕು ? ಯಾವ ನರದೇಹದಲ್ಲಿದ್ದುಕೊಂಡೇ ಇತರರು ನರವೀರರಾದರೋ, ಆ ನರದೇಹದಲ್ಲೇ ನಾನೂ ಇದೇನೆ. ಆದರೂ ನಾನೇಕೆ ಹೀಗಿರುವುದು ? ನನ್ನಲ್ಲಿ ಏನೋ ತಪ್ಪಿರಬೇಕು. ನನ್ನ ಈ ಚಿತ್ತ ಸರ್ವದಾ ಹೊರಕ್ಕೆ ಧಾವಿಸುತ್ತಿದೆ. ಇತರರ ಗುಣದೋಷಗಳನ್ನು ನೋಡುವುದರಲ್ಲೇ ನನ್ನ ಶಕ್ತಿ ಹಾಳಾಗುತ್ತಿದೆ. ಬೇರೆಯವರ ದೋಷಗಳನ್ನು ನಾನೇಕೆ ನೋಡಬೇಕು ?

ಎಣಿಸಲೇಃ ಹೆರರ ಗುಣದೋಷ ।
ಎನಗೇನು ಕೊರೆ ಲೋಪದೋಷ? *

ನನ್ನಲ್ಲಿ ಕಡಮೆ ತಪ್ಪು ಇವೆಯೇ ? ಯಾವಾಗಲೂ ಇತರರ ಸಣ್ಣ ಪುಟ್ಟ ವಿಷಯಗಳನ್ನೇ ನೋಡುತ್ತಿದ್ದರೆ ಚಿತ್ತದ ಏಕಾಗ್ರತೆಯನ್ನು ನಾ ಸಾಧಿಸಬಲ್ಲೆನೇ ? ಹೀಗೆ ಮಾಡಿದರೆ ನನಗೆ ಎರಡೇ ಸ್ಥಿತಿ ಪ್ರಾಪ್ತವಾಗುತ್ತವೆ. ಶೂನ್ಯಾವಸ್ಥೆ ಎಂದರೆ ನಿದ್ರೆ—ಅಥವಾ ಅನೇಕಾಗ್ರತೆ. ತಮೋಗುಣ, ರಜೋಗುಣಗಳಲ್ಲೇ ನನ್ನ ತೊಳಲಾಟವಾದೀತು.

ಹೀಗೆ ಕೂತಿರು, ಹೀಗೆ ಕಣ್ಣಿಡು, ಹೀಗೆ ಆಸನ ಹಾಕು—ಇತ್ಯಾದಿಯಾಗಿ ಪರಮಾತ್ಮ ಸೂಚನೆ ಕೊಟ್ಟಿಲ್ಲವೆಂದಲ್ಲ. ಆದರೆ ಚಿತ್ತದ ಏಕಾಗ್ರತೆ ಇವಕ್ಕಿಂತ ಹಿರಿದು. ಅದನ್ನು ತಿಳಿದರೆ ಮಾತ್ರವೇ ಇವುಗಳ ಉಪಯೋಗ. ಚಿತ್ತದ ಏಕಾಗ್ರತೆ ಅವಶ್ಯವೆಂಬುದು ಒಮ್ಮೆ ಮನವರಿಕೆಯಾದರೆ ಮನುಷ್ಯ ಸಾಧನೆಗಳನ್ನು ತಾನೇ ಹುಡುಕಿಕೊಂಡಾನು.

---

*ಕಾಸಯಾ ಗುಣದೋಷ ಪಾಹೂ—ಆಣಿಕಾಂಚೇ ।
ಮಜ ಕಾಯ ತ್ಯಾಂಚೆ ಉಣೇ ಆಸೇ ॥

## ೨೮. ಬಾಳಿನಲ್ಲಿ ಪರಿಮಿತತನ

ಈ ಚಿತ್ತದ ಏಕಾಗ್ರತೆಗೆ ನೆರವಾಗುವ ಎರಡನೆಯ ವಿಷಯ ಬಾಳಿನಲ್ಲಿ ಪರಿಮಿತತನ. ಜೀವನ ಮಿತಿಯಲ್ಲಿರಬೇಕು. ಗಣಿತಶಾಸ್ತ್ರದ ರಹಸ್ಯವನ್ನು ಎಲ್ಲ ಕ್ರಿಯೆಗಳಲ್ಲೂ ತರಬೇಕು. ಮಾತ್ರೆಗಳನ್ನು ಸರಿಯಾಗಿ ಎಣಿಸಿಕೊಡುವ ಹಾಗೆ ಆಹಾರ ನಿದ್ರೆಗಳನ್ನು ಎಣಿಸಿಕೊಳ್ಳಬೇಕು. ಎಲ್ಲೆಲ್ಲೂ ಎಣಿಕೆ, ಅಳತೆ. ಪ್ರತಿಯೊಂದು ಇಂದ್ರಿಯದ ಮೇಲೂ ಕಾವಲು–ರಕ್ಷೆ ಇಡಬೇಕು. ಮಿತಿಮೀರಿ ತಿನ್ನುತ್ತಿಲ್ಲವಷ್ಟೆ, ಅತಿ ನಿದ್ರೆ ಮಾಡುತ್ತಿಲ್ಲವಷ್ಟೆ, ವಿಪರೀತ ದೃಷ್ಟಿ ಸುತ್ತಿಲ್ಲವಷ್ಟೆ ಎಂದು ಯಾವಾಗಲೂ ಸೂಕ್ಷ್ಮವಾಗಿ ಪರೀಕ್ಷಿಸುತ್ತಿರಬೇಕು.

ಒಬ್ಬ ಗೃಹಸ್ಥನನ್ನು ಕುರಿತು, 'ಆತ ಒಂದು ಕೋಣೆಯಲ್ಲಿ ಪ್ರವೇಶಿಸಿದನೆಂದರೆ ಒಂದು ನಿಮಿಷದಲ್ಲಿ ಅಲ್ಲಿ ಏನೇನಿದೆಯೆಂಬುದನ್ನೆಲ್ಲ ನೋಡಿ ಹೇಳಬಲ್ಲ' ಎಂದೊಬ್ಬರು ನನಗೆ ಹೇಳಿದರು. 'ದೇವರೆ, ಇಂಥ ಮಹಿಮೆ ನನಗೆ ಪ್ರಾಪ್ತವಾಗದಿರಲಿ' ಎಂದು ನಾನು ಮನಸ್ಸಿನಲ್ಲೆ ಹೇಳಿಕೊಂಡೆ. ಐವತ್ತು ಅರವತ್ತು ವಸ್ತುಗಳನ್ನೆಲ್ಲ ಮನಸ್ಸಿನಲ್ಲಿ ಬರೆದಿಟ್ಟುಕೊಳ್ಳಲು ನಾನೇನು ಪರಮಾತ್ಮನ ಕಾರ್ಯದರ್ಶಿಯೇ? ನಾನೇನು ಕಳವು ಮಾಡಬೇಕೆ? ಅಲ್ಲಿ ನಾಬೂನು, ಇಲ್ಲಿ ಗಡಿಯಾರ – ಸರಿಯೆ. ಅದರಿಂದ ನನಗೇನು ಉಪಯೋಗ? ನನಗೇಕೆ ಆ ಜ್ಞಾನ? ಕಣ್ಣಿನ ಈ ಪಟಿಂಗತನವನ್ನು ನಾ ತ್ಯಜಿಸಬೇಕು ಕಿವಿಯದೂ ಹಾಗೇ. ಅದರ ಮೇಲೆ ಕಾವಲಿಡಿ. ನಾಯಿಗೆ ಇರುವ ಕಿವಿ ನಮಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಅರೆಕ್ಷಣದಲ್ಲೇ ಯಾವ ದಿಕ್ಕಿಗಾದರೂ ಹೊರಳಿಸಬಹುದಾಗಿತ್ತು. ಮಾನವನ ಕಿವಿಯಲ್ಲಿ ದೇವರು ಉಳಿಸಿದ ಕೊರತೆ ಇದು ಎಂದು ಕೆಲವರಿಗಾದರೂ ಅನಿಸುತ್ತಿರಬೇಕು. ಕಿವಿಯು ಈ ಅಧಿಕಪ್ರಸಂಗ ಸಲ್ಲದು. ಹಾಗೇ ಈ ಮನಸ್ಸು, ಬಹಳ ಜಂಬದ್ದು. ಕೊಂಚ ಕಿರುಕುಳವಾದರೂ ಅತ್ತ ಲಕ್ಷ್ಯಹೋಯಿತು! ಬಾಳಿನಲ್ಲಿ ಪರಿಮಿತತನವನ್ನು ಪಾಲಿಸಿ. ಕೆಟ್ಟ ವಸ್ತು ನೋಡಬೇಡಿ. ಕೆಟ್ಟ ಪುಸ್ತಕ ಓದಲೇಬೇಡಿ. ನಿಂದೆ ಸ್ತುತಿಗಳಿಗೆ ಕಿವಿಗೊಡಲೇಬೇಡಿ. ದೋಷಪೂರ್ಣ ವಸ್ತು ಬೇಡವೇ ಬೇಡ. ದೋಷರಹಿತ ವಸ್ತುಗಳನ್ನು ಸಹ ಅತಿಯಾಗಿ ಸೇವಿಸಬೇಡಿ. ಉಚ್ಛೃಂಖಲ ವೃತ್ತಿ ಬೇಡ. ನಾರಾಯಿ, ಭಜಿ ಬೇಡವೇ ಬೇಡ. ಬಾಳೆಯ ಹಣ್ಣು ಮೋಸಂಬಿಗಳೂ ಅತಿಯಾಗಿ ಬೇಡ.

ಫಲಾಹಾರವೆಂದರೆ ಶುದ್ಧ ಆಹಾರ. ಅದೂ ಅಳತೆಗೆಡಬಾರದು. ನಾಲಗೆಯ ಸ್ವಚ್ಛಂದವೃತ್ತಿಯನ್ನು ಒಳಗಿನ ಒಡೆಯ ಸಹಿಸಕೂಡದು. ತಪ್ಪುದಾರಿ ತುಳಿದರೆ ಒಳಗಿನ ಸ್ವಾಮಿ ಶಿಕ್ಷಿಸುವನೆಂದು ಇಂದ್ರಿಯಗಳಿಗೆ ಭಯವಿರಬೇಕು. ಬಾಳಿನಲ್ಲಿ ಪರಿಮಿತತನವೆಂದರೆ ನಿಯಮಿತ ಆಚರಣೆ.

## ೨೯. ಮಂಗಳ ದೃಷ್ಟಿ

ಇನ್ನು ಸಮದೃಷ್ಟಿ. ಸಮದೃಷ್ಟಿ ಎಂದರೆ ಶುಭದೃಷ್ಟಿ. ಶುಭದೃಷ್ಟಿ ಬಾರದೆ ಏಕಾಗ್ರತೆ ಅಸಾಧ್ಯವೇ ಸರಿ. ಎಂಥ ಭಾರಿ ವನರಾಜ ಸಿಂಹ! ನಾಲ್ಕು ಹೆಜ್ಜೆ ನಡೆಯುತ್ತಾನೆ. ಹಿಂದೆ ಹೊರಳುತ್ತಾನೆ. ಹಿಂಸಕ ಸಿಂಹಕ್ಕೆ ಏಕಾಗ್ರತೆ ಬಂದೀತೆ? ಹುಲಿ, ಕಾಗೆ, ಬೆಕ್ಕುಗಳ ಕಣ್ಣು ಸದಾ ತಿರುಗುತ್ತಿರುತ್ತವೆ. ಅವುಗಳದು ಅಂಜಿಕೆಯ ಅಡ್ಡತಿಡ್ಡ ದೃಷ್ಟಿ! ಹಿಂಸ್ರ ಪ್ರಾಣಿಗಳ ಸ್ಥಿತಿ ಹೀಗೇ. ಸಾಮ್ಯದೃಷ್ಟಿ ಬರಬೇಕು. ಸೃಷ್ಟಿಯೆಲ್ಲವೂ ಮಂಗಳವಾಗಿ ತೋರಬೇಕು. ನನ್ನ ಬಗ್ಗೆ ನನಗೆ ನಂಬಿಕೆಯಿದ್ದಂತೆಯೆ ಸೃಷ್ಟಿಯ ಬಗೆಗೆಲ್ಲ ಇರಬೇಕು. ಇಲ್ಲಿ ಭೀತಿಗೆ ಸ್ಥಳವೆಲ್ಲಿ? ಎಲ್ಲವೂ ಪವಿತ್ರ. ಎಲ್ಲವೂ ಶುಭ.

"ವಿಶ್ವಂ ತದ್ ಭದ್ರಂ ಯದವಂತಿ ದೇವಾಃ"

ಮಂಗಲ ವಿಶ್ವ ಇದು. ಪರಮಾತ್ಮ ಅದನ್ನು ಕಾಯುತ್ತಿದಾನೆ. ಆಂಗ್ಲ ಕವಿ ಬ್ರೌನಿಂಗ್ ಕೂಡ ಇದೇ ಮಾತನ್ನೆ ಹೇಳಿದಾನೆ· 'ದೇವರು ಮೇಲೆ ಮುಗಿಲಿನಲ್ಲಿ ವಿರಾಜಿಸುತ್ತಿದಾನೆ. ಲೋಕವೆಲ್ಲವೂ ಕ್ಷೇಮವಾಗಿದೆ.'* ಲೋಕದಲ್ಲಿ ಯಾವುದೂ ಕೆಟ್ಟಿಲ್ಲ. ಕೆಟ್ಟಿರುವುದಾವುದಾದರೂ ಇದ್ದರೆ ಅದು ನನ್ನ ದೃಷ್ಟಿ. ನನ್ನ ದೃಷ್ಟಿಯಿರುವಂತೆ ಸೃಷ್ಟಿ! ಕೆಂಪು ಬಣ್ಣದ ಗಾಜಿನ ಕನ್ನಡಕವನ್ನು ನಾ ಹಾಕಿಕೊಂಡರೆ ಸೃಷ್ಟಿ ಕೆಂಪಗೆ ಕಾಣಿಸೀತು, ಉರಿಯುತ್ತಿರುವಂತೆ ಕಾಣಿಸೀತು.

ರಾಮದಾಸರು ರಾಮಾಯಣ ಬರೆದು ಶಿಷ್ಯರಿಗೆ ಓದಿ ಹೇಳುತ್ತಿದ್ದರು ಅದನ್ನು ಕೇಳಲು ಮಾರುತಿಯೂ ಬರುತ್ತಿದ್ದ. 'ಮಾರುತಿ ಅಶೋಕವನಕ್ಕೆ ಹೋದ. ಅಲ್ಲಿ ಬಿಳೀ ಹೂಗಳನ್ನಾತ ಕಂಡ' ಎಂದು ಸಮರ್ಥರು ಬರೆದರು. ಅದನ್ನು ಕೇಳಿದೊಡನೆ ಮಾರುತಿ ಪ್ರಕಟವಾದ. 'ಬಿಳಿಯ ಹೂ ನಾ ನೋಡಲೇ ಇಲ್ಲ. ನಾನು ನೋಡಿದ ಹೂ ಕೆಂಪಗಿದ್ದವು. ನೀವು ಬರೆದುದು

* "God is in heaven, and all is right with the world."

ತಪ್ಪು. ಅದನ್ನು ತಿದ್ದಿಕೊಳ್ಳಿ' ಎಂದ. 'ನಾನು ಬರೆದುದು ಸರಿಯಾಗಿದೆ. ನೀನು ಬಿಳಿಯ ಹೂವನ್ನೇ ನೋಡಿದ್ದು' ಎಂದರು ಸಮರ್ಥರು. ಮಾರುತಿ 'ಸ್ವತಃ ನಾನೇ ಅಲ್ಲಿಗೆ ಹೋದುದು, ನಾನು ಸುಳ್ಳು ಹೇಳುತ್ತೇನೆಯೆ?' ಎಂದ. ಕಡೆಗೆ ದೂರು ಶ್ರೀರಾಮನ ಹತ್ತಿರ ಹೋಯಿತು. ರಾಮಚಂದ್ರ 'ಹೂಗಳೇನೋ ಬಿಳಿಯವೇ. ಮಾರುತಿಯ ಕಣ್ಣು ಮಾತ್ರ ಆಗ ಕೋಪದಿಂದ ಕೆಂಪಾಗಿದ್ದವು. ಅದರಿಂದಾಗಿ ಆ ಬಿಳೀ ಹೂ ಆತನಿಗೆ ಕೆಂಪಗೆ ಕಂಡವು' ಎಂದರು. ಈ ಸುಂದರ ಕಥೆಯ ಅರ್ಥವಿಷ್ಟೆ: ನಾವು ಯಾವ ದೃಷ್ಟಿಯಿಂದ ನೋಡುತ್ತೇವೋ ಹಾಗೆ ಲೋಕ ನಮಗೆ ಕಾಣಿಸುತ್ತದೆ.

ಈ ಸೃಷ್ಟಿ ಶುಭವಾದುದೆಂದು ಮನಸ್ಸಿಗೆ ಸಂಬಿಕೆಯಾಗದಿದ್ದರೆ ಚಿತ್ತದ ಏಕಾಗ್ರತೆಯಾಗಲಾರದು. ಸೃಷ್ಟಿ ಕೆಟ್ಟದೆಯೆಂದು ನನಗನಿಸುವವರೆಗೂ ನಾನು ನಾಲ್ಕೂ ಕಡೆಗೂ ಸಂಶಯದಿಂದಲೇ ನೋಡುತ್ತೇನೆ. ಹಕ್ಕಿಗಳ ಸ್ವಾತಂತ್ರ್ಯದ ಹಾಡು ಕಟ್ಟಿದಾರೆ ಕವಿಗಳು. ಹಕ್ಕಿಯಾಗಿ ನೋಡಿ, ಎಂದರೆ ಸ್ವಾತಂತ್ರ್ಯದ ಬೆಲೆ ತಿಳಿದೀತು. ಹಕ್ಕಿಯ ಕತ್ತು ಯಾವಾಗಲೂ ಹಿಂದೆ ಮುಂದೆ ಹೊರಳುತ್ತಿರುತ್ತದೆ. ಯಾವಾಗಲೂ ಇತರರ ಭೀತಿ. ಗುಬ್ಬಿಗೆ ಆಸನ ಹಾಕಲು ಹೇಳಿ! ಅದಕ್ಕೆ ಏಕಾಗ್ರತೆ ಬಂದೀತೇ? ನಾವು ಸ್ವಲ್ಪ ಹತ್ತಿರ ಹೋದರೆ ಸಾಕು ಅದು ಹಾರಿಹೋದೀತು. ತನ್ನ ತಲೆಯ ಮೇಲೆ ಇವರು ಕಲ್ಲು ಹಾಕುತ್ತಾರೇನೋ ಎಂದು ಅದಕ್ಕೆ ದಿಗಿಲು. ಜಗತ್ತೆಲ್ಲವೂ ಭಕ್ಷಕ, ಸಂಹಾರಕ ಎಂಬ ಭೀಕರ ಕಲ್ಪನೆಯುಳ್ಳವರಿಗೆಲ್ಲಿಯ ಶಾಂತಿ? ನನಗೆ ರಕ್ಷಕ ನಾನೊಬ್ಬನೇ. ಇನ್ನುಳಿದವರೆಲ್ಲ ನನ್ನ ಭಕ್ಷಕರು ಎಂಬ ಕಲ್ಪನೆ ಅಳಿಯದೆ ಏಕಾಗ್ರತೆ ದೊರೆಯದು. ಸಮದೃಷ್ಟಿಯ ಭಾವನೆಯೇ ಇದಕ್ಕೆ ಉತ್ತಮವಾದ ದಾರಿ. ಎಲ್ಲೆಲ್ಲೂ ಮಂಗಲವನ್ನೇ ನೋಡಿ. ಆಗ ಚಿತ್ತ ತಾನಾಗಿಯೇ ಶಾಂತವಾದೀತು.

ದುಃಖಿತ ವ್ಯಕ್ತಿಯೊಬ್ಬನಿದಾನೆ. ಜುಳು ಜುಳು ಹರಿಯುವ ನದೀ ತೀರಕ್ಕೆ ಆತನನ್ನು ಕರೆದುಕೊಂಡುಹೋಗಿ. ಆ ಸ್ವಚ್ಛ, ಶಾಂತ ನೀರಿನಿಂದ ಅವನ ತಳಮಳ ಕಡಮೆಯಾದೀತು, ದುಃಖ ಮರೆಯಾದೀತು. ಇಂಥ ಶಕ್ತಿ ಎಲ್ಲಿಂದ ಬಂತು ಆ ಝರಿಯಲ್ಲಿ? ಅದು ಪರಮಾತ್ಮನ ಶುಭ ಶಕ್ತಿ. ಅಲ್ಲಿ ಪ್ರಕಟವಾಗಿದೆ. ವೇದಗಳಲ್ಲಿ ಝರಿಯ ಬಗ್ಗೆ ಸುಂದರ ವರ್ಣನೆಯಿದೆ.

"ಅತಿಷ್ಠಂತೀನಾಂ ಅನಿವೇಶನಾನಾಂ"

ಅಂಥ ಝುರಿ ಅವು. ಅಖಂಡವಾಗಿ ಹರಿಯುವಂಥವು. ಅವುಗಳಿಗೆ ತಮ್ಮದೆನ್ನುವ ಮನೆಯಿಲ್ಲ – ಮಾರಿಲ್ಲ. ಸಂನ್ಯಾಸಿಗಳು ಅವು. ಇಂಥ ಪವಿತ್ರ ಝುರಿ ಅರೆಕ್ಷಣದಲ್ಲಿ ನಮ್ಮ ಮನಸ್ಸನ್ನು ಶಾಂತಗೊಳಿಸುತ್ತದೆ. ಆ ಸುಂದರ ಝುರಿಯನ್ನು ಕಂಡು ನಮ್ಮ ಮನಸ್ಸಿನಲ್ಲಿ ಪ್ರೀತಿಯ, ಜ್ಞಾನದ ಝುರಿಯನ್ನು ನಾವೇಕೆ ಹುಟ್ಟಿಸಬಾರದು?

ಹೊರಗಿನ ಈ ಜಡ ನೀರು ನನ್ನ ಮನಸ್ಸನ್ನು ಶಾಂತಗೊಳಿಸಬಲ್ಲದಾದರೆ, ನನ್ನ ಮಾನಸದರಿಯಲ್ಲಿ ಭಕ್ತಿ-ಜ್ಞಾನದ ಚಿನ್ಮಯ ಝುರಿ ಹರಿಯತೊಡಗಿದಾಗ ನನಗೆ ಎಷ್ಟು ಶಾಂತಿ ಸಿಕ್ಕೀತು! ಹಿಂದೆ ನನ್ನ ಗೆಳೆಯನೊಬ್ಬ ಹಿಮಾಲಯದಲ್ಲಿ, ಕಾಶ್ಮೀರದಲ್ಲಿ ಸುತ್ತುತ್ತಿದ್ದ. ಅಲ್ಲಿನ ಪವಿತ್ರ ಪರ್ವತ ಸುಂದರ ಪ್ರವಾಹಗಳನ್ನು ವರ್ಣಿಸಿ ನನಗೆ ಕಾಗದ ಬರೆಯುತ್ತಿದ್ದ. ನಾನು ಅವನಿಗೆ ಉತ್ತರ ಬರೆದೆ. "ಅಲ್ಲಿ ನೀನು ಅನುಪಮ ಆನಂದವನ್ನುಂಟು ಮಾಡುವ ಆ ಝುರಿ, ಆ ಪರ್ವತ, ಆ ತಾರೆ, ಆ ಶುಭ ಗಾಳಿಗಳನ್ನು ನಾನು ನನ್ನ ಹೃದಯದಲ್ಲೇ ಅನುಭವಿಸಬಲ್ಲೆ. ಈ ರಮಣೀಯ ದೃಶ್ಯವನ್ನೆಲ್ಲ ನಿತ್ಯವೂ ನಾನು ಅಂತರಂಗದ ಸೃಷ್ಟಿಯಲ್ಲಿ ನೋಡುತ್ತಿದೇನೆ. ನನ್ನ ಹೃದಯದಲ್ಲಿನ ಈ ಭವ್ಯ ದಿವ್ಯ ಹಿಮಾಲಯವನ್ನು ಬಿಟ್ಟು ನೀನು ಕರೆದರೂ ನಾನು ಅಲ್ಲಿಗೆ ಬರಲಾರೆ"

"ಸ್ಥಾವರಾಣಾಂ ಹಿಮಾಲಯಃ"

ಸ್ಥಿರತೆ ಪಡೆಯಲು ಉಪಾಸನೆ ಮಾಡಬೇಕಾದ ಸ್ಥಿರತೆಯ ಮೂರ್ತಿ—ಹಿಮಾಲಯದ ವರ್ಣನೆ ಕೇಳಿ ನನ್ನ ಕರ್ತವ್ಯ ತ್ಯಜಿಸಿದರೆ ಏನು ಬಂತು?

ಸಾರಾಂಶ: ಮನಸ್ಸನ್ನು ಸ್ವಲ್ಪ ಶಾಂತಗೊಳಿಸಿ. ಮಂಗಲತೆಯಿಂದ ಸೃಷ್ಟಿಯ ಕಡೆ ನೋಡಿ. ಆಗ ಹೃದಯದಲ್ಲಿ ಅನಂತ ಝುರಿಗಳೇ ಹರಿಯತೊಡಗುತ್ತವೆ. ಕಲ್ಪನೆಯ ದಿವ್ಯ ತಾರೆ ಹೃದಯಾಕಾಶದಲ್ಲಿ ಬೆಳಗತೊಡಗುತ್ತವೆ. ಕಲ್ಲು ಮಣ್ಣಿನ ಶುಭವಸ್ತುಗಳನ್ನು ಕಂಡು ಶಾಂತವಾಗುವ ಚಿತ್ತ, ಅಂತಃಸೃಷ್ಟಿಯಲ್ಲಿನ ದೃಶ್ಯವನ್ನು ಕಂಡು ಶಾಂತವಾಗಲಾರದೇ? ಹಿಂದೆ ಒಂದು ಸಲ ನಾನು ವೈಕೋಮ್‌ಗೆ ಹೋಗಿದ್ದೆ. ಒಂದು ದಿನ ಸಂಜೆ

ಸಮುದ್ರತೀರದಲ್ಲಿ ಕುಳಿತಿದ್ದೆ. ಆ ಅಪಾರ ಸಾಗರ ! ಘೋ ಘೋ ಎನ್ನುವ ಆ ಗರ್ಜನೆ. ಸಂಜೆಯ ಪ್ರಶಾಂತ ಸಮಯ ! ನಾನು ಸ್ತಬ್ಧನಾಗಿ ಕುಳಿತಿದ್ದೆ. ಸಮುದ್ರತೀರದ ಉಪಾಹಾರಕ್ಕೆಂದು ನನ್ನ ಗೆಳೆಯ ಹಣ್ಣು ತೆಗೆದುಕೊಂಡು ಅಲ್ಲಿಗೆ ಬಂದ. ಆ ಸಾತ್ವಿಕ ಆಹಾರವೂ ಆಗ ನನಗೆ ವಿಷದಂತೆ ತೋರಿತು. ಸಮುದ್ರದ ಆ ಓಂ ಓಂ ಗರ್ಜನೆ ‘ ಮಾಮನುಸ್ಮರ ಯುದ್ಧ್ಯ ಚ ’ ಎಂಬ ಗೀತಾ ವಚನದ ನೆನವು ತರುತ್ತಿತ್ತು. ಸಮುದ್ರ ಎಡೆಬಿಡದೆ ನೆನಪುಮಾಡಿಕೊಳ್ಳುತ್ತಿತ್ತು ; ಕರ್ಮ ಮಾಡುತ್ತಿತ್ತು. ಒಂದು ತೆರೆ ಬಂತು. ಹೋಯಿತು. ಇನ್ನೊಂದು ಬಂತು. ಕ್ಷಣವೂ ವಿರಾಮವಿಲ್ಲ. ಆ ದೃಶ್ಯವನ್ನು ಕಂಡು ನನ್ನ ಹಸಿವು ನೀರಡಿಕೆಗಳೆಲ್ಲ ಅಡಗಿಹೋಗಿದ್ದವು. ಆ ಸಮುದ್ರದಲ್ಲಿ ಇದ್ದುದಾದರೂ ಏನು ? ಆ ಉಪ್ಪುನೀರಿನ ತೆರೆ ಏಳುವುದು ಬೀಳುವುದನ್ನು ಕಂಡು ನನ್ನ ಹೃದಯ ತುಂಬಿ ಬಂದರೆ, ಜ್ಞಾನ-ಪ್ರೀತಿಯ ಅಪಾರಸಾಗರ ಹೃದಯದಲ್ಲಿ ಉಕ್ಕಿದರೆ ನಾನೆಷ್ಟು ನರ್ತಿಸಬಹುದು ! ವೇದಗಳಲ್ಲಿನ ಋಷಿಗಳ ಹೃದಯದಲ್ಲಿ ಇಂಥ ಸಮುದ್ರ ತುಳುಕುತ್ತಿತ್ತು.

“ ಅಂತಃಸಮುದ್ರೇ ಹೃದಿ ಅಂತರಾಯುಷಿ
ಘೃತಸ್ಯ ಧಾರಾ ಅಭಿಚಾಕಶೀಮಿ
ಸಮುದ್ರಾದೂರ್ಮಿರ್ಮಧುಮಾನುದಾರತ್ ”

ಈ ದಿವ್ಯ ಭಾಷೆಯನ್ನು ಕುರಿತು ಭಾಷ್ಯ ಬರೆಯುವಾಗ ಭಾಷ್ಯಕಾರರೆಲ್ಲ ತೊಳಲಾಡಿದರು. ಯಾವುದೀ ಘೃತದ ಧಾರೆ ? ಯಾವುದೀ ಮಧುಧಾರೆ ? ಉಪ್ಪುನೀರಿನ ಅಲೆ ಎದ್ದವೇನು ನನ್ನ ಅಂತಃಸಮುದ್ರದಲ್ಲಿ ? ಇಲ್ಲ. ನನ್ನ ಹೃದಯದಲ್ಲಿ ಹಾಲುತುಪ್ಪದ ಮಧುವಿನ ಅಲೆಗಳೆದ್ದಿವೆ.

## ೩೦. ಬಾಲಕ-ಗುರು

ಹೃದಯದಲ್ಲಿನ ಈ ಸಾಗರವನ್ನು ಕಾಣಲು ಕಲಿಯಿರಿ. ಹೊರಗಿನ ನಿರಭ್ರ ನಿರ್ಮಲ ಆಕಾಶವನ್ನು ಕಂಡು ಚಿತ್ತವನ್ನು ನಿರಭ್ರಗೊಳಿಸಿ, ನಿರ್ಮಲಗೊಳಿಸಿ. ವಾಸ್ತವವಾಗಿ ಚಿತ್ತದ ಏಕಾಗ್ರತೆ ಒಂದು ಆಟ, ತೀರ ಸುಲಭ. ಚಿತ್ತದ ವ್ಯಗ್ರತೆಯೇ ಅಸ್ವಾಭಾವಿಕ, ಅನೈಸರ್ಗಿಕ. ನೆಟ್ಟ ದೃಷ್ಟಿಯಿಂದ ಚಿಕ್ಕಮಕ್ಕಳ ಕಣ್ಣನ್ನು ನೋಡಿ. ಚಿಕ್ಕ ಮಗು ಯಾವಾಗಲೂ

ನೆಟ್ಟ ದೃಷ್ಟಿಯಿಂದಲೇ ನೋಡುತ್ತದೆ. ನೀವು ಎಂಟು ಹತ್ತು ಸಲ ಚಪ್ಪಾಳೆ ಹೊಡೆಯುತ್ತೀರಿ ಮಗುವಿನ ಮನಸ್ಸು ತಟ್ಟನೆ ಏಕಾಗ್ರವಾಗುತ್ತದೆ. ನಾಲ್ಕೈದು ತಿಂಗಳು ತುಂಬಿದ ಮಗುವಿಗೆ ಹೊರಗಿನ ಹಸಿರು ಸೃಷ್ಟಿಯನ್ನು ತೋರಿಸಿ. ಅದು ಒಂದೇ ಸಮನೆ ನೋಡುತ್ತಲೇ ಇರುತ್ತದೆ. ಹೊರಗಿನ ಹಸಿರು ಬಣ್ಣವನ್ನು ನೋಡಿ ಮಗುವಿನ ಮಲವೂ ಹಸಿರಾಗುತ್ತದೆ ಎಂದು ಹೆಂಗಸರು ತಿಳಿದಿದ್ದಾರೆ. ಎಲ್ಲ ಇಂದ್ರಿಯಗಳನ್ನೂ ಕಣ್ಣಿಗೇ ಸೇರಿಸಿ ನೋಡಿದ ಹಾಗೆ, ಚಿಕ್ಕ ಮಗುವಿನ ಮನಸ್ಸಿನ ಮೇಲೆ ಯಾವ ವಿಷಯದ್ದೇ ಆಗಲಿ ಬಹಳ ಪರಿಣಾಮ ಆಗುತ್ತದೆ. ಮೊದಲಿನ ಎರಡು ಮೂರು ವರ್ಷಗಳಲ್ಲಿ ದೊರೆಯುವ ಶಿಕ್ಷಣವೇ ನಿಜವಾದ ಶಿಕ್ಷಣವೆಂದು ಶಿಕ್ಷಣಶಾಸ್ತ್ರಜ್ಞರ ಹೇಳಿಕೆ. ವಿದ್ಯಾಪೀಠ, ಶಾಲೆ, ಸಂಘ, ಸಂಸ್ಥೆಗಳೆಷ್ಟು ಇದ್ದರೂ ಸರಿಯೆ. ಮೊದಲಿಗೆ ದೊರೆತಂಥ ಶಿಕ್ಷಣ ಅನಂತರ ದೊರೆಯಲಾರದು. ಶಿಕ್ಷಣಕ್ಕೂ ನನಗೂ ಸಂಬಂಧವಿದೆ. ಈ ಬಾಹ್ಯಶಿಕ್ಷಣದ ಪರಿಣಾಮ ಶೂನ್ಯ ಎಂದು ದಿನದಿನವೂ ನನಗೆ ನಿಶ್ಚಯವಾಗುತ್ತಿದೆ. ಮೊದಲಿನ ಸಂಸ್ಕಾರ ವಜ್ರಲೇಪನವಿದ್ದಂತೆ. ಮುಂದಿನ ಶಿಕ್ಷಣ ಹೊರಗಿನ ಬಣ್ಣ, ಮೇಲಿನ ಹೊಳಪು. ಸಾಬೂನು ಹಚ್ಚಿ ತೊಳೆದರೆ ಮೇಲಿನ ಕಲೆ ಮಾಯವಾಗುತ್ತದೆ. ಚರ್ಮದ ಕಪ್ಪು ಬಣ್ಣ ಮಾಯವಾದೀತೇ? ಹೀಗೇ ಮೂಲಸಂಸ್ಕಾರ ಅಳಿಯುವುದು ಬಹಳ ಕಠಿನ.

ಈ ಮೊದಲಿನ ಸಂಸ್ಕಾರ ಬಲವತ್ತರವೇಕೆ? ಮುಂದಿನವು ದುರ್ಬಲವೇಕೆ? ಕಾರಣವಿಷ್ಟೆ; ಬಾಲ್ಯದಲ್ಲಿ ಚಿತ್ತದ ಏಕಾಗ್ರತೆ ನೈಸರ್ಗಿಕ. ಏಕಾಗ್ರತೆಯಿರುವುದರಿಂದ ಆಗ ತಲೆದೋರಿದ ಸಂಸ್ಕಾರ ಅಳಿಸಿಹೋಗುವುದಿಲ್ಲ. ಇಂಥ ಮಹಿಮೆ ಈ ಏಕಾಗ್ರತೆಯದು! ಅದನ್ನು ಸಾಧಿಸಿದವನಿಗೆ ಯಾವುದು ಅಸಾಧ್ಯ?

ಇಂದು ನಮ್ಮ ಬಾಳೆಲ್ಲವೂ ಕೃತ್ರಿಮವಾಗಿದೆ. ಬಾಲವೃತ್ತಿ ಸತ್ತು ಹೋಗಿದೆ. ಬದುಕಿನಲ್ಲಿ ನಿಜವಾದ ಸ್ವಾರಸ್ಯವಿಲ್ಲ. ಬಾಳು ಶುಷ್ಕವಾಗಿದೆ. ವಕ್ರವಕ್ರವಾಗಿ ಹೇಗೋ ಏನೋ ಬದುಕುತ್ತಿದೇವೆ. ಮಾನವನ ಪೂರ್ವಜ ಮಂಗ ಎಂಬ ಸಿದ್ಧಾಂತವನ್ನು ಡಾರ್ವಿನ್ ಮಾಡದಿದ್ದರೆ—ನಮ್ಮ ಕೃತಿಯಿಂದ ನಾವು ಅದನ್ನು ಮಾಡುತ್ತಿದೇವೆ.

ಚಿಕ್ಕಮಕ್ಕಳಲ್ಲಿ ನಂಬಿಕೆಯಿರುತ್ತದೆ. ತಾಯಿ ಹೇಳಿದುದೇ ಪ್ರಮಾಣ. ಈಸೋಪನ ನೀತಿಯ ಕತೆ ಅವರಿಗೆ ಅಸತ್ಯವೆನಿಸದು. ಈ ಮಂಗಲ ವೃತ್ತಿಯಿಂದ ಮಕ್ಕಳಿಗೆ ಬಲು ಬೇಗ ಏಕಾಗ್ರತೆ ಬಂದುಬಿಡುತ್ತದೆ.

## ೩೧. ಅಭ್ಯಾಸ, ವೈರಾಗ್ಯ, ಶ್ರದ್ಧೆ

ಸಾರಾಂಶ— ಧ್ಯಾನಯೋಗಕ್ಕೆ ಚಿತ್ತದ ಏಕಾಗ್ರತೆ, ಬಾಳಿನ ಪರಿಮಿತತನ, ಸಾಮ್ಯದೃಷ್ಟಿ ಇವು ಮೂರೂ ಅಗತ್ಯ. ಇನ್ನೂ ಎರಡು ಸಾಧನೆಗಳುಂಟು : ವೈರಾಗ್ಯ – ಅಭ್ಯಾಸ. ಒಂದು ವಿಧ್ವಂಸಕ, ಇನ್ನೊಂದು ವಿಧಾಯಕ. ಹೊಲದಲ್ಲಿರುವ ಹುಲ್ಲು ಕುಯ್ದು ಬಿಸುಡುವುದು ವಿಧ್ವಂಸಕ ಕೆಲಸ. ಅದಕ್ಕೇ ವೈರಾಗ್ಯ ಎನ್ನುವುದು. ಬಿತ್ತುವುದು ವಿಧಾಯಕ ಕೆಲಸ. ಮನಸ್ಸಿನಲ್ಲಿ ಸದ್ವಿಚಾರಗಳನ್ನು ಕುರಿತು ಮತ್ತೆ ಮತ್ತೆ ಯೋಚಿಸುವುದು ಅಭ್ಯಾಸ, ವೈರಾಗ್ಯ ವಿಧ್ವಂಸಕ ಕ್ರಿಯೆ, ಅಭ್ಯಾಸ ವಿಧಾಯಕ ಕ್ರಿಯೆ. ವೈರಾಗ್ಯ ಮೊಳೆಯುವುದು ಹೇಗೆ? ಮಾವಿನ ಹಣ್ಣು ರುಚಿ ಎನ್ನುತ್ತೇವೆ. ರುಚಿಯಿರುವುದು ಕೇವಲ ಆ ಹಣ್ಣಿನಲ್ಲೇನು? ಅಲ್ಲ. ನಮ್ಮ ಆತ್ಮದಲ್ಲಿನ ರುಚಿಯನ್ನು, ಸವಿಯನ್ನು ನಾವು ಆ ವಸ್ತುವಿನಲ್ಲಿ ಬೆರೆಸುತ್ತೇವೆ. ಅನಂತರ ಆ ವಸ್ತು ಸವಿಯಾಗುತ್ತದೆ. ಆದುದರಿಂದ ಒಳಗಿನ ಸವಿಯನ್ನು ಅನುಭವಿಸಲು ಕಲಿಯಿರಿ. ಕೇವಲ ಬಾಹ್ಯವಸ್ತುಗಳಲ್ಲಿ ಸವಿಯಿಲ್ಲ. ಮಾಧುರ್ಯಸಾಗರವಾದ – ಆ ' ರಸಾನಾಂ ರಸತಮಃ ' – ಆತ್ಮ ನನ್ನಹತ್ತಿರ ಇದೆಯೆಂಬ ಭಾವನೆ ಬೆಳೆದಂತೆಲ್ಲ ವೈರಾಗ್ಯ ಮೊಳೆಯುತ್ತದೆ. ಮಾರುತಿಗೆ ಸೀತಾದೇವಿ ಮುತ್ತಿನ ಹಾರ ಕೊಟ್ಟಳು. ಆತ ಮುತ್ತುಗಳನ್ನು ಕಚ್ಚಿನೋಡಿ ಬಿಸುಟುಬಿಟ್ಟ. ಮುತ್ತುಗಳಲ್ಲಿ ಮಾರುತಿಗೆ ರಾಮ ಕಾಣಿಸಲಿಲ್ಲ. ರಾಮ ಅವನ ಹೃದಯದಲ್ಲಿದ್ದ. ಆ ಮುತ್ತುಗಳಿಗೆ ಮೂರ್ಖರು ಲಕ್ಷ ರೂಪಾಯಿ ಕೊಡುತ್ತಿದ್ದರು.

ಈ ಧ್ಯಾನಯೋಗದ ಮಾತನ್ನು ಹೇಳುವಾಗ ಭಗವಂತ ಅತ್ಯಂತ ಮಹತ್ವದ ಅಂಶವೊಂದನ್ನು ಮೊದಲಿಗೇ ಹೇಳಿದಾನೆ: “ ನಾನು ನನ್ನನ್ನು ಉದ್ಧರಿಸಿಕೊಳ್ಳಬೇಕಾಗಿದೆ. ಮುಂದೆ ಹೋಗಬೇಕು. ಮೇಲಕ್ಕೆ ನೆಗೆಯಬೇಕು. ಈ ನರದೇಹದಲ್ಲಿ ಹೀಗೇ ಬಿದ್ದಿರಲಾರೆ. ಪರಮಾತ್ಮನ ಹತ್ತಿರ

ಹೋಗಲು ಧೈರ್ಯದಿಂದ ಪ್ರಯತ್ನಪಡುತ್ತೇನೆ" ಎಂಬ ದೃಢಸಂಕಲ್ಪ ಬೇಕು.

ಇದನ್ನೆಲ್ಲ ಕೇಳುತ್ತಿದ್ದ ಹಾಗೆ ಅರ್ಜುನನಿಗೆ ಸಂಶಯ ಬಂತು. 'ದೇವಾ, ಈಗ ವಯಸ್ಸಾಗಿದೆ. ಇನ್ನೆರಡು ದಿನಕ್ಕೆ ಸತ್ತುಹೋದೇನು. ಈ ಸಾಧನೆಯಿಂದ ಉಪಯೋಗವೇನು?' ಎಂದು ಕೇಳಿದ. ಅದಕ್ಕೆ ಭಗವಂತ 'ಮರಣ ಎಂದರೆ ಮಹಾ ನಿದ್ರೆ. ನಿತ್ಯವೂ ಉದ್ಯೋಗದ ಅನಂತರ ನಾವು ಏಳೆಂಟು ಗಂಟೆ ನಿದ್ದೆಹೋಗುತ್ತೇವೆ. ಆ ನಿದ್ರೆಯ ಬಗ್ಗೆ ಭೀತಿಯಾಗುತ್ತದೆಯೆ? ಇಲ್ಲ. ತತ್–ಪ್ರತಿಯಾಗಿ ನಿದ್ದೆ ಬಾರದೆಹೋದರೆ ಚಿಂತೆ ಉಂಟಾಗುತ್ತದೆ. ನಿದ್ರೆ ಅಗತ್ಯ. ಹಾಗೇ ಮರಣವೂ ಅಗತ್ಯ. ನಿದ್ರೆಯನ್ನು ಮುಗಿಸಿ ಎದ್ದಬಳಿಕ ಮತ್ತೆ ನಮ್ಮ ಕೆಲಸಕ್ಕೆ ತೊಡಗುವ ಹಾಗೆ ಸತ್ತನಂತರವೂ ಮೊದಲಿನ ಸಾಧನೆಗಳೆಲ್ಲ ನಮಗೆ ದೊರೆಯುತ್ತವೆ' ಎಂದು ಸಮಾಧಾನ ಹೇಳಿದ.

ಜ್ಞಾನದೇವರು 'ಜ್ಞಾನೇಶ್ವರಿ' ಯಲ್ಲಿ ಈ ಪ್ರಸಂಗದ ಬಗ್ಗೆ ಬರೆದ ಮಾತು ಅವರ ಆತ್ಮಚರಿತೆಯ ಹಾಗಿದೆ.

ಬಾಲ್ಯದಲ್ಲೆ ಬಂದಿತೆಲ್ಲ ಜ್ಞಾನ
ಶಾಸ್ತ್ರವೆಲ್ಲ ಹೊಮ್ಮಿ ಮುಖದಿ ತಾನೆ । *

ಇದರಲ್ಲಿ ಅದೇ ಕಾಣುತ್ತದೆ. ಪೂರ್ವಜನ್ಮದ ಅಭ್ಯಾಸ ನಿನ್ನನ್ನು ಸೆಳೆಯುತ್ತದೆ. ಕೆಲವರ ಚಿತ್ತ ವಿಷಯಗಳ ಕಡೆ ಹೊರಳುವುದೇ ಇಲ್ಲ. ಅವರಿಗೆ ಮೋಹವೆಂದರೆ ಗೊತ್ತೇ ಇಲ್ಲ. ಅವರು ಪೂರ್ವಜನ್ಮದಲ್ಲಿ ಸಾಧನೆ ಮಾಡಿದ್ದರು. ಭಗವಂತ ಆಶ್ವಾಸನ ಕೊಟ್ಟಿದಾನೆ:

**"ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ ॥"**

ಕಲ್ಯಾಣ ಮಾರ್ಗದಲ್ಲಿ ನಡೆದುಹೋಗುವವನ ಶ್ರಮ ಎಳ್ಳಷ್ಟೂ ವ್ಯರ್ಥವಾಗಲಾರದು. ಇಂಥ ಈ ಶ್ರದ್ಧೆಯನ್ನು ಕೊನೆಗೆ ಕೊಟ್ಟಿದೆ. ಅಪೂರ್ಣವೂ ಕೊನೆಗೆ ಪೂರ್ಣವಾದೀತು. ಭಗವಂತನ ಈ ಉಪದೇಶದಲ್ಲಿನ ಸಾರವನ್ನು ಸವಿದು ನಿಮ್ಮ ನಿಮ್ಮ ಬದುಕನ್ನು ಸಾರ್ಥಕಗೊಳಿಸಿಕೊಳ್ಳಿ.

ಭಾನುವಾರ, ೨೭–೩–೧೯೩೨.

---

* **ಬಾಲಪಣೀಂಚ ಸರ್ವಜ್ಞತಾ । ವರೀ ತಯಾತೇ ।**
**ಸಕಲಶಾಸ್ತ್ರೇ ಸ್ವಯಂಭೇ । ನಿಘತೀ ಮುಖೇ ॥**

## ೩೨. ಭಕ್ತಿಯ ಭವ್ಯದರ್ಶನ

ತಮ್ಮೆದಿರೆ, ಧರ್ಮದ ಪ್ರಸಂಗ ಎದುರಿಗೆ ಬಂದಾಗ ಅರ್ಜುನನಿಗೆ ಸ್ವಕೀಯ ಪರಕೀಯ ಎಂಬ ಮೋಹ ಹುಟ್ಟಿ ಆತ ಸ್ವಧರ್ಮಾಚರಣೆಯನ್ನು ತಪ್ಪಿಸುವುದರಲ್ಲಿದ್ದ. ಈ ವೃಥಾ ಮೋಹದ ವಿಚಾರ ಮೊದಲನೆಯ ಅಧ್ಯಾಯದಲ್ಲಿ ಬಂದಿದೆ. ಈ ಮೋಹನಿವಾರಣೆಯ ಉಪಾಯಕ್ಕಾಗಿ ಎರಡನೆಯ ಅಧ್ಯಾಯ ಮೊದಲಾಗಿದೆ. ಅಮರ ಆತ್ಮ ಎಲ್ಲೆಲ್ಲೂ ಇದೆ; ಶರೀರ ನಶ್ವರ; ಸ್ವಧರ್ಮವನ್ನೆಂದೂ ತ್ಯಜಿಸಕೂಡದು — ಎಂಬ ಮೂರು ಸಿದ್ಧಾಂತ ಅಲ್ಲಿವೆ. ಆ ಸಿದ್ಧಾಂತಗಳ ಪ್ರಯೋಗವನ್ನು ಕಲಿಸುವ ಕರ್ಮ ಫಲತ್ಯಾಗದ ಉಪಾಯವನ್ನು ಹೇಳಿದೆ. ಈ ಕರ್ಮಯೋಗದ ವಿವರಣೆ ಯಿಂದ ಕರ್ಮ - ವಿಕರ್ಮ - ಅಕರ್ಮಗಳ ಉತ್ಪತ್ತಿಯಾಯಿತು. ಈ ಕರ್ಮ - ವಿಕರ್ಮಗಳ ಸಂಗಮದಿಂದ ಹುಟ್ಟುವ ಎರಡು ಬಗೆಯ ಅಕರ್ಮ ಐದನೆಯ ಅಧ್ಯಾಯದಲ್ಲಿದೆ. ಭಿನ್ನ ಭಿನ್ನ ವಿಕರ್ಮಗಳನ್ನು ಮುಂದೆ ತಿಳಿಸಿದಾರೆ. ಸಾಧನೆಗೆ ಬೇಕಾಗುವ ಏಕಾಗ್ರತೆಯ ವಿಚಾರ ಆರನೆ ಅಧ್ಯಾಯದಲ್ಲಿದೆ.

ಇದು ಏಳನೆ ಅಧ್ಯಾಯ. ಇಲ್ಲಿ ವಿಕರ್ಮದ ಹೊಸ ದ್ವಾರವೊಂದು ತೆರೆದಿದೆ. ಸೃಷ್ಟಿದೇವಿಯ ಮಂದಿರದಲ್ಲಿ, ವಿಶಾಲವಾದ ವನದಲ್ಲಿ, ಬಗೆ ಬಗೆಯ ಮನೋಹರ ದೃಶ್ಯ ಕಣ್ಣಿಗೆ ಬೀಳುವಂತೆಯೇ ಗೀತಾ ಗ್ರಂಥದ ವಿಚಾರ ಸಹ. ಆರನೆ ಅಧ್ಯಾಯದಲ್ಲಿ ಏಕಾಗ್ರತೆಯ ವಿವರಣೆಯಿತ್ತು. ಈಗ ಹೊಸ ಬಾಗಿಲಲ್ಲಿ ಅಡಿಯಿಡೋಣ.

ಈ ಬಾಗಿಲು ತೆರೆವ ಮೊದಲೇ ಈ ಮೋಹಕಾರಿ ಜಗದ್ ರಚನೆಯ ರಹಸ್ಯ ತಿಳಿಸಿದೆ. ಒಂದೇ ಬಗೆಯ ಕಾಗದದ ಮೇಲೆ, ಒಂದೇ ಬಣ್ಣದಿಂದ, ಒಂದೇ ಕುಂಚದಿಂದ ಚಿತ್ರಕಾರ ಬಗೆ ಬಗೆಯ ಚಿತ್ರ ರಚಿಸುತ್ತಾನೆ. ಸಿತಾರು ನುಡಿಸುವ ವಾದ್ಯಕಾರ ಏಳೇಳು ಸ್ವರಗಳಲ್ಲಿ ಅನೇಕ ರಾಗಗಳನ್ನು ಹೊರಡಿ ಸುತ್ತಾನೆ. ಕೇವಲ ಐವತ್ತೆರಡು ಅಕ್ಷರಗಳಿಂದ ನಾವು ಸಾಹಿತ್ಯದಲ್ಲಿ ಬಗೆ ಬಗೆಯ ಭಾವ ವಿಚಾರಗಳನ್ನು ವ್ಯಕ್ತಗೊಳಿಸುತ್ತೇವೆ. ಈ ಸೃಷ್ಟಿಯದೂ ಹೀಗೇ. ಇಲ್ಲಿ ಅನಂತ ವಸ್ತು, ಅನಂತ ವೃತ್ತಿ. ಆದರೆ ಈ ಅಂತರ್ಬಾಹ್ಯ

ಸೃಷ್ಟಿಯೆಲ್ಲ ಹುಟ್ಟಿದುದು ಒಂದೇ ಒಂದು ಅಖಂಡ ಆತ್ಮ, ಒಂದೇ ಅಷ್ಟಧಾ ಪ್ರಕೃತಿಯಿಂದ. ಇವುಗಳ ಮಿಶ್ರಣದಿಂದ. ಕೋಪಿಷ್ಟನ ಕೋಪ, ಪ್ರೇಮಿಯ ಪ್ರೀತಿ, ದುಃಖಿಯ ಅಳು, ಆನಂದಿತನ ಆನಂದ, ಸೋಮಾರಿಯ ನಿದ್ರಾಮೋಹ, ಉದ್ಯೋಗಿಯ ಕರ್ಮಸ್ಫೂರ್ತಿ–ಎಲ್ಲವೂ ಒಂದೇ ಚೈತನ್ಯ ಶಕ್ತಿಯ ಆಟ. ಈ ಪರಸ್ಪರ ವಿರುದ್ಧ ಭಾವಗಳ ಮೂಲದಲ್ಲಿ ಒಂದೇ ಒಂದು ಚೈತನ್ಯ ತುಂಬಿದೆ. ಒಳಗಿನ ಚೈತನ್ಯ ಒಂದೇ. ಅದೇ ರೀತಿ ಹೊರಗಣ ಆಕಾರದ ಸ್ವರೂಪವೂ ಒಂದೇ. ಚೈತನ್ಯಮಯ ಆತ್ಮ, ಜಡಪ್ರಕೃತಿ, ಇವೆರಡರ ಬೆರಕೆಯಿಂದ ಸರ್ವ ಸೃಷ್ಟಿಯು ಜನನವಾಯಿತೆಂದು ಭಗವಂತ ಪ್ರಾರಂಭದಲ್ಲೇ ಹೇಳಿದಾನೆ.

ಆತ್ಮ ಹಾಗೂ ದೇಹ; ಪರಾ ಹಾಗೂ ಅಪರಾ ಪ್ರಕೃತಿ ಎಲ್ಲೆಲ್ಲೂ ಒಂದೇ. ಹೀಗಿದ್ದರೂ ಈ ಮಾನವನಿಗೆ ಮೋಹವೇಕೆ? ಭೇದವೇಕೆ ಕಾಣುತ್ತದೆ? ಇಷ್ಟವಾದ ಮನುಷ್ಯನ ಮುಖ ಸವಿ. ಬೇರೆಯವರದು ಬೇಸರ. ಒಬ್ಬನನ್ನು ಕಾಣಬೇಕು, ಇನ್ನೊಬ್ಬನನ್ನು ತಪ್ಪಿಸಬೇಕು ಎನಿಸಲೇಕೆ? ಒಂದೇ ಲೇಖನಿ, ಒಂದೇ ಕಾಗದ, ಒಬ್ಬನೇ ಚಿತ್ರಕಾರ; ಆದರೆ ಬೇರೆ ಬೇರೆ ಚಿತ್ರಗಳಿಂದ ಬೇರೆ ಬೇರೆ ಭಾವ ಹುಟ್ಟುತ್ತದೆ. ಇದರಲ್ಲೇ ಚಿತ್ರಕಾರನ ಕೌಶಲ. ಚಿತ್ರಕಾರನ, ಸಿತಾರು ನುಡಿಸುವವನ ಬೆರಳುಗಳ ಕೌಶಲ ಅಂಥದು: ಅವರು ನಮ್ಮನ್ನು ಅಳಿಸಲೂ ಬಲ್ಲರು, ನಗಿಸಲೂ ಬಲ್ಲರು. ಈ ಎಲ್ಲ ಕೌಶಲದ ಗುಟ್ಟೋ ಇರುವುದು ಅವರ ಬೆರಳುಗಳಲ್ಲಿ.

ಈತ ಹತ್ತಿರ ಇರಬೇಕು, ಆತ ಇರಬಾರದು, ಈತ ನಮ್ಮವನು, ಆತ ಬೇರೆಯವನು–ಮೊದಲಾದ ವಿಚಾರ ಮನಸ್ಸಿನಲ್ಲಿ ಬರುವುದಕ್ಕೂ, ಅದರಿಂದ ಮನುಷ್ಯ ತನ್ನ ಕರ್ತವ್ಯವನ್ನು ತ್ಯಜಿಸಲು ಸಿದ್ಧನಾಗುವುದಕ್ಕೂ ಕಾರಣ ಮೋಹ. ಈ ಮೋಹದಿಂದ ಪಾರಾಗಬೇಕಿದ್ದರೆ ಸೃಷ್ಟಿಕರ್ತನ ಕರಾಂಗುಳಿಯ ಕೌಶಲವನ್ನು ಅರಿಯಬೇಕು. ಬೃಹದಾರಣ್ಯಕ ಉಪನಿಷತ್ತಿನಲ್ಲಿ ನಗಾರಿಯ ದೃಷ್ಟಾಂತ ಕೊಟ್ಟಿದಾರೆ. ನಗಾರಿ ಒಂದೇ; ಅದರಿಂದ ಹೊರಡುವ ನಾದ ನೂರಾರು. ಕೆಲವು ನಮ್ಮನ್ನು ಹೆದರಿಸುತ್ತವೆ. ಕೆಲವು ಕುಣಿಸುತ್ತವೆ. ಈ ಎಲ್ಲ ಭಾವಗಳನ್ನೂ ಗೆದ್ದುಕೊಳ್ಳಬೇಕಿದ್ದರೆ ನಗಾರಿ ಬಾರಿಸುವವನನ್ನು ವಶಪಡಿಸಿಕೊಂಡರೆ ಸರಿ. ಅವನನ್ನು ಹಿಡಿದರೆ

ಆಯಿತು—ಎಲ್ಲ ನಾದವನ್ನೂ ಹಿಡಿದಂತೆಯೇ. ಅದಕ್ಕೇ ಭಗವಂತ ಒಂದೇ ವಾಕ್ಯದಲ್ಲಿ ಹೇಳಿರುವುದು : "ಮಾಯೆಯನ್ನು ದಾಟಲಿಚ್ಛಿಸುವವರು ನನಗೆ ಶರಣಾಗಬೇಕು."

ಬಂದೆಯೋ ನನಗೆ ಶರಣ । ಲೀಲೆಯಿಂದಿಲ್ಲಿ ತರಣ ।
ಇತ್ರಾಣ ದಡಕೆ ದಿಟವು । ಬತ್ತೀತು ಮಾಯೆ ಜಲವು ॥ *

ಈ ಮಾಯೆ ಎಂದರೇನು? ಪರಮಾತ್ಮನ ಶಕ್ತಿ, ಅವನ ಕಲೆ, ಅವನ ಕೌಶಲವೇ ಮಾಯೆ. ಪ್ರಕೃತಿ—ಆತ್ಮ, ಇಲ್ಲವೆ ಜೈನರು ಹೇಳುವ ಹಾಗೆ ಜೀವ-ಅಜೀವಗಳ ಮಿಶ್ರಣದಿಂದ ಈ ಅನಂತ ವರ್ಣಗಳ ಸೃಷ್ಟಿಯನ್ನು ರಚಿಸಿದಾತನ ಆ ಶಕ್ತಿಯೇ, ಆ ಕಲೆಯೇ ಮಾಯೆ. ನೆರೆಮನೆಯಲ್ಲಿ ದೊರೆಯುವ ರೊಟ್ಟಿ, ಸರ್ವರಸದ ತೊವ್ವೆ, ಎಲ್ಲಾ ಒಂದೇ ಬಗೆಯದು. ಹಾಗೆ ಒಂದೇ ಅಖಂಡ ಆತ್ಮ, ಒಂದೇ ಅಷ್ಟಧಾ ಶರೀರ, ಇವುಗಳಿಂದ ಪರಮಾತ್ಮ ಅನೇಕ ವಸ್ತುಗಳನ್ನು ರಚಿಸಿದಾನೆ. ಅವನ್ನು ಕಂಡು ಬಗೆ ಬಗೆಯ ಪರಸ್ಪರ ವಿರೋಧವಾದ ಒಳಿತು-ಕೆಟ್ಟ ಭಾವಗಳೆಷ್ಟೋ ನಮಗೆ ಉಂಟಾಗುತ್ತವೆ. ಅವುಗಳಾಚೆ ನೆಗೆದು ನೈಜಶಾಂತಿಯನ್ನು ಅನುಭವಿಸಬೇಕಿದ್ದರೆ ಆ ವಸ್ತುಗಳನ್ನು ನಿರ್ಮಿಸುವವನನ್ನು ಹಿಡಿದುಕೊಳ್ಳಬೇಕು. ಅವನ ಗುರುತು ಮಾಡಿಕೊಳ್ಳಬೇಕು. ಆ ಗುರುತು ಆದರೆ ಈ ಭೇದಜನಕ ಆಸಕ್ತಿಜನಕ ಮೋಹವನ್ನು ತೊಡೆದುಹಾಕಲು ಸಾಧ್ಯವಾದೀತು.

ಆ ಪರಮಾತ್ಮನನ್ನು ಅರಿತುಕೊಳ್ಳುವ ಮಹಾಸಾಧನೆಯೊಂದನ್ನು, ಮಹಾವಿಕರ್ಮವೊಂದನ್ನು ವಿವರಿಸುವುದಕ್ಕಾಗಿ ಈ ಅಧ್ಯಾಯದಲ್ಲಿ ಭಕ್ತಿಯ ಭವ್ಯವಾದ ಬಾಗಿಲನ್ನು ತೆರೆದಿದೆ. ಚಿತ್ತಶುದ್ಧಿಗಾಗಿ ಯಜ್ಞ-ದಾನ, ಜಪ-ತಪ, ಧ್ಯಾನ-ಧಾರಣೆ ಮುಂತಾದ ವಿಕರ್ಮಗಳನ್ನು ಸೂಚಿಸಲಾಗಿದೆ. ಈ ಸಾಧನೆಗಳೆಂದರೆ ಸೋಡ, ಸವುಳು, ಸಾಬೂನು ಇದ್ದಹಾಗೆ ಎನ್ನುತ್ತೇನೆ. ಆದರೆ ಭಕ್ತಿಯೆಂದರೆ ನೀರು. ಸೋಡ, ಸವುಳು, ಸಾಬೂನು ಶುಚಿ ಮಾಡುತ್ತದೆ. ನಿಜ. ಆದರೆ ನೀರೇ ಇಲ್ಲದಿದ್ದರೆ ಅವುಗಳ ಆಟ ಏನು

---

* ಯೇಥ ಏಕಚಿ ಲೀಲಾತರಲೇ । ಜೇ ಸರ್ವ ಭಾವೇ ಮಜ ಭಜಲೇ ।
ತ ಯಾಂ ಐಲೀ ಚಿ ಥಡಿ ಸರಲೇ । ಮಾಯಾ ಜಳ ॥

ನಡೆದೀತು? ನೋಡ, ಸವುಳು, ಸಾಬೂನು ಇಲ್ಲದಿದ್ದರೂ ಬರೀ ನೀರು ಸ್ವಚ್ಛತೆ ಕೊಡಬಲ್ಲದು. ನೀರಿನ ಜೊತೆಗೆ ಅವು ಬೆರೆತಲ್ಲಿ 'ಅಧಿಕಸ್ಯ ಅಧಿಕಂ ಫಲಂ' ಆದೀತು. ಹಾಲಿಗೆ ಸಕ್ಕರೆ ಸೇರಿದ ಹಾಗೆ. ಯಜ್ಞ, ಯಾಗ ಧ್ಯಾನ ತಪಸ್ಸುಗಳಲ್ಲಿ ಹಾರ್ದಿಕತೆ ಇಲ್ಲವಾದರೆ ಚಿತ್ತಶುದ್ಧಿಯಾಗುವ ಬಗೆ ಹೇಗೆ? ಹಾರ್ದಿಕತೆಯೆಂದರೇನೇ ಭಕ್ತಿ.

ಎಲ್ಲ ಉಪಾಯಗಳಿಗೂ ಅಗತ್ಯವಾದುದು ಭಕ್ತಿ. ಅದು ಸಾರ್ವಭೌಮ ಉಪಾಯ. ಸೇವಾಶಾಸ್ತ್ರ ಕಲಿತವನು, ಉಪಚಾರದ ತಿಳಿವಳಿಕೆಯುಳ್ಳವನು ರೋಗಿಯ ಶುಶ್ರೂಷೆಗೆ ಹೋಗಬೇಕು. ಆದರೆ ಆತನ ಮನಸ್ಸಿನಲ್ಲಿ ಕಳಕಳಿ ಇಲ್ಲದಿದ್ದರೆ ನಿಜವಾದ ಸೇವೆ ಆದೀತೇ? ಎತ್ತೇನೋ ಗಟ್ಟಿಮುಟ್ಟು. ಆದರೆ ಅದಕ್ಕೆ ಬಂಡಿ ಎಳೆವ ಮನಸ್ಸೇ ಇಲ್ಲದೆಹೋದರೆ ನೆಲ ಹಿಡಿದು ಕೂತೀತು; ಬಂಡಿಯನ್ನು ತಗ್ಗಿನಲ್ಲಿ ನೂಕಿಬಿಟ್ಟೀತು. ಮನಸ್ಸಿಲ್ಲದೆ ಮಾಡುವ ಕರ್ಮ ದಿಂದ ತುಷ್ಟಿ- ಪುಷ್ಟಿ ಯಾವುದೂ ಇಲ್ಲ.

## ೩೩. ಭಕ್ತಿಯಿಂದ ವಿಶುದ್ಧ ಆನಂದದ ಲಾಭ

ಇಂಥ ಭಕ್ತಿಯಿದ್ದರೆ ಆ ಮಹಾ ಚಿತ್ರಕಾರನ ಕಲೆ ಕಂಡೀತು. ಅವನ ಕೈಯಲ್ಲಿನ ಆ ಕುಂಚವೂ ಕಾಣಿಸೀತು. ಆ ಉಗಮದ ಝರಿಯನ್ನು, ಅದರ ಅಪೂರ್ವ ಸವಿಯನ್ನು, ಒಮ್ಮೆ ರುಚಿ ನೋಡಿದರೆ ನಾಕು — ಅದರ ಮುಂದೆ ಇನ್ನುಳಿದ ಎಲ್ಲಾ ರಸಗಳೂ ತುಚ್ಛವಾಗಿಯೂ ನೀರಸವಾಗಿಯೂ ಕಂಡಾವು. ನಿಜವಾದ ಬಾಳೆಯ ಹಣ್ಣು ತಿಂದವನು ಬಣ್ಣದ ಕಟ್ಟಿಗೆ ಬಾಳೆಯನ್ನು ಅರೆಕ್ಷಣ ಕೈಗೆತ್ತಿಕೊಂಡು, ಅಂದವಾಗಿದೆಯೆಂದು ಹೇಳಿ ಕೆಳಗಿಡುತ್ತಾನೆ. ನಿಜವಾದ ಬಾಳೆ ಹಣ್ಣು ತಿಂದಿರುವುದರಿಂದ ಅವನಿಗೆ ಕಟ್ಟಿಗೆಯ ಹಣ್ಣಿನ ಬಗ್ಗೆ ಅಷ್ಟು ಉತ್ಸಾಹ ಇರದು. ಹಾಗೇ ಮೂಲ ಝರಿಯ ಸವಿ ಬಲ್ಲವನು ಹೊರಗಣ ಕೊಬ್ಬರಿ ಬೆಲ್ಲವನ್ನು ಚಪ್ಪರಿಸಲಾರ.

'ನಗರದಲ್ಲಿ ಇವೊತ್ತು ಭಾರಿ ದೀಪೋತ್ಸವವಿದೆ, ಬನ್ನಿ' ಎಂದು ಒಬ್ಬ ತತ್ವಜ್ಞಾನಿಗೆ ಜನ ಹೇಳಿದರು. ಆತ 'ದೀಪೋತ್ಸವ ಎಂದರೇನು? ಒಂದು ದೀಪ, ಅದರ ಮುಂದೆ ಇನ್ನೊಂದು, ಅದರ ಮುಂದೆ ಮೂರನೆ ಯದು. ಹೀಗೆ ಲಕ್ಷ, ಹತ್ತು ಲಕ್ಷ, ಕೋಟಿ, ಎಷ್ಟಾದರೂ ದೀಪ ಇವೆ

ಅನ್ನಿ. ಅದೇತಾನೆ ದೀಪೋತ್ಸವ?' ಎಂದ. ಗಣಿತದಲ್ಲಿ ೧+೨+೩ ಹೀಗೆ ಅನಂತದವರೆಗೂ ಇದೆ ಲೆಕ್ಕ. ಸಂಖ್ಯೆಗಳಲ್ಲಿರುವ ಅಂತರ ತಿಳಿದ ಮೇಲೆ ಎಲ್ಲಾ ಸಂಖ್ಯೆಗಳನ್ನೂ ಮಂಡಿಸುವ ಅಗತ್ಯವಿಲ್ಲ. ಹಾಗೇ ಆ ದೀಪಗಳನ್ನು ಒಂದರ ಮುಂದೆ ಇನ್ನೊಂದು ಇಟ್ಟಿದೆ. ಅದರಲ್ಲಿ ಅರಿಯುವಂಥ ವೈಶಿಷ್ಟ್ಯ ಏನು ಬಂತು? ಆದರೆ ಇಂಥ ಆನಂದಗಳೆಂದರೆ ಮನುಷ್ಯನಿಗೆ ಪ್ರೀತಿ. ನಿಂಬೆಯ ಹಣ್ಣು ತಂದು, ಸಕ್ಕರೆ ತಂದು, ನೀರಿನಲ್ಲಿ ಬೆರೆಸಿ 'ಎಷ್ಟು ಚೆನ್ನಾಗಿದೆ ಪಾನಕ!' ಎನ್ನುತ್ತಾನೆ. ರುಚಿ ನೋಡುವುದರ ಹೊರತು ಬೇರೆ ಕೆಲಸವಿಲ್ಲ ನಾಲಗೆಗೆ. ಅದರಲ್ಲಿ ಇದನ್ನು ಕಲೆಸು; ಇದರಲ್ಲಿ ಅದನ್ನು ಕಲೆಸು. ಇಂಥ ಕಲಸುಮೇಲೋಗರ ತಿನ್ನುವುದರಲ್ಲೇ ಎಲ್ಲಾ ಸುಖ. ಒಂದು ಸಲ ಚಿಕ್ಕಂದಿನಲ್ಲಿ ನಾ ಸಿನಿಮಾ ನೋಡಲು ಹೋಗಿದ್ದೆ. ಜೊತೆಗೆ ಒಂದು ತಟ್ಟು ತೆಗೆದುಕೊಂಡಿದ್ದೆ. ನಿದ್ದೆ ಬಂದರೆ ಅದರ ಮೇಲೆ ಮಲಗಿದ ರಾಯಿತು ಎಂದು. ಪರದೆಯ ಮೇಲಿನ ಆ ಕಣ್ಣು ಕುಕ್ಕಿಸುವ ಉರಿಯನ್ನು ನೋಡತೊಡಗಿದೆ ಎರಡು ಮೂರು ನಿಮಿಷಗಳಲ್ಲಿಯೇ ಕಣ್ಣು ದಣಿದು ಹೋಯಿತು. ನಾನು ತಟ್ಟಿನ ಮೇಲೆ ಒರಗಿಕೊಂಡು ಚಿತ್ರ ಮುಗಿದಾಗ ಎಬ್ಬಿಸಿ ಎಂದೆ. ರಾತ್ರಿಯ ಹೊತ್ತು ಹೊರಗಡೆ ಬಯಲೊಳಗೆ ಗಗನದಲ್ಲಿನ ಚಂದ್ರತಾರೆಗಳನ್ನು ನೋಡುವುದು ಬಿಟ್ಟು, ಶಾಂತ ಸೃಷ್ಟಿಯಲ್ಲಿನ ಆ ಪವಿತ್ರ ಆನಂದವನ್ನು ಬಿಟ್ಟು, ಆ ಇಕ್ಕಟ್ಟಾದ ಚಿತ್ರಮಂದಿರದಲ್ಲಿ ಬೆಂಕಿಯ ಗೊಂಬೆ ಕುಣಿಯುವಾಗ ಚಪ್ಪಾಳೆ ತಟ್ಟುತ್ತಾರೆ. ಇದೊಂದೂ ನನಗರ್ಥವಾಗಲಿಲ್ಲ.

ಮನುಷ್ಯ ಇಷ್ಟೇಕೆ ನಿರಾನಂದ? ಆ ನಿರ್ಜೀವ ಬೊಂಬೆಗಳನ್ನು ನೋಡಿ ಕೊನೆಗೆ ಒಂದು ಕ್ಷಣ ಈ ಬಡವಾಯಿ ಆನಂದಪಡಬೇಕು! ಬಾಳಿನಲ್ಲಿ ಆನಂದವಿಲ್ಲದಾಗಲೆ ಈ ಕೃತ್ರಿಮ ಆನಂದದ ಶೋಧನೆ. ನಮ್ಮ ನೆರೆಯಲ್ಲಿ ಒಮ್ಮೆ ವಾದ್ಯಕ್ಕಾರಂಭವಾಯಿತು 'ವಾದ್ಯ ಏಕೆ?' ಎಂದು ನಾ ಕೇಳಿದರೆ 'ಗಂಡು ಮಗು ಹುಟ್ಟಿತು' ಎಂದು ಉತ್ತರ ಬಂತು. ಜಗತ್ತಿನಲ್ಲೆಲ್ಲಾ ನಿನಗೊಬ್ಬನಿಗೇ ಮಗ ಹುಟ್ಟಿದನೆ? ಟಂ ಟಂ ಬಾರಿಸುತ್ತಾ ಮಗ ಹುಟ್ಟಿದ, ಮಗ ಹುಟ್ಟಿದ ಎಂದು ಜಗತ್ತಿಗೆಲ್ಲ ಸಾರುತ್ತೀಯಲ್ಲ. ಮಗ ಹುಟ್ಟಿದ ಎಂದು ಜಿಗಿಯುತ್ತೀ ಕುಣಿಯುತ್ತೀ ಹಾಡುತ್ತೀ—ಎಂಥ ಮಕ್ಕಳಾಟ ಇದು! ಏನೋ ಆನಂದದ ಬರಗಾಲ ಬಂದಿದೆ. ಬರಗಾಲದಲ್ಲಿ ಅನ್ನ ಕಾಣಿಸಿದರೆ

ನೆಗೆದಾಡುವ ಜನರ ಹಾಗೆ ಮಗ ಹುಟ್ಟಿದ, ಸರ್ಕಸ್ ಬಂತು, ಸಿನಿಮಾ ಬಂತು ಎನ್ನುತ್ತಲೂ ಆನಂದಕ್ಕಾಗಿ ಹಸಿದ ಇವರಿಗೆ ನೆಗೆತವೊ ನೆಗೆತ!

ಇದೇಯೆ ನಿಜವಾದ ಆನಂದ? ಗಾನ ಕಿವಿಯಲ್ಲಿ ಸೇರಿ, ಅದರ ಲಹರಿ ಮೆದುಳಿಗೆ ಏಟು ಹಾಕುತ್ತದೆ. ಕಣ್ಣಿಗೆ ರೂಪ ಕಾಣಿಸಿ ಮೆದುಳಿಗೆ ಏಟು ಬೀಳುತ್ತದೆ. ಈ ಏಟುಗಳಿಂದಲೇ ಆನಂದ ಈ ಬಡಪಾಯಿಗಳಿಗೆ! ಹೊಗೆಸೊಪ್ಪನ್ನು ತೀಡಿ ಮೂಗಿಗೆ ಏರಿಸುವವನೊಬ್ಬ, ಸುತ್ತಿ ಬೀಡಿಯಾಗಿ ಸೇದುವವನೊಬ್ಬ. ನಸ್ಯ ಬೀಡಿಗಳ ಘಾಟು ಬಂದಾಗ ಅವರಿಗೆ ಆನಂದದ ಭಂಡಾರವೇ ಸಿಕ್ಕಂತಾಗುವುದೇನೋ. ಬೀಡಿಯ ತುಂಡು ಸಿಕ್ಕಿದರೂ ಸಾಕು, ಅವರ ಆನಂದಕ್ಕೆ ಮಿತಿಯೇ ಇಲ್ಲ. 'ಆ ಬೀಡಿಯ ಮತ್ತಿನಲ್ಲಿ ಆ ಮನುಷ್ಯ ಸಹಜವಾಗಿಯೇ ಯಾರನ್ನಾದರೂ ಕೊಂದುಬಿಟ್ಟಾನು' ಎನ್ನುತ್ತಾನೆ ಟಾಲ್‌ಸ್ಟಾಯ್. ಅದೂ ಒಂದು ಬಗೆಯ ಅಮಲೇ.

ಮನುಷ್ಯ ಇಂಥ ಆನಂದದಲ್ಲಿ ತಲ್ಲೀನನಾಗುವುದೇಕೆ? ನಿಜವಾದ ಆನಂದದ ಸುಳಿವು ತಿಳಿಯದಿರುವುದೇ ಇದಕ್ಕೆ ಕಾರಣ. ನೆರಳನ್ನು ನಂಬಿ ಮನುಷ್ಯ ಮೋಸ ಹೋಗಿದ್ದಾನೆ. ಇಂದು ಆತ ಉಪಭೋಗಿಸುತ್ತಿರುವುದು ಬರೀ ಪಂಚ ಜ್ಞಾನೇಂದ್ರಿಯಗಳ ಆನಂದ. ಕಣ್ಣು ಇಲ್ಲದೇ ಹೋಗಿದ್ದಲ್ಲಿ ಜಗತ್ತಿನಲ್ಲಿ ನಾಲ್ಕೇ ಇಂದ್ರಿಯಗಳ ಆನಂದವಿದೆಯೆಂದು ಆತ ಭಾವಿಸಿ ಕೊಳ್ಳುತ್ತಿದ್ದ. ಆರು ಇಂದ್ರಿಯಗಳ ಮನುಷ್ಯನೊಬ್ಬ ಮಂಗಳಗ್ರಹದಿಂದ ನಾಳೆ ಇಳಿದು ಬಂದರೆ, ಈ ಪಂಚ ಜ್ಞಾನೇಂದ್ರಿಯದವ ಖಿನ್ನನಾಗಿ 'ಆತನ ಎದುರಿಗೆ ನಾನೆಷ್ಟು ದುರ್ಬಲ' ಎಂದು ಅತ್ತಾನು.

ಸೃಷ್ಟಿಯ ಪೂರ್ಣ ಅರ್ಥ ಪಂಚ ಜ್ಞಾನೇಂದ್ರಿಯಗಳಿಗೆ ತಿಳಿಯುವುದು ಹೇಗೆ? ಈ ಐದು ವಿಷಯಗಳಲ್ಲೆ ಆರಿಸಿಕೊಂಡು ಈ ಹುಚ್ಚ ರಮಿಸುತ್ತಾನೆ. ಕತ್ತೆಯ ಕೂಗು ಕಿವಿಗೆ ಬಿದ್ದರೆ ಅಶುಭ ಎನ್ನುತ್ತಾನೆ. ಈ ಮನುಷ್ಯನ ದರ್ಶನದಿಂದ ಆ ಕತ್ತೆಗೂ ಅಶುಭವಲ್ಲವೆ? ನಿನಗೆ ಮಾತ್ರವೆ ಕೆಡುಕು: ಬೇರೆಯವನಿಗೆ ನಿನ್ನಿಂದ ಕೆಡುಕಿಲ್ಲವೊ? ಕತ್ತೆಯ ಕೂಗು ಅಶುಭ ಎಂದು ತಿಳಿದು ಕೂಡುತ್ತಾನೆ.

ನಾನು ಬರೋಡಾದ ಕಾಲೇಜಿನಲ್ಲಿದ್ದಾಗ ಒಮ್ಮೆ ಐರೋಪ್ಯ ಗಾಯಕರು ಬಂದರು. ಅವರು ಚೆನ್ನಾಗಿ ಹಾಡುತ್ತಿದ್ದರು. ಚೆನ್ನಾಗಿ

ಹಾಡಲು ಪ್ರಯತ್ನಿಸುತ್ತಿದ್ದರು. ಆದರೆ ಯಾವಾಗ ಅಲ್ಲಿಂದ ಕಾಲು ಕಿತ್ತೇನೋ ಎನಿಸುತ್ತಿತ್ತು ನನಗೆ. ಅಂಥ ಹಾಡು ಕೇಳುವ ಅಭ್ಯಾಸ ನನಗಿರಲಿಲ್ಲ. ಚೆನ್ನಾಗಿಲ್ಲ ಎಂದುಕೊಂಡೆ. ನಮ್ಮ ಸಂಗೀತಗಾರ ಅಲ್ಲಿಗೆ ಹೋದರೆ ಅವನಿಗೂ ಅಷ್ಟೇ ಆದೀತು. ಸಂಗೀತದಿಂದ ಒಬ್ಬನಿಗೆ ಆನಂದವಾದೀತು. ಇನ್ನೊಬ್ಬನಿಗೆ ಆಗದಿದ್ದೀತು. ಅದು ನಿಜವಾದ ಆನಂದವಲ್ಲ, ಸುಳ್ಳು ಆನಂದ. ನಿಜವಾದ ಆನಂದದ ದರ್ಶನವಾಗುವ ತನಕ ಈ ಭ್ರಾಮಕ ಆನಂದವೇ ನಮ್ಮನ್ನು ಕುಣಿಸೀತು. ನಿಜವಾದ ಹಾಲು ಸಿಕ್ಕುವವರೆಗೂ ನೀರಿನಲ್ಲಿ ಕಲೆಸಿದ ಹಿಟ್ಟನ್ನೇ ಅಶ್ವತ್ಥಾಮ ಹಾಲೆಂದು ಕುಡಿಯುತ್ತಿದ್ದ. ಹಾಗೇ ನಿಜಸ್ವರೂಪ ನಿನಗೆ ತಿಳಿದಾಗ, ಅದರ ಆನಂದದ ರುಚಿ ಗೊತ್ತಾದಾಗ ಇನ್ನೆಲ್ಲವೂ ನೀರಸ ಎನಿಸೀತು.

ಅಂಥ ಆನಂದವನ್ನು ಹುಡುಕಿ ತೆಗೆಯಲು ಭಕ್ತಿ ಉತ್ಕೃಷ್ಟ ದಾರಿ. ಈ ದಾರಿಗುಂಟ ಹೊರಟಾಗ ಪರಮಾತ್ಮನ ಕುಶಲತೆ ಕಂಡುಬಂದೀತು. ಆ ದಿವ್ಯ ಕಲ್ಪನೆ ಬಂದಾಗ ಇನ್ನುಳಿದುವೆಲ್ಲಾ ತಾವಾಗಿಯೇ ಮಸುಳಿಸಿ ಹೋದಾವು. ಆಗ ಕ್ಷುದ್ರ ಆಕರ್ಷಣೆ ಉಳಿಯದು. ಆಮೇಲೆ ಜಗತ್ತಿನಲ್ಲಿ ಒಂದೇ ಆನಂದ ತುಂಬಿದೆಯೆಂದು ಕಂಡೀತು. ಮಿಠಾಯಿಯ ಅಂಗಡಿಗಳೇನೋ ಸಾವಿರಾರು ಇದ್ದರೂ ಮಿಠಾಯಿಯ ಬಗೆ ಮಾತ್ರ ಒಂದೇ. ನಿಜವಾದ ವಸ್ತು ದೊರೆಯುವವರೆಗೂ ಚಂಚಲವಾದ ಗುಬ್ಬಚ್ಚಿಯಂತೆ ಇಲ್ಲಿ ಒಂದು ಕಣ, ಅಲ್ಲಿ ಒಂದು ಕಣ ತಿನ್ನುವುದು. ಬೆಳಗ್ಗೆ ನಾನು ತುಳಸೀ ರಾಮಾಯಣ ಓದುತ್ತಿದ್ದೆ. ದೀಪದ ಬಳಿ ಹುಳು ನೇರಿದ್ದವು. ಆಗ ಹಲ್ಲಿಯೊಂದು ಬಂತು. ನನ್ನ ರಾಮಾಯಣದ ಗೊಡವೆಯೇನು ಅದಕ್ಕೆ? ಹುಳುಗಳನ್ನು ಕಂಡು,ಅದಕ್ಕೆಷ್ಟು ಆನಂದ! ಇನ್ನು ಹುಳುಗಳನ್ನು ಅದು ಹಿಡಿಯಬೇಕು. ಅಷ್ಟರಲ್ಲಿ ನಾನು ಕೊಂಚ ಕೈ ಅಲ್ಲಾಡಿಸಿದೆ. ಹಲ್ಲಿ ಓಡಿಹೋಯಿತು. ಆದರೂ ಅದರ ಲಕ್ಷ್ಯವೆಲಾ ಆ ಹುಳುಗಳ ಕಡೆಗೇ ಇತ್ತು. ಅವನ್ನು ನೋಡಿ ಅದರ ನಾಲಗೆಯಲ್ಲಿ ನೀರೂರಿತು. ನನ್ನ ನಾಲಗೆಯಲ್ಲಿ ಲಾಲಾರಸ ಹುಟ್ಟಲಿಲ್ಲ. ನನಗೆ ದೊರೆತ ಆನಂದರಸದ ಸುಳಿವು ಆ ಹಲ್ಲಿಗೆ ತಿಳಿಯುವ ಬಗೆ ಹೇಗೆ? ರಾಮಾಯಣದ ರಸವನ್ನು ಅದು ಸವಿಯಲಾರದು. ಆ ಹಲ್ಲಿಯ ಹಾಗಿದೆ ನಮ್ಮ ಸ್ಥಿತಿ. ಎಷ್ಟೋ

ರಸಗಳಲ್ಲಿ ತಲ್ಲೀನರಾಗಿದ್ದೇವೆ. ನಿಜವಾದ ರಸ ದೊರೆತಲ್ಲಿ ಎಷ್ಟು ಚೆನ್ನಾದೀತು! ಆ ನಿಜವಾದ ರಸದ ಸವಿಯನ್ನುಣ್ಣಲು ಭಗವಂತ ಭಕ್ತಿಯ ಸಾಧನವನ್ನು ತೋರಿಸುತ್ತಿದಾನೆ.

## ೩೪. ಸಕಾಮ ಭಕ್ತಿಯಲ್ಲೂ ಬೆಲೆಯುಂಟು

ಭಕ್ತರಲ್ಲಿ ಮೂರು ಬಗೆ ಎಂದಿದಾನೆ ಭಗವಂತ. (೧) ಸಕಾಮ ಭಕ್ತಿಯುಳ್ಳವ (೨) ನಿಷ್ಕಾಮವಾದರೂ ಏಕಾಂಗಿಯಾದ ಭಕ್ತಿಯುಳ್ಳವ (೩) ಜ್ಞಾನಿ-ಅಥವಾ ಸಂಪೂರ್ಣ ಭಕ್ತಿಯುಳ್ಳವ. ನಿಷ್ಕಾಮವಾದರೂ ಏಕಾಂಗಿ ಭಕ್ತಿಯುಳ್ಳವರಲ್ಲೇ ಮೂರು ಭೇದ. (೧) ಆರ್ತ (೨) ಜಿಜ್ಞಾಸು (೩) ಅರ್ಥಾರ್ಥಿ. ಹೀಗೆ ಭಕ್ತಿವೃಕ್ಷದ ಬೇರೆ ಬೇರೆ ಶಾಖೆ ಇವು.

ಸಕಾಮ ಭಕ್ತ ಎಂದರೇನು? ಯಾವುದೋ ಅಪೇಕ್ಷೆಗಳನ್ನಿಟ್ಟು ಕೊಂಡು ದೇವನೆಡೆಗೆ ಧಾವಿಸುವಾತ. ಈ ಭಕ್ತಿ ನಿಕೃಷ್ಟವಾದುದೆಂದು ನಾನು ಅದನ್ನು ನಿಂದಿಸುವುದಿಲ್ಲ. ಮಾನ ಮರ್ಯಾದೆ ದೊರೆಯಬೇಕೆಂದು ಅನೇಕರು ಸಾರ್ವಜನಿಕ ಸೇವೆಯಲ್ಲಿ ತೊಡಗುವುದುಂಟು. ಅದರಲ್ಲೇನು ತಪ್ಪು? ಅವರಿಗೆ ಮರ್ಯಾದೆ ಮಾಡಿ; ಚೆನ್ನಾಗಿಯೇ ಮಾಡಿ. ಅದರಿಂದ ಏನೂ ಕೆಡುಕಿಲ್ಲ. ಹೀಗೆ ಮರ್ಯಾದೆ ಸಿಕ್ಕುತ್ತ ಬಂದರೆ ಮುಂದೆ ಅವರು ಸಾರ್ವಜನಿಕ ಕಾರ್ಯಗಳಲ್ಲಿ ಸ್ಥಿರವಾದಾರು. ಆಮೇಲೆ ಆ ಕಾರ್ಯ ಗಳಲ್ಲಿಯೇ ಅವರಿಗೆ ಆನಂದವುಂಟಾದೀತು. ಮರ್ಯಾದೆ ಬೇಕೆನಿಸುವುದಕ್ಕೆ ಅರ್ಥವೇನು? ನಾವು ಮಾಡುತ್ತಿರುವ ಕೆಲಸ ಒಳ್ಳೆಯದು ಎನ್ನುವ ನಂಬಿಕೆ ಬರುವುದು ಮರ್ಯಾದೆ ದೊರೆತಾಗ. ತನ್ನ ಸೇವೆ ಸರಿಯೋ ತಪ್ಪೋ ತಿಳಿಯಲು ಮನುಷ್ಯನಲ್ಲಿ ಆಂತರಿಕ ಸಾಧನವೇನೂ ಇಲ್ಲ. ಈ ಬಾಹ್ಯ ಸಾಧನಗಳನ್ನು ಅವಲಂಬಿಸುತ್ತಾನೆ. ತಾಯಿಯಿಂದ ಶಾಬಾಸ್ ಎನಿಸಿ ಕೊಂಡ ಹುಡುಗನಿಗೆ ಆಕೆ ಹೇಳಿದ ಕೆಲಸವನ್ನು ಇನ್ನಷ್ಟು ಮಾಡೋಣ ವೆನಿಸುತ್ತದೆ. ಸಕಾಮ ಭಕ್ತಿಯದೂ ಹೀಗೇ. ನೇರವಾಗಿ ದೇವರ ಕಡೆ ಹೋಗಿ 'ಕೊಡು' ಎನ್ನುವವ ಸಕಾಮ ಭಕ್ತ, ದೇವರ ಹತ್ತಿರ ಹೋಗಿ ಎಲ್ಲವನ್ನೂ ಕೇಳುವುದೇನೂ ಸಾಮಾನ್ಯ ವಿಚಾರವಲ್ಲ. ಅದೊಂದು ಅಸಾಮಾನ್ಯ ವಸ್ತು. 'ಯಾತ್ರೆಗೆ ಬರುತ್ತೀಯಾ?' ಎಂದು ನಾಮದೇವನನ್ನು

ಜ್ಞಾನದೇವರು ಕೇಳಿದರು. 'ಯಾತ್ರೆ ಏತಕ್ಕೆ?' ಎಂದ ನಾಮದೇವ. 'ಸಾಧುಶರಣರ ಭೇಟಿ ಗೀಟಿ ಆದೀತು' ಎಂದು ಹೇಳಿದ ಜ್ಞಾನದೇವ. 'ದೇವರನ್ನು ಕೇಳಿ ಬರುತ್ತೇನೆ' ಎಂದು ನಾಮದೇವ ಗುಡಿಯೊಳಗೆ ಹೋಗಿ ದೇವರೆದುರಿಗೆ ನಿಂತ. ಆತನ ಕಣ್ಣಿನಿಂದ ನೀರು ಸುರಿಯತೊಡಗಿತು. ಆತನ ದೃಷ್ಟಿಯೆಲ್ಲಾ ದೇವರ ಚರಣಗಳ ಕಡೆಗಿತ್ತು. ಕೊನೆಗೆ ಅಳುತ್ತ ಅಳುತ್ತ 'ದೇವರೇ, ನಾನು ಹೋಗಲೇನಯ್ಯ?' ಎಂದ. ಹತ್ತಿರವೇ ಇದ್ದ ಜ್ಞಾನದೇವ ಈ ನಾಮದೇವನನ್ನು ನೀವು ಹುಚ್ಚನೆಂದೀರಾ? ಹೆಂಡತಿ ಮನೆಯಲ್ಲಿಲ್ಲವೆಂದು ಅಳುವವರು ಬಹಳ ಮಂದಿ. ಆದರೆ ದೇವರ ಇದಿರಿಗೆ ಅಳುವ ಭಕ್ತ ಸಕಾಮನಾದರೂ ಅಸಾಮಾನ್ಯ. ನಿಜವಾಗಿ ಬೇಡಬೇಕಾದ ವಸ್ತುವನ್ನಾತ ಬೇಡದಿರುವುದು ಆತನ ಅಜ್ಞಾನವೆಂಬುದೇನೋ ನಿಜ. ಆದರೆ ಅದರಿಂದ ಆತನ ಸಕಾಮಭಕ್ತಿ ತ್ಯಾಜ್ಯವಾಗದು.

ಬೆಳಗ್ಗೆ ಎದ್ದು ಹೆಂಗಸರು ಎಷ್ಟೋ ವ್ರತ ಮಾಡುತ್ತಾರೆ, ಪಂಚಾರತಿ ಬೆಳಗುತ್ತಾರೆ, ತುಳಸಿಯ ಪ್ರದಕ್ಷಿಣೆ ಮಾಡುತ್ತಾರೆ. ಸತ್ತ ಬಳಿಕ ದೇವರು ಕೃಪೆ ಮಾಡಲೆಂಬುದೇ ಇದಕ್ಕೆಲ್ಲ ಕಾರಣ. ಅವರ ತಿಳಿವಳಿಕೆ ಹಾಗಿದ್ದಿತು. ಅದಕ್ಕಾಗಿ ಆ ವ್ರತವೈಕಲ್ಯ, ಉಪವಾಸ. ಇಂಥ ವ್ರತಶೀಲ ಕುಟುಂಬ ಗಳಲ್ಲಿಯೆ ಮಹಾಪುರುಷರು ಹುಟ್ಟುವುದು. ತುಲಸೀದಾಸರ ಮನೆತನದಲ್ಲಿ ರಾಮತೀರ್ಥರು ಹುಟ್ಟಿದರು. ಪಾರ್ಶಿ ಭಾಷೆಯಲ್ಲಿ ಅವರಿಗೆ ಪೂರಾ ಪಾಂಡಿತ್ಯ. 'ತುಲಸೀದಾಸರ ಮನೆತನದವರಾಗಿ ನಿಮಗೆ ಸಂಸ್ಕೃತ ಬಾರದೆ?' ಎಂದು ಯಾರೋ ಕೇಳಿದರು. ಅದರಿಂದ ರಾಮತೀರ್ಥರ ಮನಸ್ಸಿನ ಮೇಲೆ ತುಂಬಾ ಪರಿಣಾಮವಾಯಿತು. ಮನೆತನದ ನೆನಪಿನ ಶಕ್ತಿ ಅಂಥದು. ಆ ಸ್ಫೂರ್ತಿಯ ಬಲದಿಂದ ರಾಮತೀರ್ಥರು ವೇದೋಪ ನಿಷತ್ತುಗಳನ್ನು ಆಳವಾಗಿ ಅಭ್ಯಸಿಸಿದರು. ಹೆಂಗಸರ ಭಕ್ತಿಯನ್ನು ಕಂಡು ಚೇಷ್ಟೆ ಮಾಡಬಾರದು. ಭಕ್ತಿಯ ಕಣಕಣವನ್ನು ಹೀಗೆ ಸಂಚಯಮಾಡಿದ ಕಡೆ ತೇಜಸ್ವಿ ಸಂತಾನ ಹುಟ್ಟುತ್ತದೆ. ಎಂತಲೇ ಭಗವಂತ ಹೇಳುವುದು— "ನನ್ನ ಭಕ್ತ ಸಕಾಮನಾಗಿದ್ದರೂ ಸಹ ನಾನು ಅವನ ಭಕ್ತಿಯನ್ನು ದೃಢಗೊಳಿಸುತ್ತೇನೆ. ಅವನ ಮನಸ್ಸಿನಲ್ಲಿ ಗೊಂದಲವುಂಟುಮಾಡಲಾರೆ. 'ನನ್ನ ರೋಗವನ್ನು ಗುಣಪಡಿಸು ದೇವಾ' ಎಂದು ಆತ ಕಳಕಳಿಯಿಂದ

ಕೇಳಿಕೊಂಡರೆ ಅವನ ಆರೋಗ್ಯದ ದೃಷ್ಟಿಯಿಂದ ಆ ರೋಗವನ್ನು ದೂರ ಮಾಡಿಯೇನು. ನನ್ನ ಹತ್ತಿರ ಬರುವುದರಲ್ಲಿ ಆತನ ನಿಮಿತ್ತ ಏನಿದ್ದರೂ ಸರಿ. ನಾನು ಆತನ ಬೆನ್ನಿನ ಮೇಲೆ ಕೈ ಆಡಿಸಿಯೇನು." ಧ್ರುವನ ಕಥೆಯನ್ನು ತೆಗೆದುಕೊಳ್ಳಿ. ತಂದೆಯ ತೊಡೆಯ ಮೇಲೆ ಸ್ಥಳ ದೊರೆಯಲಿಲ್ಲ. ದೇವರನ್ನು ಕೇಳೆಂದು ತಾಯಿ ಹೇಳಿದಳು. ಆತ ಉಪಾಸನೆಗೆ ತೊಡಗಿದ. ದೇವರು ಅಚಲಸ್ಥಾನವನ್ನೇ ಕೊಟ್ಟ! ಮನಸ್ಸು ನಿಷ್ಕಾಮವಾಗಿಲ್ಲದಿದ್ದರೂ ಏನಂತೆ? ಮನುಷ್ಯ ಹೋಗುವುದು ಯಾರ ಬಳಿಗೆ, ಬೇಡುವುದು ಯಾರಲ್ಲಿ —ಎನ್ನುವುದೇ ಮಹತ್ವದ್ದು. ಜಗತ್ತಿನೆದುರಿಗೆ ಬಾಯಿ ತೆರೆಯದೆ ದೇವನನ್ನು ಯಾಚಿಸುವ ವೃತ್ತಿ ಮಹತ್ವದ್ದು.

ಯಾವ ನಿಮಿತ್ತವಾದರೇನು, ಭಕ್ತಿಯ ಮಂದಿರದಲ್ಲಿ ಕಾಲಿಟ್ಟರೆ ಸರಿ. ಮೊದಲು ಕಾಮನೆಯಿಂದ ಬಂದಿದ್ದರೂ ಮುಂದೆ ನಿಷ್ಕಾಮರಾಗುವಿರಿ. ಪ್ರದರ್ಶನ ತೆರೆದಿರುತ್ತದೆ. ಸಂಚಾಲಕನೆನ್ನುತ್ತಾನೆ: 'ಬಂದಾದರೂ ನೋಡಿ ಒಮ್ಮೆ. ಎಂಥ ಚೆಂದ ಖಾದಿ! ನೋಡಿ ಬೇರೆ ಬೇರೆ ಮಾದರಿ'. ಮನುಷ್ಯ ಹೋಗುತ್ತಾನೆ. ಅವನ ಮನಸ್ಸಿನ ಮೇಲೆ ಪರಿಣಾಮವಾಗುತ್ತದೆ. ಭಕ್ತಿಯದೂ ಹಾಗೇ. ಭಕ್ತಿಯ ಮಂದಿರದಲ್ಲಿ ಒಮ್ಮೆ ಪ್ರವೇಶಿಸಿದರೆ ಅಲ್ಲಿನ ಸೌಂದರ್ಯ, ಸಾಮರ್ಥ್ಯ ತಿಳಿದೀತು. ಧರ್ಮರಾಜನ ಜೊತೆಗೆ ಸ್ವರ್ಗಕ್ಕೆ ಹೋಗುವಾಗ ಕೊನೆಗೆ ಉಳಿದುದು ನಾಯಿಯೊಂದೇ. ಭೀಮ ಅರ್ಜುನರೆಲ್ಲ ದಾರಿಯಲ್ಲಿ ಬಿದ್ದುಬಿಟ್ಟರು. ಸ್ವರ್ಗದ ಬಾಗಿಲಿಗೆ ಬಂದಾಗ 'ನಿನಗೆ ಪ್ರವೇಶವುಂಟು, ನಾಯಿಗಿಲ್ಲ' ಎಂದು ಧರ್ಮರಾಜನಿಗೆ ಹೇಳಿದರು. 'ನನ್ನ ನಾಯಿಗೆ ಪ್ರವೇಶವಿಲ್ಲವಾದರೆ ನನಗೂ ಬೇಡ' ಎಂದ ಧರ್ಮರಾಜ. ಅನನ್ಯಸೇವೆ ಮಾಡುವುದು ನಾಯಿಯಾದರೇನಂತೆ. ನಾನು ನಾನು ಎಂಬ ಮಿಕ್ಕವರೆಲ್ಲರಿಗೂ ಅದು ಹೆಚ್ಚಿನದು. ಭೀಮಾರ್ಜುನರಿಗಿಂತ ಅದು ಶ್ರೇಷ್ಠವಾಯಿತು. ಪರಮಾತ್ಮನ ಕಡೆ ಹೋಗದಿರುವ ಮಹಾ ಮಹಾ ವ್ಯಕ್ತಿಗಳಿಗಿಂತ ಆತನ ಕಡೆ ಹೋಗುವ ಕೀಟವೇ ಹೆಚ್ಚಿನದು. ದೇವಾಲಯದಲ್ಲಿ ಮೂರ್ತಿಯ ಮುಂದೆ ಬಸವನಿರುತ್ತದೆ. ಆ ನಂದಿಗೆ ಎಲ್ಲರೂ ನಮಸ್ಕರಿಸುತ್ತಾರೆ. ಸಾಮಾನ್ಯ ಬಸವನಲ್ಲ ಅದು. ದೇವರೆದುರಿಗೆ ಇರುವ ಬಸವ, ದೇವರ ಬಸವ ಎಂಬುದನ್ನು ಮರೆವುದುಂಟೇ? ಬೇರೆ ಬುದ್ಧಿ

ವಂತರಿಗಿಂತ ಅದು ಶ್ರೇಷ್ಠ. ದೇವರನ್ನು ಸ್ಮರಿಸುವ ಸಕಲ ಜೀವವೂ ವಿಶ್ವವಂದ್ಯ.

ಒಂದು ಸಲ ರೈಲಿನಲ್ಲಿ ಹೊರಟಿದ್ದೆ. ಗಾಡಿ ಯಮುನೆಯ ಸೇತುವೆಯ ಮೇಲೆ ಬಂತು. ಹತ್ತಿರ ಇದ್ದ ಮನುಷ್ಯನೊಬ್ಬ, ಪುಲಕಿತ ಹೃದಯದಿಂದ ನದಿಯೊಳಗೆ ಕಾಸನ್ನೆಸೆದ. ಪಕ್ಕದಲ್ಲಿ ಇನ್ನೊಬ್ಬ ವಿಮರ್ಶಕ ವೃತ್ತಿಯವ ಇದ್ದ. 'ಮೊದಲೇ ದರಿದ್ರ ದೇಶ. ಆದರೂ ಜನ ಹೀಗೆ ವ್ಯರ್ಥವಾಗಿ ಹಣ ಹಾಳುಮಾಡುತ್ತಾರೆ' ಎಂದ. ನಾನು 'ನೀವು ಆತನ ಉದ್ದೇಶ್ಯವನ್ನು ಅರಿತುಕೊಳ್ಳಲಿಲ್ಲ. ಯಾವ ಭಾವನೆಯಿಂದ ಆತ ಎರಡು ಕಾಸನ್ನು ನದಿಗೆ ಎಸೆದನೋ, ಆ ಭಾವದ ಬೆಲೆ ಎರಡು ಮೂರು ದುಡ್ಡೂ ಆಗಲಾರದೆ? ಅದೇ ದುಡ್ಡನ್ನು ಯಾವ ಸತ್ಕಾರ್ಯಕ್ಕೆ ಕೊಟ್ಟಿದ್ದರೂ ಇನ್ನೂ ಒಳ್ಳೆಯ ದಾನವಾಗುತ್ತಿತ್ತೆಂಬುದಿರಲಿ. ಆದರೆ ಈ ನದಿ ಎಂದರೆ ಹರಿಯುತ್ತಿರುವ ದೇವರ ಕರುಣೆ ಎಂಬ ಭಾವನೆ ಆ ಹಳ್ಳಿಗನ ಮನಸ್ಸಿನಲ್ಲಿ ಹುಟ್ಟಿ ಆತ ಈ ರೀತಿ ತ್ಯಾಗ ಮಾಡಿದ. ನಿಮ್ಮ ಅರ್ಥಶಾಸ್ತ್ರದಲ್ಲಿ ಆ ಭಾವನೆಗೆ ಸ್ಥಾನ ವಿದೆಯೆ? ದೇಶದಲ್ಲಿನ ಹೊಳೆಯೊಂದನ್ನು ಕಂಡು ಅವನ ಅಂತಃಕರಣ ಕರಗಿತು. ಈ ಭಾವನೆ ನಿಮಗೆ ಅರ್ಥವಾದಲ್ಲಿ ನಾನು ನಿಮ್ಮ ದೇಶಭಕ್ತಿಯನ್ನು ಮೆಚ್ಚಿಕೊಂಡೇನು' ಎಂದೆ. ದೇಶಭಕ್ತಿ ಎಂದರೇನು ರೊಟ್ಟಿಯೆ? ದೇಶದಲ್ಲಿನ ಮಹಾನದಿಯೊಂದನ್ನು ಕಂಡೊಡನೆ ಸರ್ವ ಸಂಪತ್ತನ್ನೂ ಅದರಲ್ಲಿ ಮುಳುಗಿಸೋಣ, ಅದರ ಚರಣದಲ್ಲಿ ಅರ್ಪಿಸೋಣ ಎಂದು ಮನಸ್ಸಿನಲ್ಲಿ ಬರುವುದು ಎಂಥ ದೇಶಭಕ್ತಿ! ಆ ಎಲ್ಲ ಹಣ, ಆ ಬಿಳಿ ಹಳದಿ ಕಂದು ಕಲ್ಲು, ಹುಳಗಳ ಹೊಲಸಿನಿಂದಾದ ಮುತ್ತು, ಇದ್ದಲಿನ ರತ್ನ, ಇವುಗಳ ಯೋಗ್ಯತೆಯೂ ಅಷ್ಟೇ. ನೀರಿನಲ್ಲಿ ಮುಳುಗುವಷ್ಟೇ. ಪರಮೇಶ್ವರನ ಪಾದಗಳೆದುರಿಗೆ ಈ ಎಲ್ಲ ಧೂಳಿ ತುಚ್ಛ. ಹೊಳೆಗೂ ಪರಮೇಶ್ವರನ ಪಾದಕ್ಕೂ ಯಾವ ಸಂಬಂಧ ಎಂದೀರಿ. ನಿಮ್ಮ ಸೃಷ್ಟಿಯಲ್ಲಿ ದೇವರ ಸಂಬಂಧ ಎಲ್ಲಾದರೂ ಇದೆಯೇ? ಹೊಳೆ ಎಂದರೆ ಆಕ್ಸಿಜನ್ ಮತ್ತು ಹೈಡ್ರೋಜನ್. ಸೂರ್ಯ ಎಂದರೆ ಗ್ಯಾಸ್ ಲೈಟಿನ ಭಾರಿ ಪ್ರಕಾಶ. ದೊಡ್ಡದೊಂದು ಬೆಂಕಿಪೊಟ್ಟಣ ಸೂರ್ಯ. ಅವನಿಗೇಕೆ ನಮಸ್ಕಾರ? ಹೌದು. ನಿಮ್ಮ ರೊಟ್ಟಿಗೆ ಮಾತ್ರವೇ ನಮಸ್ಕಾರ! ಆ ರೊಟ್ಟಿಯಲ್ಲಾದರೂ

ಇರುವುದೇನು? ಅದೂ ಒಂದು ಬಿಳಿಯ ಮಣ್ಣೇ. ಅದನ್ನು ಕಂಡು ಆನಂದವೇಕೆ? ಸೂರ್ಯನುದಯಿಸಿದ. ಸುಂದರ ನದಿ ಕಾಣಿಸಿತು. ಆಗ ಪರಮಾತ್ಮನ ಅನುಭವವಾಗದಿದ್ದರೆ ಇನ್ನಾವಾಗ ಆಗಬೇಕು? ಆಂಗ್ಲಕವಿ ವರ್ಡ್ಸ್‌ವರ್ತ್ ಅಳುತ್ತಾ ಹೇಳುತ್ತಾನೆ: "ಹಿಂದೆ ಕಾಮನಬಿಲ್ಲನ್ನು ಕಂಡಾಗ ನಾ ನೆಗೆಯುತ್ತಿದ್ದೆ, ಕುಣಿಯುತ್ತಿದ್ದೆ. ಎದೆ ತುಂಬಿಬರುತ್ತಿತ್ತು. ಇಂದೇಕೆ ಹಾಗಾಗುತ್ತಿಲ್ಲ? ಹಿಂದಣ ಬಾಳ ಸವಿಯನ್ನು ಕಳೆದುಕೊಂಡು ಕಲ್ಲಾದೆನೇನೋ ನಾನು!"

ಸಾರಾಂಶವಿಷ್ಟೆ: ಸಕಾಮ ಭಕ್ತಿಗೂ ಅಜ್ಞಾನಿಯ ಭಾವನೆಗೂ ತುಂಬಾ ಮಹತ್ವವುಂಟು. ಅವುಗಳ ಸಾಮರ್ಥ್ಯವೂ ದೊಡ್ಡದು. ಜೀವ ಯಾವುದೇ ಇರಲಿ, ಎಂಥದೇ ಇರಲಿ, ಒಮ್ಮೆ ಪರಮಾತ್ಮನ ದರಬಾರಿನಲ್ಲಿ ಬಂದುಬಿಟ್ಟರೆ ಅದು ಮಾನ್ಯ. ಬೆಂಕಿಗೆ ಎಂಥ ಕಟ್ಟಿಗೆ ಹಾಕಿದರೂ ಅದು ಉರಿಯುತ್ತದೆ. ಪರಮಾತ್ಮನ ಭಕ್ತಿ ಒಂದು ಅಪೂರ್ವ ಸಾಧನೆ. ಸಕಾಮ ಭಕ್ತಿಯನ್ನು ಕಂಡು ಪರಮೇಶ್ವರ ಅಭಿಮಾನಪಡುತ್ತಾನೆ. ಮುಂದೆ ಆ ಭಕ್ತಿ ನಿಷ್ಕಾಮವಾಗಿ ಪೂರ್ಣತೆಯ ಕಡೆ ನಡೆದೀತು.

### ೩೫. ನಿಷ್ಕಾಮ ಭಕ್ತಿಯ ಪ್ರಕಾರಗಳು—ಪೂರ್ಣತ್ವ

ಸಕಾಮ ಭಕ್ತ ಒಂದು ರೀತಿಯವನು. ನಿಷ್ಕಾಮ ಭಕ್ತರನ್ನು ಇನ್ನು ನೋಡೋಣ, ಅದರಲ್ಲಿ ಎರಡು ಬಗೆ; ಏಕಾಂಗಿ, ಪೂರ್ಣ. ಏಕಾಂಗಿ ಭಕ್ತರು ಮೂರು ಬಗೆ. ಮೊದಲು ಆರ್ತ ಭಕ್ತರದು. ಆರ್ತ ಎಂದರೆ ದೇವರಿಗಾಗಿ ಅಳುವವ, ಹಂಬಲಿಸುವವ; ನಾಮದೇವನಂತೆ. ದೇವರ ಪ್ರೀತಿ ಎಂದಿಗೆ ಸಿಕ್ಕೀತು, ಆತ ನನ್ನನ್ನೆಂದು ಅಪ್ಪಿಕೊಂಡಾನು, ಎಂದು ಅವನ ಕಾಲಿಗೆ ನಾ ಬಿದ್ದೇನು, ಹೀಗೆ ತಳಮಳಿಸುವವ. ಈ ಭಕ್ತ ಪ್ರತಿಯೊಂದು ಕಾರ್ಯವನ್ನೂ ಹಾರ್ದಿಕತೆಯುಂಟೋ ಇಲ್ಲವೋ, ಪ್ರೀತಿಯುಂಟೋ ಇಲ್ಲವೋ ಎಂಬ ಭಾವನೆಯಿಂದ ನೋಡುತ್ತಾನೆ. ಜಿಜ್ಞಾಸುಗಳದು ಎರಡನೆಯ ಬಗೆ. ಈಗ ನಮ್ಮ ದೇಶದಲ್ಲಿ ಇವರು ವಿರಲ. ಗೌರೀಶಂಕರವನ್ನು ಯಾರೋ ಮತ್ತೆ ಮತ್ತೆ ಹತ್ತಿಯಾರು, ಸತ್ತು ಹೋದಾರು. ಇನ್ನು ಯಾರೋ ಉತ್ತರ ಧ್ರುವವನ್ನು ಶೋಧಿಸುತ್ತಾ ಹೊರಟು, ತಮ್ಮ ಶೋಧದ ವಿಚಾರವನ್ನು ಕಾಗದದಲ್ಲಿ ಗುರುತಿಸಿ, ಸೀಸೆಯಲ್ಲಿ ಹಾಕಿ,

ಅದನ್ನು ನೀರಿನಲ್ಲಿ ಬಿಟ್ಟು ಸತ್ತು ಹೋದಾರು. ಇನ್ನು ಕೆಲವರು ಜ್ವಾಲಾ ಮುಖಿಯೊಳಗೂ ಪ್ರವೇಶಿಸಿಯಾರು. ಹಿಂದೂಸ್ಥಾನದ ಜನರಿಗೆ ಸಾವು ಎಂದರೆ ಅಂಜಿಕೆ. ಮದುವೆಯಾಗುವುದು, ಮಕ್ಕಳಾಗುವುದು – ಇದನ್ನು ಬಿಟ್ಟರೆ ಅವರಿಗೆ ಬೇರೆ ಪುರುಷಾರ್ಥವೇ ಉಳಿದಿಲ್ಲ. ಜಿಜ್ಞಾಸು ಭಕ್ತನಿಗೆ ಅದಮ್ಯವಾದ ಜಿಜ್ಞಾಸೆ. ಪ್ರತಿಯೊಂದು ವಸ್ತುವಿನ ಗುಣಧರ್ಮವನ್ನೂ ಆತ ಶೋಧಿಸುತ್ತಾನೆ. ನದಿಯ ಮುಖದಿಂದ ಮನುಷ್ಯ ಸಮುದ್ರಕ್ಕೆ ಸೇರುತ್ತಾನೆ. ಹಾಗೇ ಈ ಜಿಜ್ಞಾಸುವೂ ಕೊನೆಗೆ ಪರಮಾತ್ಮನನ್ನು ಸೇರುತ್ತಾನೆ. ಇನ್ನು ಅರ್ಥಾರ್ಥಿಯದು ಮೂರನೆಯ ಬಗೆ. ಪ್ರತಿಯೊಂದು ವಿಷಯದಲ್ಲಿ ಅರ್ಥ ಕಾಣುವವ ಅರ್ಥಾರ್ಥಿ. ಅರ್ಥವೆಂದರೆ ಹಣವಲ್ಲ; ಹಿತ - ಕಲ್ಯಾಣ. ಯಾವ ವಿಷಯವನ್ನು ಪರೀಕ್ಷೆ ಮಾಡಿದರೂ ಅದರಿಂದ ಸಮಾಜಕ್ಕೆ ಏನು ಕಲ್ಯಾಣವಾದೀತು ಎಂಬ ಒರೆಗೆ ಹಚ್ಚಿಯಾನು. ತನ್ನ ಲೇಖನ ಭಾಷಣ, ಸರ್ವ ಕರ್ಮವೂ ಜಗತ್ತಿನ ಮಂಗಲಕ್ಕಾಗಿ ಇದೆಯೊ ಇಲ್ಲವೋ ಎಂದು ನೋಡಿಯಾನು. ನಿರುಪಯೋಗಿ, ಅಹಿತಕಾರಿ ಕ್ರಿಯೆ ಅವನಿಗೆ ಒಪ್ಪಿಗೆಯಿಲ್ಲ. ಜಗದ ಹಿತಚಿಂತನೆ ಮಾಡುವ ಈ ಮಹಾತ್ಮ ನೆಂಥವ! ಜಗತ್ತಿನ ಕಲ್ಯಾಣವೇ ಅವನ ಆನಂದ. ಎಲ್ಲ ಕ್ರಿಯೆಗಳನ್ನು ಪ್ರೇಮದೃಷ್ಟಿಯಿಂದ ನೋಡುವವನು ಆರ್ತ. ಜ್ಞಾನದೃಷ್ಟಿಯಿಂದ ನೋಡು ವವನೇ ಜಿಜ್ಞಾಸು. ಸರ್ವ ಕಲ್ಯಾಣದೃಷ್ಟಿಯುಳ್ಳವನು ಅರ್ಥಾರ್ಥಿ.

ಈ ಮೂವರು ಭಕ್ತರೂ ನಿಷ್ಕಾಮರೇ. ಆದರೂ ಏಕಾಂಗಿಗಳು. ಕರ್ಮದ ದ್ವಾರಾ ಒಬ್ಬ, ಹೃದಯದ್ವಾರಾ ಇನ್ನೊಬ್ಬ, ಬುದ್ಧಿದ್ವಾರಾ ಮತ್ತೊಬ್ಬ, ದೇವರ ಕಡೆ ಧಾವಿಸುತ್ತಾರೆ. ಇನ್ನುಳಿದಾತ ಪೂರ್ಣ ಭಕ್ತ, ಜ್ಞಾನಿ - ಭಕ್ತ ಎನ್ನುವುದು ಇವನನ್ನೇ. ಕಣ್ಣಿಗೆ ಕಾಣುವುದೆಲ್ಲವೂ ಇವನಿಗೆ ದೈವಸ್ವರೂಪ. ಕುರೂಪಿ - ಸುರೂಪಿ, ಶ್ರೀಮಂತ - ದರಿದ್ರ, ಸ್ತ್ರೀ - ಪುರುಷ ಪಶು - ಪಕ್ಷಿ, ಎಲ್ಲೆಲ್ಲೂ ಪರಮಾತ್ಮನ ಪಾವನ ದರ್ಶನ.

ನರನಾರಿ ಬಾಲರೆಲ್ಲ ನಾರಾಯಣ।*<br>
ಅರಿವಂತೆ ನೀನೆಸಗೈ ಮನವನೆನ್ನ ॥

---

* ನರನಾರೀ ಬಾಳೇಂ ಅವಘಾ ನಾರಾಯಣ।<br>
ಐಸೇ ಮಾಝೇಂ ಮನ ಕರೀ ದೇವಾ ॥

ನಾಗಪೂಜೆ, ಆನೆ ಸೊಂಡಿಲಿನ ದೇವರ ಪೂಜೆ, ಗಿಡದ ಪೂಜೆಯೇ ಮೊದಲಾದ ಹುಚ್ಚುತನದ ಮಾದರಿಗಳು ಹಿಂದೂ ಧರ್ಮದಲ್ಲಿವೆಯಲ್ಲ. ಅವೆಲ್ಲಕ್ಕಿಂತಲೂ ಜ್ಞಾನಿ–ಭಕ್ತನ ಸ್ಥಿತಿ ಹುಚ್ಚುತನದ್ದು. ಅವನಿಗೆ ಏನೇ ಭೆಟ್ಟಿಯಾಗಲಿ, ಹುಳು ಹುಪ್ಪಡಿಗಳಿಂದ ಚಂದ್ರ ಸೂರ್ಯರ ವರೆಗೆ, ಎಲ್ಲೆಲ್ಲೂ ಪರಮಾತ್ಮ ಒಬ್ಬನೇ ಕಾಣಿಸುತ್ತಾನೆ. ಅವನ ಹೃದಯ ಉಕ್ಕಿಬರುತ್ತದೆ.

ಕಡೆ ಕೊನೆಯೇ ಸುಖಕಿಲ್ಲ, ಕಡಲುಕ್ಕಿ ತುಳುಕಿತಲ್ಲ । *

ಇಂಥ ಈ ದಿವ್ಯ ಭವ್ಯ ದರ್ಶನವನ್ನು ನೀವು ಭ್ರಾಂತಿ ಎಂದು ಕರೆದರೂ ಚಿಂತೆಯಿಲ್ಲ. ಆ ಭ್ರಾಂತಿಯೇ ಸೌಖ್ಯದ ರಾಶಿ, ಆನಂದದ ಸಾರಸಂಗ್ರಹ. ಗಂಭೀರ ಸಾಗರದಲ್ಲಿ ಆತನಿಗೆ ದೇವರ ವಿಲಾಸ ಕಾಣುತ್ತದೆ. ಹಸುವಿನಲ್ಲಿ ದೇವರ ವಾತ್ಸಲ್ಯ, ಪೃಥ್ವಿಯಲ್ಲಿ ಆತನ ಕ್ಷಮತೆ, ನಿರಭ್ರ ಆಕಾಶದಲ್ಲಿ ಆತನ ನಿರ್ಮಲತೆ, ರವಿಚಂದ್ರ ತಾರೆಗಳಲ್ಲಿ ಆತನ ತೇಜಸ್ಸು, ಭವ್ಯತೆ– ಕಾಣುತ್ತದೆ. ಹೂವಿನಲ್ಲಿ ಆತನ ಕೋಮಲತೆ – ಸುಗಂಧ ಕಾಣುತ್ತದೆ. ದುರ್ಜನರಲ್ಲಿ ತನ್ನ ಪರೀಕ್ಷೆ ಮಾಡುವ ಪರಮೇಶ್ವರ ಕಾಣುತ್ತಾನೆ. ಈ ರೀತಿಯಲ್ಲಿ ಎಲ್ಲೆಲ್ಲೂ ಒಬ್ಬನೇ ದೇವರು ನಟಿಸುತ್ತಿರುವುದನ್ನು ನೋಡುವ ಅಭ್ಯಾಸವನ್ನು ಜ್ಞಾನಿ–ಭಕ್ತ ಮುಂಬರಿಸುತ್ತಾನೆ ಕೊನೆಗೆ ಒಂದು ದಿನ ಈಶ್ವರನಲ್ಲಿ ಲೀನನಾಗುತ್ತಾನೆ.

ಭಾನುವಾರ,
೩–೪–೧೯೩೨.

---

* ಮಗ್ ತಯಾ ಸುಖಾ ಅಂತನಾಹೀ ಪಾರ್ ।
ಆನಂದೇ ಸಾಗರ ಹಿಲಾವಶೀ ॥

## ೩೬. ಶುಭ ಸಂಸ್ಕಾರಗಳ ಸಂಚಯ

ಮನುಷ್ಯನ ಬಾಳು ಅನೇಕ ಸಂಸ್ಕಾರಗಳಿಂದ ಕೂಡಿದುದು, ನಮ್ಮಿಂದ ನಡೆಯುವ ಕ್ರಿಯೆ ಅಗಣಿತ. ಅವುಗಳ ಲೆಕ್ಕಕ್ಕೆ ತೊಡಗಿದರೆ ಕೊನೆಯೆ ಇಲ್ಲವಾದೀತು. ಇಪ್ಪತ್ತನಾಲ್ಕು ಗಂಟೆಗಳಲ್ಲಿ ನಡೆವ ಕ್ರಿಯೆಗಳನ್ನೆ ಸ್ಥೂಲವಾಗಿ ನೋಡಿದರೆ ಕಾಣುತ್ತದೆ. ನೂರಾರು–ಉಣ್ಣುವುದು, ತಿನ್ನುವುದು, ಕುಡಿಯುವುದು, ಕೂತಿರುವುದು, ನಿದ್ದೆ ಮಾಡುವುದು, ನಡೆಯುವುದು. ತಿರುಗುವುದು, ಕೆಲಸ ಮಾಡುವುದು, ಬರೆಯುವುದು. ಮಾತನಾಡುವುದು, ಓದುವುದು. ಅಲ್ಲದೆ ಬಗೆ ಬಗೆಯ ಕನಸು, ರಾಗದ್ವೇಷ, ಮಾನಾಪಮಾನ, ಸುಖ ದುಃಖ, ಹೀಗೆ ಎಷ್ಟೋ ಪ್ರಕಾರ ಕಂಡುಬರುತ್ತವೆ. ಇವುಗಳಿಂದ ನಮ್ಮ ಮನಸ್ಸಿನ ಮೇಲೆ ಸಂಸ್ಕಾರವಾಗುತ್ತದೆ. ಆದುದರಿಂದ ಬಾಳು ಎಂದರೇನೆಂದು ಯಾರಾದರೂ ಕೇಳಿದಲ್ಲಿ–ಸಂಸ್ಕಾರ ಸಂಚಯವೆ ಬಾಳು ಎಂದು ನಾನು ವ್ಯಾಖ್ಯೆ ಕೊಟ್ಟೇನು.

ಒಳ್ಳೆಯ ಸಂಸ್ಕಾರ, ಹಾಗೇ ಕೆಟ್ಟ ಸಂಸ್ಕಾರ; ಮನುಷ್ಯನ ಬಾಳಿನ ಮೇಲೆ ಇವೆರಡರಿಂದಲೂ ಪರಿಣಾಮವಾಗುತ್ತದೆ. ಬಾಲ್ಯದ ಕ್ರಿಯೆಗಳಂತೂ ನೆನಪಿನಲ್ಲಿ ಉಳಿಯುವುದೇ ಇಲ್ಲ. ಹಲಗೆಯ ಮೇಲೆ ಬರೆದುದನ್ನಳಿಸಿದ ಹಾಗೆ ಅವು ಅಳಿಸಿಹೋಗಿರುತ್ತವೆ. ಪೂರ್ವಜನ್ಮದ ಸಂಸ್ಕಾರಗಳಂತೂ ಪೂರ್ಣವಾಗಿ ಅಳಿಸಿದಂತಿರುತ್ತವೆ. ಪೂರ್ವಜನ್ಮ ಇತ್ತೋ ಇಲ್ಲವೋ ಎಂದು ಸಂಶಯ ಬರುವಷ್ಟುಮಟ್ಟಿಗೆ. ಈ ಜನ್ಮದಲ್ಲಿನ ಬಾಲ್ಯಕಾಲದ ಸ್ಮರಣೆಯೆ ಇಲ್ಲ, ಪೂರ್ವಜನ್ಮದ ಮಾತಾದರೂ ಏಕೆ? ಅದರ ವಿಚಾರ ಇರಲಿ. ಈ ಜನ್ಮದ ಬಗೆಗೇ ಯೋಚಿಸೋಣ. ನಮ್ಮ ಗಮನದಲ್ಲಿರುವಷ್ಟೇ ಕ್ರಿಯೆ ನಡೆದವೆಂದಲ್ಲ. ನಡೆದ ಕ್ರಿಯೆ ನೂರಾರು. ಉಂಟಾದ ಜ್ಞಾನ ಅಪಾರ. ಕೊನೆಗೆ ಈ ಕ್ರಿಯೆ, ಜ್ಞಾನ ಎಲ್ಲಾ ನಾಶವಾಗಿ ಕೆಲವು ಸಂಸ್ಕಾರ ಮಾತ್ರ ಉಳಿಯುತ್ತವೆ. ಹಗಲು ನಡೆದ ಕ್ರಿಯೆಗಳನ್ನೆಲ್ಲ ರಾತ್ರಿ ಮಲಗುವಾಗ ಜ್ಞಾಪಿಸಿಕೊಳ್ಳತೊಡಗಿದರೆ ಎಲ್ಲವೂ ನೆನಪಿಗೆ ಬರುವುದಿಲ್ಲ. ನೆನಪಾಗುವಂಥವು ಯಾವುವು? ಹೆಚ್ಚು ಸ್ಪಷ್ಟವಾಗಿರುವಂಥವು ತಾನೆ.

ತುಂಬಾ ಜಗಳ ನಡೆದಿದ್ದರೆ ಅದೇ ನೆನಪಾಗುತ್ತದೆ. ಅದೇ ಆ ದಿನದ ಮುಖ್ಯ ಕೃತಿ. ಸ್ಪಷ್ಟ ವಿಷಯಗಳ ಸಂಸ್ಕಾರ ಮನಸ್ಸಿನ ಮೇಲೂ ಸ್ಫುಟವಾಗಿಯೆ ಮೂಡುತ್ತದೆ. ಮುಖ್ಯ ಕ್ರಿಯೆ ನೆನಪಾಗುತ್ತದೆ. ಇನ್ನುಳಿದವು ಬಾಡುತ್ತವೆ. ನಾವು ದಿನಚರಿ ಬರೆದರೆ ಉಲ್ಲೇಖಿಸುವುದು ಎರಡು ಮೂರು ಮಹತ್ವದ ಘಟನೆ ಮಾತ್ರ. ನಿತ್ಯದ ಇಂಥ ಸಂಸ್ಕಾರಗಳನ್ನು ಎತ್ತಿಕೊಂಡು ವಾರದ ಸಂಚಯಕ್ಕೆ ತೊಡಗಿದರೆ, ಇವುಗಳಲ್ಲಿ ಹಲವು ಅಳಿಸಿಹೋಗಿ ಎಲ್ಲೋ ಕೆಲವು ಉಳಿದುಕೊಳ್ಳಬಹುದು. ಅನಂತರ ಒಂದು ತಿಂಗಳಿನಲ್ಲಿ ನಡೆದುದೇನೆಂದು ಯೋಚಿಸುತ್ತ ಹೊರಟರೆ ಕೇವಲ ಕೆಲವು ಮಹತ್ವದ ಕ್ರಿಯೆಗಳು ಮಾತ್ರ ನೆನಪಿಗೆ ಬಂದಾವು. ಹೀಗೆ ಆರು ತಿಂಗಳು, ಒಂದು ವರ್ಷ, ಐದು ವರ್ಷಗಳಿಗೊಂದು ಬಾರಿ ಯೋಚಿಸಿದರೆ ಕೇವಲ ಕೆಲವು ಘಟನೆಗಳು ಮಾತ್ರ ಮನಸ್ಸಿನಮೇಲೆ ಮೂಡಿರುವುದು ಗೊತ್ತಾದೀತು. ಇಂಥ ಘಟನೆಗಳಿಂದಲೇ ಸಂಸ್ಕಾರವಾಗುವುದು. ಅಸಂಖ್ಯ ಕ್ರಿಯೆ, ಅನಂತ ಜ್ಞಾನ. ಮನಸ್ಸಿನಲ್ಲಿ ಉಳಿದುದು ಮಾತ್ರ ತೀರ ಕೊಂಚ. ಆ ಕರ್ಮ, ಆ ಜ್ಞಾನ ಬಂದವು. ತಮ್ಮ ಕೆಲಸ ತೀರಿಸಿ ಸತ್ತುಹೋದವು. ಆ ಎಲ್ಲ ಕರ್ಮಗಳ ಪರಿಣಾಮವಾಗಿ ಎಂಟು ಹತ್ತು ದೃಢ ಸಂಸ್ಕಾರ ಉಳಿಯುತ್ತವೆ. ಅವೇ ನಮಗೆ ಬಂಡವಾಳ. ಬಾಳಿನ ವ್ಯಾಪಾರದಲ್ಲಿ ದೊರೆವ ಸಂಪತ್ತೆಂದರೆ ಸಂಸ್ಕಾರ, ನಿತ್ಯದ, ತಿಂಗಳಿನ, ವರ್ಷದ ಜಮಾ ಖರ್ಚು ತೆಗೆದು ಇಷ್ಟು ಲಾಭ, ಇಷ್ಟು ಹಾನಿ ಎಂದು ವ್ಯಾಪಾರಿ ಲೆಕ್ಕ ಹಾಕುತ್ತಾನೆ. ಬಾಳಿನಲ್ಲೂ ಹಾಗೇ. ಅನೇಕ ಸಂಸ್ಕಾರಗಳನ್ನು ಕೂಡಿಸಿ ಕಳೆದ ಬಳಿಕ ಅತ್ಯಂತ ಸ್ಪಷ್ಟ ಹಾಗೂ ವ್ಯವಸ್ಥಿತವಾದ ಹಲವು ವಿಷಯ ಉಳಿಯುತ್ತವೆ. ಬಾಳಿನ ಕೊನೆಗಾಲದಲ್ಲಿ ಮನುಷ್ಯ ಈ ಉಳಿಕೆಯನ್ನು ನೆನೆಸುತ್ತಾನೆ. ಜನ್ಮದಲ್ಲೆಲ್ಲ ಮಾಡಿದುದೇನೆಂದು ಯೋಚಿಸಿದಾಗ ಅವನಿಗೆ ಎರಡು ಮೂರು ವಿಷಯಗಳಲ್ಲಿ ತಾನು ಮಾಡಿದುದು ಹೊಳೆಯುತ್ತದೆ. ಬೇರೆ ಕರ್ಮ, ಜ್ಞಾನಗಳೆಲ್ಲ ವ್ಯರ್ಥವಾದವೆಂದು ಇದರರ್ಥವಲ್ಲ. ಅವು ತಮ್ಮ ಕೆಲಸ ಮಾಡಿ ಹೋಗಿರುತ್ತವೆ. ಸಾವಿರಾರು ವ್ಯವಹಾರ ಮಾಡಿದರೂ ಕೊನೆಗೆ ವ್ಯಾಪಾರಿಯಲ್ಲಿ ಉಳಿಯುವುದು ಐದು ಸಾವಿರದ ಸಾಲ – ಇಲ್ಲವೆ ಹತ್ತು ಸಾವಿರದ ಲಾಭ. ಸಾಲವಾದರೆ ಎದೆಗುದಿ; ಲಾಭವಾದರೆ ಸಂತೋಷ.

ನಮ್ಮದೂ ಹೀಗೇ. ಮರಣಕಾಲದಲ್ಲಿ ತಿಂಡಿಯ ಮೇಲೆ ಮನಸ್ಸಾದರೆ ಬದುಕಿದ್ದಾಗೆಲ್ಲ ಅನ್ನದ ರುಚಿ ನೋಡಿದುದು ಸಿದ್ಧವಾಗುತ್ತದೆ. ಅನ್ನದ ವಾಸನೆ ಆ ಬಾಳಿನ ಸಂಪಾದನೆ. ತಾಯಿಗೆ ಸಾಯುವಾಗ ಮಗನ ನೆನಪಾದರೆ ಆ ಪುತ್ರವಿಷಯಕ ಸಂಸ್ಕಾರವೆ ಬಲವಾದುದಾಯಿತು. ಇನ್ನುಳಿದ ಅಸಂಖ್ಯ ಕರ್ಮ ಹಾರಿಹೋದಂತೆ. ಅಂಕಗಣಿತದಲ್ಲಿ ಅಪೂರ್ಣಾಂಕದ ಉದಾಹರಣೆ ಇದೆ. ಆ ಅಂಕಗಳು ಎಷ್ಟು ದೊಡ್ಡವು. ಆದರೆ ಸಂಕ್ಷೇಪಗಳನ್ನು ಕೊಡುವಾಗ ಕೊನೆಗೆ, ಒಂದು ಇಲ್ಲವೆ ಶೂನ್ಯ ಉತ್ತರ ಬರುತ್ತದೆ. ಹಾಗೇ ಬಾಳಿನ ಅನೇಕ ಸಂಸ್ಕಾರ ಅಳಿದುಹೋಗಿ ಕೊನೆಗೆ ಬಲಶಾಲಿಯಾದ ಸಂಸ್ಕಾರವೊಂದು ಸಾರರೂಪವಾಗಿ ಉಳಿಯುತ್ತದೆ. ಬಾಳಿನ ಉದಾಹರಣೆಗೆ ಉತ್ತರ ಅದು. ಅಂತ್ಯಕಾಲದ ಸ್ಮರಣೆ ಅಖಂಡ ಜೀವನದ ಫಲ.

ಬಾಳಿನ ಈ ಕೊನೆಯ ಸಾರ ಮಧುರವಾಗಬೇಕು. ಕೊನೆಯ ಈ ಗಳಿಗೆ ಸವಿಯಾಗಬೇಕು ಎಂದು ಬಾಳಿನ ಅವಧಿಯಲ್ಲೆಲ್ಲ ಪ್ರಯತ್ನಿಸಬೇಕು. ಕೊನೆ ಚೆನ್ನಾದರೆ ಎಲ್ಲವೂ ಚೆನ್ನು. ಆ ಕೊನೆಯ ಉತ್ತರದ ಕಡೆ ಗಮನವಿಟ್ಟು ಬಾಳಿನ ಗಣಿತ ಮಾಡಬೇಕು. ಬಾಳಿನ ಯೋಜನೆಯ ಧ್ಯೇಯ ಕಣ್ಣೆದುರಿಗೆ ಇರಬೇಕು. ಉದಾಹರಣೆ ಕೇಳಿದಾಗ ವಿಶಿಷ್ಟ ಪ್ರಶ್ನೆಗಳನ್ನೆಲ್ಲ ಯೋಚಿಸಿ ಉತ್ತರ ಬರೆಯಬೇಕಾಗುತ್ತದೆ. ಮರಣಕಾಲದಲ್ಲಿ ಇಂಥ ಸಂಸ್ಕಾರ ಬೇಕು ಎಂದರೆ ಅದನ್ನನುಸರಿಸಿ ಬಾಳಿನ ಓಘವನ್ನು ಹೊರಳಿಸಬೇಕು. ಆ ಕಡೆ ಹಗಲಿರುಳೂ ಗಮನವಿರಬೇಕು.

## ೩೭. ಸಾವಿನ ಸ್ಮರಣೆಯಿರಲಿ

ಮರಣಕಾಲದಲ್ಲಿ ಸ್ಪಷ್ಟವಾಗಿ ಉಳಿಯುವ ವಿಚಾರವೆ ಮುಂದಿನ ಜನ್ಮದಲ್ಲಿ ಬಲವತ್ತರವಾಗುವುದೆಂಬ ಸಿದ್ಧಾಂತವನ್ನು ಈ ಎಂಟನೆ ಅಧ್ಯಾಯದಲ್ಲಿ ಮಂಡಿಸಿದೆ. ಆ ಸಂಸ್ಕಾರದ ಬುತ್ತಿ ಕಟ್ಟಿಕೊಂಡು ಜೀವ ಮುಂದಿನ ಯಾತ್ರೆಗೆ ಹೊರಡುತ್ತದೆ. ಇಂದಿನ ಸಂಪಾದನೆಯಿಂದ ನಾವು ನಾಳೆಯ ದಿನವನ್ನಾರಂಭಿಸುತ್ತೇವೆ. ಹಾಗೇ ಈ ಬಾಳಿನ ಬುತ್ತಿ ಕಟ್ಟಿಕೊಂಡು ಮರಣದ ಮಹಾನಿದ್ರೆಯ ನಂತರ ಮತ್ತೆ ನಮ್ಮ ಯಾತ್ರೆ ಮೊದಲಾಗುತ್ತದೆ. ಈ ಜನ್ಮದ ಕೊನೆ, ಮುಂದಿನ ಜನ್ಮದ ಆದಿ. ಎಂತಲೇ ಮರಣದ ನೆನಪಿರಬೇಕು ಯಾವಾಗಲೂ.

ಸಾವಿನ ಭೀಕರತೆಗೆ ಎದುರಾಗಲು ಸಿದ್ಧತೆ ಮಾಡಿಕೊಳ್ಳಲು ಸಹ ಮರಣದ ಸ್ಮರಣೆ ಅತ್ಯಗತ್ಯ. ಏಕನಾಥರದೊಂದು ಕತೆ ಹೀಗಿದೆ. ಅವರನ್ನು ಒಬ್ಬ ಗೃಹಸ್ಥ–ಮಹಾರಾಜ, ನಿಮ್ಮ ಬಾಳು ಎಷ್ಟು ಸಾದಾ, ಎಷ್ಟು ನಿಷ್ಪಾಪ! ನಮ್ಮದೇಕೆ ಹಾಗಿಲ್ಲ? ನೀವೆಂದೂ ಸಿಟ್ಟುಮಾಡಿಕೊಳ್ಳುವುದಿಲ್ಲ. ಯಾರೊಂದಿಗೂ ಜಗಳವಿಲ್ಲ, ತಂಟೆಯಿಲ್ಲ. ಎಷ್ಟು ಶಾಂತ, ಪವಿತ್ರ, ಪ್ರೇಮಲ ವ್ಯಕ್ತಿ ನೀವು! ಎಂದ. ಅದಕ್ಕೆ ನಾಥರು 'ನನ್ನ ಮಾತು ಹಾಗಿರಲಿ. ನಿನ್ನ ಬಗ್ಗೆ ನನಗೊಂದು ವಿಚಾರ ತಿಳಿದಿದೆ. ಇನ್ನು ಏಳು ದಿನಗಳ ಅನಂತರ ನೀನು ಸಾಯುತ್ತೀ' ಎಂದರು. ನಾಥರು ಹೇಳಿದ ಮಾತನ್ನು ಸುಳ್ಳು ಎನ್ನಲಾಗುತ್ತದೆಯೇ? ಏಳು ದಿನಗಳ ಅನಂತರ ಸಾವು. ಇನ್ನುಳಿದುದು ಬರೀ ೧೬೮ ಗಂಟೆ. ಎಲಲಾ! ಆ ಮನುಷ್ಯ ಗಡಿಬಿಡಿಗೊಂಡು ಮನೆಗೆ ಹೋದ. ಏನೂ ಹೊಳೆಯಲೊಲ್ಲದು. ಹೇಗೋ ಮಾತು. ಹೇಗೋ ವರ್ತನೆ. ಸರಿ. ಕಾಯಿಲೆಯಾಯಿತು. ಹಾಸಿಗೆ ಹಿಡಿದುದೂ ಆಯಿತು. ಆರು ದಿನ ಕಳೆದುವು. ಏಳನೆಯ ದಿನ ನಾಥರು ಅವನ ಬಳಿಗೆ ಬಂದರು. ಆತ ನಮಸ್ಕರಿಸಿದ. 'ಏನು ಸಮಾಚಾರ?' ಎಂದರು ನಾಥರು. ಆತ 'ಹೊರಟೆ ನಾನು' ಎಂದ. 'ಈ ಆರು ದಿನಗಳಲ್ಲಿ ಎಷ್ಟು ಪಾಪಕೃತ್ಯ ನಡೆದವು? ಪಾಪದ ವಿಚಾರ ಎಷ್ಟು ಹೊಳೆದವು?' ಎಂದು ನಾಥರು ಕೇಳಿದರು. ಆ ಆಸನ್ನ ಮರಣದ ಮನುಷ್ಯ 'ನಾಥರೆ, ಪಾಪದ ವಿಚಾರ ಮಾಡಲು ಬಿಡುವೇ ಸಿಕ್ಕಲಿಲ್ಲ. ಕಣ್ಣೆದುರು ಯಾವಾಗಲೂ ಸಾವೇ ಕಟ್ಟಿದಂತಿತ್ತು' ಎಂದ. ಆಗ ನಾಥರು 'ನಮ್ಮ ಬಾಳು ಏಕೆ ನಿಷ್ಪಾಪ ಎಂಬುದಕ್ಕೆ ಈಗ ನಿನಗೆ ಉತ್ತರ ದೊರೆಯಿತು. ನೋಡು. ಸಾವಿನ ಹುಲಿರಾಯ ಸರ್ವದಾ ಇದಿರಿಗೆ ನಿಂತಾಗ ಪಾಪದ ವಿಚಾರವಾದರೂ ಬಂದೀತೆ? ಪಾಪ ಮಾಡಲೂ ಸಹ ನಿಶ್ಚಿಂತತೆ ಬೇಕು. ಪಾಪದಿಂದ ಪಾರಾಗಲು ಸಾವಿನ ನೆನಪನ್ನು ಸದಾ ಇಟ್ಟುಕೊಂಡಿರುವುದೇ ಶ್ರೇಷ್ಠ ಉಪಾಯ.' ಸಾವು ಇದಿರಿಗೇ ಇದ್ದಾಗ ಯಾವ ಧೈರ್ಯದಿಂದ ಮನುಷ್ಯ ಪಾಪ ಮಾಡಿಯಾನು?

ಆದರೆ ಮನುಷ್ಯ ಸಾವಿನ ಸ್ಮರಣೆಯನ್ನು ದೂರ ತಳ್ಳುತ್ತಿರುತ್ತಾನೆ. ಪ್ಯಾಸ್ಕಲ್ ಒಬ್ಬ ಫ್ರೆಂಚ್ ತತ್ವಜ್ಞಾನಿ. ಆತ 'ಪಾಂಸೆ' ಎಂಬ ಪುಸ್ತಕ

ಬರೆದಿದ್ದಾನೆ. 'ಪಾಂಸೆ' ಎಂದರೆ ವಿಚಾರ. ಅದರಲ್ಲಿ ಅನೇಕ ವಿಚಾರ ಇವೆ. ಒಂದು ಕಡೆ 'ಮೃತ್ಯು ಸದಾ ಬೆನ್ನ ಹಿಂದೆಯೇ ಇದೆ. ಆ ಮೃತ್ಯು ವನ್ನು ಹೇಗೆ ಮರೆಯಬೇಕೆಂದು ಮನುಷ್ಯ ಯಾವಾಗಲೂ ಪ್ರಯತ್ನಿಸು ತ್ತಿದ್ದಾನೆ. ಸಾವನ್ನು ನೆನಪಿನಲ್ಲಿಟ್ಟುಕೊಂಡು ವರ್ತಿಸುವುದು ಹೇಗೆಂಬು ದನ್ನು ಆತ ಯೋಚಿಸುವುದಿಲ್ಲ' ಎಂದು ಆತ ಹೇಳಿದ್ದಾನೆ. ಮರಣವೆಂಬ ಶಬ್ದವೂ ಮನುಷ್ಯನಿಗೆ ರುಚಿಸದು. ಊಟ ನಡೆದಾಗ ಮರಣ ಶಬ್ದವನ್ನು ಉಚ್ಚರಿಸಿದರೆ 'ಎಂಥ ಅಶುಭ ಮಾತು ಆಡುತ್ತೀಯೆ' ಎನ್ನುತ್ತಾರೆ. ಆದರೆ ಹೆಜ್ಜೆಯೇನೋ ಸರ್ವದಾ ಸಾವಿನ ಕಡೆಗೇ. ಬೊಂಬಾಯಿ ತಿಕೀಟು ತೆಗೆದುಕೊಂಡು ರೈಲಿನಲ್ಲಿ ಕುಳಿತುಕೊಂಡರೆ, ಡಬ್ಬಿಯಲ್ಲಿ ಕುಳಿತೇ ಇದ್ದರೂ ಗಾಡಿ ನಿಮ್ಮನ್ನು ಬೊಂಬಾಯಿಗೆ ತಂದು ಹಾಕುತ್ತದೆ. ಹುಟ್ಟಿದಾಗಲೆ ನಾವು ಸಾವಿನ ತಿಕೀಟು ತೆಗೆದುಕೊಂಡಿರುತ್ತೇವೆ. ಕುಳಿತುಕೊಂಡಿದ್ದರೂ ಸರಿ. ಓಡಾಡುತ್ತಿದ್ದರೂ ಸರಿ. ಕೊನೆಗೆ ಸಾವು ಕಟ್ಟಿಟ್ಟದ್ದೇ. ಸಾವಿನ ವಿಚಾರ ನಿಮಗಿದ್ದರೂ ಸರಿ, ಇಲ್ಲದಿದ್ದರೂ ಸರಿ. ಅದೇನೋ ತಪ್ಪದು. ಮರಣ ನಿಶ್ಚಿತ. ಉಳಿದುದು ಅನಿಶ್ಚಿತವಿದ್ದೀತು. ಸೂರ್ಯ ಮುಳುಗುವಾಗ ಆಯುಷ್ಯದ ಒಂದು ತುಣುಕು ತಿಂದು ಹೋಗುತ್ತಾನೆ. ಬಾಳಿನ ಒಂದು ತುಣುಕು ಮಾಯವಾಗುತ್ತದೆ. ಬಾಳು ಚಿಕ್ಕದಾಗುತ್ತದೆ. ಆದರೆ ಮನುಷ್ಯ ನಿಗೆ ಆ ವಿಚಾರವಿಲ್ಲ. 'ಕೌತುಕ ದಿಸತಸೆ' ಎನ್ನುತ್ತಾರೆ ಜ್ಞಾನದೇವ. ಮನುಷ್ಯನಿಗೆ ಎಲ್ಲಿಂದ ಬರುತ್ತದೆ ಇಂಥ ನಿಶ್ಚಿಂತತೆ—ಎಂದು ಜ್ಞಾನದೇವ ರಿಗೆ ಆಶ್ಚರ್ಯ. ಸಾವಿನ ಯೋಚನೆಯೂ ಕೂಡ ಸಹನವಾಗದಷ್ಟು ಅದರ ಭೀತಿ ಮನುಷ್ಯನಿಗೆ. ಆ ಯೋಚನೆಯನ್ನೇ ಆತ ಬರಗೊಡ. ಕಣ್ಣಿನ ಮೇಲೆ ಪರದೆ ಎಳೆದುಕೊಂಡು ಕೂಡುತ್ತಾನೆ. ಯುದ್ಧಕ್ಕೆ ಹೊರಟ ಸೈನಿಕರು ಸಾವಿನ ವಿಚಾರ ಮರೆಸಲು ಆಡುತ್ತಾರೆ, ಕುಣಿಯುತ್ತಾರೆ, ಹಾಡುತ್ತಾರೆ, ಸಿಗರೇಟು ಸೇದುತ್ತಾರೆ. 'ಪ್ರತ್ಯಕ್ಷ ಮೃತ್ಯುವೆ ಕಾಣು ತ್ತಿದ್ದಾಗ ಸಹ ಈ ಟಾಮಿ, ಈ ಸೈನಿಕ, ಅದನ್ನು ಮರೆಯಲಿಕ್ಕಾಗಿ ತಿಂದು ಕುಡಿದು ಮಜಾ ಮಾಡುತ್ತಾ ಕೂತಾನು' ಎನ್ನುತ್ತಾನೆ ಪ್ಯಾಸ್ಕಲ್.

ನಾವೆಲ್ಲ ಇರುವುದೂ ಈ ಟಾಮಿಯ ಹಾಗೇ. ಮುಖ ದುಂಡಗೆ ಹಾಸ್ಯಯುಕ್ತವಾಗಿರಬೇಕು. ಒಣಗಿದ್ದಲ್ಲಿ ಎಣ್ಣೆ, ಪೋಮೇಡ್ ಹಚ್ಚಬೇಕು.

ಕೂದಲು ನರೆತಿದ್ದಲ್ಲಿ ಬಣ್ಣಾ ಹಚ್ಚಬೇಕು ಎಂದು ಮನುಷ್ಯ ಪ್ರಯತ್ನಿಸು ತ್ತಾನೆ. ಎದೆಯ ಮೇಲೆ ಸಾವಿನ ನರ್ತನ ನಡೆದಾಗಲೂ ಸಹ ನಾವೆಲ್ಲ ಟಾಮಿಗಳಂತೆ ಅದನ್ನು ಮರೆಯಲು ಯತ್ನಿಸುತ್ತೇವೆ. ಏನು ಬೇಕಾದರೂ ಮಾತನಾಡಬಹುದು. ಸಾವಿನ ವಿಚಾರ ಮಾತ್ರ ತೆಗೆಯುವಂತಿಲ್ಲ. ಮೆಟ್ರಿಕ್ ಆದ ಹುಡುಗನನ್ನು 'ಮುಂದೇನು ಮಾಡುತ್ತೀಯೆ?' ಎಂದು ಕೇಳಿದರೆ ಆತ 'ಸದ್ಯ ಕೇಳಬೇಡಿ. ಈಗ ಫಸ್ಟ್ ಇಯರ್‌ನಲ್ಲಿದೇನೆ' ಎನ್ನುತ್ತಾನೆ. ಮುಂದಿನ ವರ್ಷ ಮತ್ತೆ ಅವನನ್ನೆ ಅದೇ ಪ್ರಶ್ನೆ ಕೇಳಿದರೆ 'ಮೊದಲು ಇಂಟರ್ ಆದರೂ ಆಗಲಪ್ಪ! ಮುಂದೆ ಯೋಚಿಸೋಣ' ಎನ್ನುತ್ತಾನೆ. ಹೀಗೇ ಮುಂದಿನದನ್ನು ಮೊದಲೇ ನೋಡಿಕೊಂಡಿರಬೇಡವೇ? ಮುಂದಿನ ಹೆಜ್ಜೆಯ ಸಿದ್ಧತೆ ಮೊದಲೇ ಇರಬೇಕು. ಇಲ್ಲವಾದರೆ ಅದು ತಗ್ಗಿಗೆ ಬಿದ್ದೀತು. ಆದರೆ ವಿದ್ಯಾರ್ಥಿಗೆ ಅದೆಲ್ಲ ರುಚಿಸದು. ಪಾಪ ಅವನ ಶಿಕ್ಷಣವೇ ಅಂಧಕಾರಮಯ. ಅದರಾಚೆಯ ಭವಿಷ್ಯ ಅವನಿಗೆ ಅಗೋಚರ. ಆದುದರಿಂದ ಮುಂದೇನು ಮಾಡಬೇಕೆಂಬ ವಿಚಾರವನ್ನೇ ಆತ ಬಿಡುತ್ತಾನೆ. ಮುಂದೆ ಬರೀ ಕತ್ತಲೆ. ಆದರೆ ಮುಂದೆ ಬರುವುದೇನೋ ತಪ್ಪದು. ಹಠಾತ್ತಾಗಿ ಅದು ಇದುರಿಗೆ ಬರುತ್ತದೆ.

ಕಾಲೇಜಿನಲ್ಲಿ ಪ್ರೊಫೆಸರರು ತರ್ಕಶಾಸ್ತ್ರ ಕಲಿಸುತ್ತಾರೆ. 'ಮನುಷ್ಯ ಮರ್ತ್ಯ. ಸಾಕ್ರೆಟೀಸ್ ಮನುಷ್ಯ. ಅರ್ಥಾತ್ ಆತ ಸಾಯುತ್ತಾನೆ. ಸಾಕ್ರೆಟೀಸನ ದೃಷ್ಟಾಂತವನ್ನೆ ಏಕೆ ಕೊಡಬೇಕು ಅವರು? ತಮ್ಮ ಉದಾಹರಣೆಯನ್ನೇಕೆ ಕೊಡುವುದಿಲ್ಲ? ಪ್ರೊಫೆಸರರೂ ಮರ್ತ್ಯರೇ. 'ಎಲ್ಲ ಮನುಷ್ಯರೂ ಮರ್ತ್ಯರೇ. ಆದುದರಿಂದ ಪ್ರೊಫೆಸರಾದ ನಾನೂ ಮರ್ತ್ಯನೇ. ಶಿಷ್ಯರಾದ ನೀವೂ ಮರ್ತ್ಯರೇ' ಎಂದು ಅವರು ಹೇಳಲಾರರು. ಮರಣವನ್ನವರು ಸಾಕ್ರೆಟೀಸನ ಮೇಲೆ ತಳ್ಳಿಬಿಡುತ್ತಾರೆ. ಕಾರಣವಿಷ್ಟೆ. ಸಾಕ್ರೆಟೀಸ್ ಸತ್ತೇಹೋಗಿದಾನೆ. ದೂರು ಎತ್ತಲು ಆತ ಇಲ್ಲಿ ಇಲ್ಲ. ಸಾಕ್ರೆಟೀಸನಿಗೆ ಸಾವನ್ನರ್ಪಿಸಿ ಗುರುಶಿಷ್ಯರು ತಮ್ಮಮಟ್ಟಿಗೆ ತಾವು ಬಹಳ ಸುರಕ್ಷಿತವೆಂದು ಕಲ್ಪಿಸಿಕೊಳ್ಳುತ್ತಾರೆ.

ಸಾವನ್ನು ಮರೆತುಬಿಡುವ ಈ ಪ್ರಯತ್ನ ಎಲ್ಲೆಲ್ಲೂ ಹಗಲಿರುಳೂ ನಡೆದಿದೆ. ಆದರೂ ಸಾವು ತಪ್ಪದು. ನಾಳೆ ತಾಯಿ ಸತ್ತಾಗ ಮೃತ್ಯು

ಎದುರಿಗೇ ನಿಲ್ಲುತ್ತದೆ. ನಿರ್ಭಯವಾಗಿ ಮರಣದ ವಿಚಾರಮಾಡಿ ಅದನ್ನೆ ದುರಿಸುವ ಧೈರ್ಯ ಮನುಷ್ಯನಿಗಿಲ್ಲ. ಹರಿಣಿಯ ಬೆನ್ನ ಹಿಂದೆ ಹುಲಿ ಧಾವಿಸುತ್ತದೆ. ಹರಿಣಿಯೇನೋ ಅತಿ ಚುರುಕು. ಆದರೆ ಶಕ್ತಿ ಕಡಿಮೆ. ಕೊನೆಗೆ ದಣಿದುಹೋಗುತ್ತದೆ. ಬೆನ್ನ ಹಿಂದೆಯೇ ಹುಲಿ–ಸಾವು. ಆಗ ಹರಿಣಿಯ ಸ್ಥಿತಿ ಏನು ? ಹುಲಿಯ ಕಡೆ ಅದು ನೋಡಲಾರದು. ಮುಖ, ಕೊಂಬುಗಳನ್ನು ಮಣ್ಣಿನಲ್ಲಿ ಸೇರಿಸಿ ಕಣ್ಣುಮುಚ್ಚಿ ನಿಂತುಕೊಳ್ಳುತ್ತದೆ. 'ಬಾ ಅಪ್ಪ, ಹೊಡೆದುಬಿಡು' ಎಂದು ನಿರಾಧಾರವಾಗಿ ಹೇಳುವಂತಿರುತ್ತದೆ. ನಾವು ನಾವನ್ನು ಎದುರಿಸಲಾರೆವು. ಅದನ್ನು ತಪ್ಪಿಸಬೇಕೆಂದು ಎಷ್ಟು ಉಪಾಯ ಹೂಡಿದರೂ ಅದರ ಶಕ್ತಿ ಬಲವಾದುದರಿಂದ ಕೊನೆಗೂ ಅದು ಬಂದೇ ಬರುತ್ತದೆ.

ಸಾವು ಬಂದಾಗ ಮನುಷ್ಯ ಬಾಳಿನಲ್ಲಿ ಗಳಿಸಿದುದೇನೆಂದು ಯೋಚಿಸುತ್ತಾನೆ. ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿ ಮಸಿಕುಡಿಕೆಯಲ್ಲಿ ಲೆಕ್ಕಣಿಕೆ ಹಾಕುತ್ತಾನೆ. ಮೇಲಕ್ಕೆತ್ತುತ್ತಾನೆ. ಬಿಳಿಯ ಕಾಗದದ ಮೇಲೆ ಕಪ್ಪು ಗೀಟು ಎಳೆದರೆ ಆಣೆ! ಕೊಂಚವಾದರೂ ಬರೆಯಬೇಕೋ ಬೇಡವೋ. ಏನು ಸರಸ್ವತಿ ಬಂದು ಬರೆಯಬೇಕೆ ? ಮೂರು ತಾಸು ಮುಗಿಯುತ್ತವೆ. ಬರಿಯ ಕಾಗದ ಕೊಡುತ್ತಾನೆ ಇಲ್ಲವೆ ಕೊನೆಗೆ ಏನೋ ಗೀಚುತ್ತಾನೆ. ಪ್ರಶ್ನೆ ಬಿಡಿಸುವ, ಉತ್ತರ ಬರೆಯುವ ವಿಚಾರವಿಲ್ಲ. ಅತ್ತ ಇತ್ತ ನೋಡುತ್ತಾನೆ. ನಮ್ಮದೂ ಹೀಗೇ. ಬಾಳಿನ ಮುಳ್ಳು ಸಾವಿನ ಕಡೆ ನಡೆದಿದೆಯೆಂಬುದನ್ನು ಗಮನದಲ್ಲಿಟ್ಟುಕೊಂಡು ಆ ಕೊನೆಯ ಕ್ಷಣ ಹೇಗೆ ಪುಣ್ಯಮಯ, ಪಾವನ, ಸವಿಕಟ್ಟು ಆದೀತೋ ಅದನ್ನು ಅಭ್ಯಸಿಸುತ್ತಿರಬೇಕು. ಮನಸ್ಸಿನ ಮೇಲೆ ಅತ್ಯುತ್ಕೃಷ್ಟ ಸಂಸ್ಕಾರ ಹೇಗಾದೀತೆಂಬ ವಿಚಾರ ಮೊದಲಿನಿಂದಲೂ ಇರಬೇಕು. ಆದರೆ ಒಳ್ಳೆಯ ಸಂಸ್ಕಾರಗಳ ವಿಚಾರ ಯಾರಿಗಿದೆ ? ಕೆಟ್ಟ ವಿಷಯಗಳ ವಿಚಾರ, ಅಭ್ಯಾಸವೇ ಯಾವಾಗಲೂ. ನಾಲಗೆ, ಕಣ್ಣು, ಕಿವಿಗಳಿಗೆ ಸ್ವಚ್ಛಂದತೆಯ ಶಿಕ್ಷಣ ಕೊಡುತ್ತೇವೆ. ಕೂಡದು. ಮನಸ್ಸಿಗೆ ಬೇರೆ ಚಟ ಕಲಿಸಬೇಕು. ಒಳ್ಳೆಯತನದ ಕಡೆ ಚಿತ್ತ ಹೊರಳಬೇಕು. ಅಲ್ಲಿಯೆ ರಮಿಸಬೇಕು. ನಮ್ಮ ತಪ್ಪು ನಮಗೆ ತಿಳಿದೊಡನೆಯೆ ಸುಧಾರಣೆಗೆ ಮೊದಲಾಗಬೇಕು. ತಪ್ಪು ತಿಳಿದರೂ ಸಹ ಮತ್ತೆಮತ್ತೆ ತಪ್ಪು

ಮಾಡಬೇಕೆ? ತಪ್ಪು ತಿಳಿದಾಗಲೆ ಪುನರ್ಜನ್ಮ. ಅದೇ ನಿನ್ನ ನವೀನ ಬಾಲ್ಯ ಅದೇ ನಿನ್ನ ಬಾಳಿನ ಹೊಸ ಬೆಳಗು ಎಂದು ತಿಳಿ. ನಿಜಕ್ಕೂ ಈಗ ಎಚ್ಚೆತ್ತುಕೊಂಡಿದ್ದೀ. ಇನ್ನು ಹಗಲಿರುಳೂ ಬಾಳಿನ ಪರೀಕ್ಷೆಮಾಡು, ಜಪಿಸು. ಇಲ್ಲವಾದರೆ ಮತ್ತೆ ಕಾಲುಜಾರಿ ಬೀಳುತ್ತೀ. ಮತ್ತೆ ಕೆಡುಕಿಗೆ ಸಿಕ್ಕಿಕೊಳ್ಳುತ್ತೀ.

ಕೆಲವು ವರ್ಷದ ಹಿಂದೆ ನಮ್ಮ ಅಜ್ಜಿಯನ್ನು ಕಾಣಲು ಹೋಗಿದ್ದೆ. "ವಿನ್ಯಾ, ಇತ್ತೀಚೆಗೆ ಯಾವುದೂ ನೆನಪಿನಲ್ಲೇ ಉಳಿಯುವುದಿಲ್ಲಪ್ಪಾ, ತುಪ್ಪದ ಪಾತ್ರೆ ತರಲು ಹೋಗುತ್ತೇನೆ. ಮರೆತುಬಿಟ್ಟು ಹಾಗೇ ಬರುತ್ತೇನೆ" ಎಂದು ಆಕೆ ಹೇಳುತ್ತಿದ್ದಳು. ಆದರೆ ಅದಕ್ಕೆ ೫೦ ವರ್ಷ ಹಿಂದೆ ನಡೆದ ಆಭರಣದ ಕತೆಯೊಂದನ್ನು ಆಕೆ ಚೆನ್ನಾಗಿಯೇ ವಿವರಿಸುತ್ತಿದ್ದಳು. ಐದು ನಿಮಿಷಕ್ಕೆ ಮೊದಲಿನವರ ನೆನಪಿಲ್ಲ. ಐವತ್ತು ವರ್ಷಕ್ಕೆ ಹಿಂದಿನ ಬಲವಾದ ಸಂಸ್ಕಾರ ಮಾತ್ರ ಕೊನೆಯವರೆಗೂ ಇತ್ತು. ಕಾರಣವೇನು? ಅದುವರೆಗೂ ಆಕೆ ಆ ಆಭರಣದ ಕತೆಯನ್ನೆ ಪ್ರತಿಯೊಬ್ಬರ ಹತ್ತಿರವೂ ಹೇಳಿರಬಹುದು. ಆ ವಿಷಯದ ಉಚ್ಚಾರ ಸತತವಾಗಿ ನಡೆಯಿತು. ಆಕೆಯ ಬಾಳಿಗೇ ಅದು ಅಂಟಿಕೊಂಡಿತು. ಬಾಳಿನೊಂದಿಗೆ ಏಕರೂಪ ತಳೆಯಿತು. 'ದೇವರ ದಯೆಯಿಂದ ಅಜ್ಜಿಗೆ ಮರಣಕಾಲದಲ್ಲಾದರೂ ಈ ಆಭರಣಗಳ ನೆನಪಾಗದಿದ್ದರೆ ಸಾಕು' ಎಂದು ನಾನು ನನ್ನಷ್ಟಕ್ಕೇ ಹೇಳಿಕೊಂಡೆ.

### ೩೮. ಸದಾ ಅದರಲ್ಲೇ ರಮಿಸಿ

ಹಗಲಿರುಳೂ ಅಭ್ಯಾಸ ಮಾಡಿದ ವಿಷಯ ಅಂಟಿಕೊಳ್ಳದಿದ್ದೀತೇ? ಆ ಅಜಾಮಿಳನ ಕತೆ ಓದಿ ಭ್ರಾಂತರಾಗಬೇಡಿ. ಆತ ನೋಡಲು ಪಾಪಿಯಾಗಿದ್ದ. ಆದರೆ ಬಾಳಿನ ಒಳಗಡೆ ಪುಣ್ಯದ ಪ್ರವಾಹ ಹರಿಯುತ್ತಿತ್ತು. ಕೊನೆಯ ಕ್ಷಣದಲ್ಲಿ ಅದು ಪ್ರೈದೋರಿತು. ಯಾವಾಗಲೂ ಪಾಪದಲ್ಲಿ ನಿರತರಾಗಿದ್ದರೂ ಕೊನೆಗೆ ರಾಮನಾಮ ಬಾಯಲ್ಲಿ ಬಂದೇ ತೀರುವುದೆಂದು ಭ್ರಮಿಸಬೇಡಿ. ಚಿಕ್ಕಂದಿನಿಂದಲೂ ಸತತ ಅಭ್ಯಾಸ ನಡೆಸಿ. ಒಂದೊಂದಾಗಿ ಒಳ್ಳೆಯ ಸಂಸ್ಕಾರ ಹುಟ್ಟುವಂತೆ ಯತ್ನಿಸಿ. ಅದರಿಂದೇನಾದೀತು, ಇದರಿಂದೇನಾದೀತು ಎನ್ನಬೇಡಿ. ನಾಲ್ಕು ಗಂಟೆಗೇ ಏಕೆ ಏಳಬೇಕು? ಏಳು ಗಂಟೆಗೆದ್ದರೆ ಏನು ಕೇಡು?—ಎಂದರೆ ನಡೆಯದು. ಹೀಗೆ ಮನಸ್ಸನ್ನು

ಸಡಿಲ ಬಿಟ್ಟರೆ ಕೊನೆಗೆ ಮೋಸಹೋದೀರಿ. ಸಂಸ್ಕಾರಗಳ ಮುದ್ರೆ ಬೀಳ ಲಿಕ್ಕಿಲ್ಲ. ಲಕ್ಷ್ಮಿಯನ್ನು ಕಣಕಣವಾಗಿ ದೊರಕಿಸಬೇಕಾಗುತ್ತದೆ. ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆಯದೆ ವಿದ್ಯಾರ್ಜನೆ ಮಾಡಬೇಕಾಗುತ್ತದೆ. ಪ್ರತಿ ಕ್ಷಣವೂ ನಡೆಯುವ ಸಂಸ್ಕಾರ ಒಳ್ಳೆಯದೇ ತಾನೆ ಎಂಬುದರ ಯೋಚನೆಯಿರಲಿ. ಕೆಟ್ಟಮಾತು ಬಂತು—ಆಯಿತು ಕೆಟ್ಟ ಸಂಸ್ಕಾರ. ಒಂದೊಂದು ಕೃತಿಯೂ ಬಾಳಿನ ಬಂಡೆಗೆ ಒಂದು ಉಳಿಯೇಟು ಹಾಕುತ್ತದೆ. ಹಗಲೆಲ್ಲ ಒಳ್ಳೆಯದಾಗಿದ್ದರೂ ಕನಸಿನಲ್ಲಿ ಕೆಟ್ಟಕಲ್ಪನೆ ಬರುವುದುಂಟು. ಐದಾರು ದಿನಗಳ ವಿಚಾರವೆ ಕನಸಿನಲ್ಲಿ ಕಾಣಿಸುವುದೆಂದೇನೂ ಇಲ್ಲ. ಅನೇಕ ಕುಸಂಸ್ಕಾರಗಳು ಉಳಿದುಹೋಗಿರುತ್ತವೆ. ಅವು ಯಾವಾಗ ಎದ್ದು ಕುಳಿತಾವೆಂಬ ನಿಯಮವಿಲ್ಲ. ಎಂತಲೇ ಸಣ್ಣ ಪುಟ್ಟ ವಿಷಯಗಳಲ್ಲಿ ಎಚ್ಚರಿಕೆಯಿಂದಿರಬೇಕು. ಮುಳುಗುವವನಿಗೆ ಕಡ್ಡಿಯೂ ಒಂದು ಆಧಾರ. ನಾವು ಸಂಸಾರ ಸಾಗರದಲ್ಲಿ ಮುಳುಗುತ್ತಿದೇವೆ. ಒಂದು ಒಳ್ಳೆಯ ಮಾತು ಆಡಿದರೆ ಅದೇ ಆಧಾರ. ನೀವು ಮಾಡಿದ ಉತ್ತಮ ಕೃತಿ ವ್ಯರ್ಥವಾಗದು. ಅದು ನಿಮ್ಮನ್ನುಳಿಸೀತು. ಲೇಶಮಾತ್ರವೂ ಕುಸಂಸ್ಕಾರ ಬೇಡ. ಕಣ್ಣು ಪವಿತ್ರವಾಗಿರಲಿ, ನಿಂದೆಗೆ ಕಿವಿ ಜೋಲದಿರಲಿ. ಒಳ್ಳೆಯ ಮಾತನ್ನೆ ನಾಲಗೆ ನುಡಿಯುತ್ತಿರಲಿ. ಇಂಥ ದಕ್ಷತೆಯಿದ್ದರೆ ಕೊನೆಯ ಕ್ಷಣಕ್ಕೆ ಜಯಶೀಲರಾಗುವಿರಿ. ಬಾಳಿಗೂ ಸಾವಿಗೂ ಒಡೆಯರಾದೀರಿ.

ಪವಿತ್ರ ಸಂಸ್ಕಾರಗಳಾಗಬೇಕಾದರೆ ಮನದಲ್ಲಿ ಉದಾತ್ತ ವಿಚಾರ ಬರಬೇಕು. ಕೈ ಪವಿತ್ರ ಕೆಲಸಗಳಲ್ಲಿ ತೊಡಗಿರಬೇಕು. ಒಳಗಡೆ ದೇವರ ಸ್ಮರಣೆ, ಹೊರಗಡೆ ಸ್ವಧರ್ಮಾಚರಣೆ. ಕೈಯಿಂದ ಸೇವಾಕರ್ಮ, ಮನದಲ್ಲಿ ವಿಕರ್ಮ. ಹೀಗೆ ದಿನದಿನವೂ ನಡೆಯಬೇಕು ಮಹಾತ್ಮರನ್ನು ನೋಡಿ. ದಿನವೂ ನೂಲುತ್ತಾರೆ. ಪ್ರತಿದಿನವೂ ನೂಲಲೇಬೇಕೆಂದು ಹೇಳುತ್ತಾರೆ. ದಿನವೂ ಏಕೆ ನೂಲಬೇಕು? ಬಟ್ಟೆಗಳಿಗೆ ಸಾಲುವಷ್ಟು ಯಾವಾಗಲಾದರೂ ನೂತುಬಿಟ್ಟರೆ ನಾಲದೆ? ಹೀಗೆ ಮಾಡಿದರೆ ಅದು ವ್ಯವಹಾರವಾಯಿತು. ದಿನವೂ ನೂಲುವುದು ಆಧ್ಯಾತ್ಮಿಕತೆ. ಅದು ದೇಶಕ್ಕಾಗಿ ನಾವು ಮಾಡ ಬೇಕಾದ ಚಿಂತನೆ. ದರಿದ್ರನಾರಾಯಣನ ಸೇವೆ. ಕೊನೆಗೆ ಆ ಸಂಸ್ಕಾರ ದೃಢವಾಗುತ್ತದೆ.

ಔಷಧ ಕೊಟ್ಟ ಡಾಕ್ಟರು ನಿತ್ಯವೂ ಒಂದು ಡೋಸು ತೆಗೆದುಕೊಳ್ಳಿ ಎಂದು ಹೇಳುತ್ತಾರೆ. ಎಲ್ಲವನ್ನೂ ಒಂದೇಸಲ ಕುಡಿದುಬಿಟ್ಟರೆ? ಅದೇನೋ ಚಮತ್ಕಾರವಾದೀತು. ಅಷ್ಟೇ. ಔಷಧದ ಉದ್ದೇಶ್ಯ ಸಫಲವಾಗಲಿಕ್ಕಿಲ್ಲ. ಪ್ರತಿನಿತ್ಯವೂ ಔಷಧದ ಸಂಸ್ಕಾರವಾಗಿ ರೋಗ ದೂರವಾಗಬೇಕು. ಬಾಳಿನದೂ ಹೀಗೇ. ಶಂಕರನ ಮೂರ್ತಿಯ ಮೇಲೆ ಮೆಲ್ಲಮೆಲ್ಲನೆ ಅಭಿಷೇಕ ಮಾಡಬೇಕು. ನನ್ನ ಮೆಚ್ಚಿನ ದೃಷ್ಟಾಂತ ಇದು. ಬಾಲ್ಯದಲ್ಲಿ ಈ ಕ್ರಿಯೆಯನ್ನು ನಿತ್ಯವೂ ನೋಡುತ್ತಿದ್ದೆ. ಇಪ್ಪತ್ನಾಲ್ಕು ಗಂಟೆಗಳ ಕಾಲ ಸುರಿದ ಆ ನೀರು ಎರಡು ಕೊಡದಷ್ಟು ಆದೀತು. ಆ ಎರಡು ಕೊಡವನ್ನೂ ಒಂದೇಸಲ ಮೂರ್ತಿಯ ಮೇಲೆ ಸುರಿದರೆ? ಈ ಪ್ರಶ್ನೆಗೆ ಬಾಲ್ಯದಲ್ಲೇ ನನಗೆ ಉತ್ತರ ದೊರೆಯಿತು. ನೀರನ್ನು ಒಮ್ಮೆಲೆ ಸುರಿದುಬಿಟ್ಟರೆ ಕರ್ಮ ಸಫಲವಾಗದು. ಹನಿಹನಿಯಾಗಿ ಸತತ ಧಾರೆ ಸುರಿಯುತ್ತಿದ್ದರೆ ಮಾತ್ರ ಉಪಾಸನೆಯಾದೀತು. ಸಮಾನ ಸಂಸ್ಕಾರಗಳ ಧಾರೆ ಸತತವಾಗಿ ನಡೆದಿರಬೇಕು. ಬೆಳಗಿನ ಸಂಸ್ಕಾರವೆ ಮಧ್ಯಾಹ್ನಕ್ಕೆ. ಅದೇ ಸಂಜೆಗೆ. ಹಗಲಿನದು ರಾತ್ರಿಗೆ. ನಿನ್ನೆಯದು ಇಂದು. ಇಂದಿನದು ನಾಳೆಗೆ. ಈ ವರ್ಷದ್ದು ಮುಂದಿನ ವರ್ಷಕ್ಕೆ. ಈ ಜನ್ಮದ್ದು ಮುಂದಿನ ಜನ್ಮಕ್ಕೆ. ಬದುಕಿದ್ದಾಗಿನದು ಸಾಯುವಾಗ. ಹೀಗೆ ಒಂದೊಂದು ಒಳ್ಳೇ ಸಂಸ್ಕಾರದ ದಿವ್ಯಧಾರೆ ಬಾಳಿನಲ್ಲೆಲ್ಲ ಹರಿಯುತ್ತಿರಬೇಕು. ಈ ಪ್ರವಾಹ ಅಖಂಡವಾಗಿದ್ದರೆ ಮಾತ್ರ ನಮಗೆ ಗೆಲುವು. ಸಂಸ್ಕಾರದ ಪ್ರವಾಹ ಒಂದೇ ದಿಕ್ಕಿಗೆ ಹರಿಯುತ್ತಿರಬೇಕು. ಬೆಟ್ಟದಮೇಲೆ ಬಿದ್ದ ನೀರು ಹನ್ನೆರಡೂ ದಿಕ್ಕಿಗೆ ಹರಿದರೆ ಹೊಳೆಯಾಗಲಾರದು. ಎಲ್ಲವೂ ಒಂದೇ ದಿಕ್ಕಿಗೆ ಹರಿದರೆ ಪ್ರವಾಹವಾದೀತು. ಪ್ರವಾಹ ಹೊಳೆಯಾದೀತು. ಹೊಳೆ ಗಂಗೆಯಾದೀತು. ಸಾಗರದಲ್ಲಿ ಬೆರೆತೀತು. ಒಂದೇ ದಿಕ್ಕಿಗೆ ಹರಿದ ನೀರು ಸಾಗರ ಸೇರಿತು. ಎಲ್ಲ ಕಡೆಗೂ ಹರಿದುದು ಬತ್ತಿಹೋಯಿತು. ಸಂಸ್ಕಾರಗಳದೂ ಹೀಗೆ. ಅವು ಬಂದ ಹಾಗೇ ಹೋಗಿಬಿಟ್ಟರೆ ಪ್ರಯೋಜನವೇನು? ಅವುಗಳ ಪವಿತ್ರ ಪ್ರವಾಹ ಬಾಳಿನುದ್ದಕ್ಕೂ ಹರಿಯುತ್ತಿದ್ದರೆ ಮಾತ್ರ ಸಾವು ಮಹದಾನಂದದ ನಿಧಾನವಾದೀತು. ದಾರಿಯಲ್ಲೆಲ್ಲೂ ನಿಂತುಕೊಳ್ಳದೆ ಮೋಹಗಳನ್ನು ದೂರಗೊಳಿಸಿ ಕಷ್ಟದಿಂದ ಅಡಿಯಿಡುತ್ತ ಶಿಖರಕ್ಕೆ ತಲಪಿ,

ಮೇಲೆ ಹೋಗಿ ಎದೆಯ ಮೇಲಿನ ಬಂಧನಗಳನ್ನೆಲ್ಲ ಕಿತ್ತೊಗೆದು, ಅಲ್ಲಿನ ಸ್ವಚ್ಛಂದ ಹವೆಯ ಅನುಭವ ಪಡೆದ ಪ್ರವಾಸಿಯ ಆನಂದದ ಕಲ್ಪನೆ ಬೇರೆಯವರಿಗೆ ಬರಲಾರದು. ನಡುದಾರಿಯಲ್ಲಿ ನಿಂತ ಪ್ರವಾಸಿಯ ಸೂರ್ಯನೇನೂ ನಿಲ್ಲ.

## ೩೯. ಹಗಲಿರುಳೂ ಯುದ್ಧಪ್ರಸಂಗ

ಸಾರಾಂಶ: ಹೊರಗಿನಿಂದ ಸತತ ಸ್ವಧರ್ಮಾಚರಣೆ, ಒಳಗಿನಿಂದ ಚಿತ್ತಶುದ್ಧಿಯ ಹರಿಸ್ಮರಣೆಯ ಕ್ರಿಯೆ; ಹೀಗೆ ಅಂತರ್ಬಾಹ್ಯ ಕರ್ಮ ವಿಕರ್ಮಗಳ ಪ್ರವಾಹ ಹರಿಯುತ್ತಿದ್ದಾಗ ಮರಣವೂ ಆನಂದಮಯವಾಗುತ್ತದೆ. ಎಂತಲೇ ಭಗವಂತ ಹೇಳುವುದು.

“ ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ”

ಯಾವಾಗಲೂ ಎಡಬಿಡದೆ ನನ್ನನ್ನು ಸ್ಮರಿಸುತ್ತಿರು, ಹೋರಾಡುತ್ತಿರು, “ ಸದಾ ಮದ್ಭಾವಮಾಗತಃ ”. ಯಾವಾಗಲೂ ನನ್ನನ್ನು ಕೂಡಿರು. ಈಶ್ವರೀ ಪ್ರೇಮದಿಂದ ಒಳಗೂ ಹೊರಗೂ ತುಂಬಿದಾಗ, ಆ ರಾಗ ಬಾಳಿನ ಮೇಲೆಲ್ಲ ಪಸರಿಸಿದಾಗ, ಪವಿತ್ರ ವಿಷಯಗಳಲ್ಲೆಲ್ಲ ಆನಂದವುಂಟಾದೀತು. ಆ ಮೇಲೆ ಕೆಟ್ಟ ವೃತ್ತಿ ಎದುರಿಗೇ ಬರಲಾರದು. ಮನಸ್ಸಿನಲ್ಲಿ ಸುಂದರ ಮನೋರಥಗಳ ಬೀಜ ಮೊಳೆತಾವು. ಸಹಜವಾಗಿಯೇ ಒಳ್ಳೆಯ ಕ್ರಿಯೆ ನಡೆದಾವು.

ಈಶ್ವರ ಸ್ಮರಣೆಯಿಂದ ಒಳ್ಳೆಯ ಕ್ರಿಯೆ ಸಹಜವಾಗಿ ನಡೆಯುವವೆಂಬುದು ನಿಜ. ಆದರೆ ಹೋರಾಡುತ್ತಿರಬೇಕೆಂದು ಭಗವಂತನ ಆಜ್ಞೆ. ತುಕಾರಾಮ ಮಹಾರಾಜರು ಹೇಳುತ್ತಾರೆ :

ಹಗಲಿರುಳೂ ನಮಗೆ ಯುದ್ಧ ಪ್ರಸಂಗ
ಮನದೊಡನೆ ಅಂತರ್ಬಾಹ್ಯ ಜಗರಂಗ*

ಒಳಗೆ ಹೊರಗೆ ಅನಂತ ಸೃಷ್ಟಿ. ಈ ಸೃಷ್ಟಿಯೊಂದಿಗೆ ಸದಾ ಮನಸ್ಸಿನ ಹೋರಾಟ. ಇದರಲ್ಲಿ ಪ್ರತಿಕ್ಷಣವೂ ಗೆಲುವಾಗುತ್ತದೆಂದಲ್ಲ. ಕೊನೆಗೆ

* ರಾತ್ರೀ ದಿವಸ ಆಮ್ಹಾ ಯುದ್ಧಾಚಾ ಪ್ರಸಂಗ ।
ಅಂತರ್ಬಾಹ್ಯ ಜಗ ಆಣಿ ಮನ ॥

ಸಾಧಿಸಿದುದೇ ನಿಜ. ಕಟ್ಟಕಡೆಯ ತೀರ್ಪು ನಿಜ. ಎಷ್ಟೋ ಸಲ ಯಶಾಪಯಶ ಬಂದಾವು. ಸೋಲು ಬಂದಾಗ ನಿರಾಶರಾಗಬೇಕಾಗಿಲ್ಲ. ಕಲ್ಲಿನ ಮೇಲೆ ಹತ್ತೊಂಭತ್ತು ಸಲ ಏಟು ಹಾಕಿದರೂ ಒಡೆಯಲಿಲ್ಲವೆನ್ನಿ. ಇಪ್ಪತ್ತನೆಯ ಏಟಿಗೆ ಒಡೆಯಬಹುದು. ಅಷ್ಟುಮಾತ್ರಕ್ಕೆ ಮೊದಲಿನ ಏಟು ವ್ಯರ್ಥವಾದವೇನು? ಆ ಇಪ್ಪತ್ತನೆಯ ಏಟಿನ ಗೆಲವಿನ ಸಿದ್ಧತೆ ಮಾಡಿದುದು ಮೊದಲಿನ ಹತ್ತೊಂಭತ್ತು ಏಟುಗಳೇ.

ನಿರಾಶರಾಗುವುದೆಂದರೆ ನಾಸ್ತಿಕರಾದಂತೆ. ಪರಮೇಶ್ವರ ಬೆನ್ನಿನ ಹಿಂದೆಯೇ ಇದಾನೆ. ನಂಬಿಕೆ ಇಡಿ. ಮಗುವಿಗೆ ಧೈರ್ಯ ಬರಬೇಕೆಂದು ತಾಯಿ ಅದನ್ನು ಅತ್ತ ಇತ್ತ ಹೋಗಲು ಬಿಡುತ್ತಾಳೆ. ಅದು ಬಿದ್ದರೆ ಮಾತ್ರ ಎತ್ತಿಕೊಳ್ಳುತ್ತಾಳೆ. ಈಶ್ವರನೂ ನಿಮ್ಮ ಕಡೆ ನೋಡುತ್ತಿದಾನೆ. ನಿಮ್ಮ ಬಾಳಿನ ಗಾಳೀಪಟದ ದಾರ ಅವನ ಕೈಯಲ್ಲಿದೆ. ಒಮ್ಮೊಮ್ಮೆ ಆ ದಾರವನ್ನು ಬಿಗಿಯಾಗಿ ಹಿಡಿಯುತ್ತಾನೆ. ಒಮ್ಮೊಮ್ಮೆ ಸಡಿಲ ಬಿಡು ತ್ತಾನೆ. ಸೂತ್ರ ಮಾತ್ರ ಯಾವಾಗಲೂ ಅವನ ಕೈಯಲ್ಲೇ ಇರುತ್ತದೆ. ಗಂಗಾತೀರದಲ್ಲಿ ಈಜು ಕಲಿಸುತ್ತಾರೆ. ತೀರದ ಮೇಲಿನ ಗಿಡಕ್ಕೆ ಸರಪಳಿ ಯಿರುತ್ತದೆ. ಅದನ್ನು ಸೊಂಟಕ್ಕೆ ಕಟ್ಟಿ ಈಜಲು ಬಿಡುತ್ತಾರೆ. ಶಿಕ್ಷಕರು ನದಿಯಲ್ಲೇ ಇರುತ್ತಾರೆ. ಆ ಹೊಸಬ ಮೊದಲು ನಾಲ್ಕೈದು ಸಲ ನೀರು ಕುಡಿದರೂ ಕೊನೆಗೆ ಆ ಕಲೆಯನ್ನು ಕಲಿತುಕೊಳ್ಳುತ್ತಾನೆ. ಹೀಗೇ ಪರಮಾತ್ಮ ನಮಗೆ ಜೀವನ ಕಲೆ ಕಲಿಸುವುದು.

## ೪೦. ಶುಕ್ಲ–ಕೃಷ್ಣ ಗತಿ

ಪರಮೇಶ್ವರನ ಮೇಲೆ ಶ್ರದ್ಧೆಯಿಟ್ಟು ಕಾಯಾ ವಾಚಾ ಮನಸ್ಸು ಗಳಿಂದ ಹೋರಾಡುತ್ತಿದ್ದರೆ ಅಂತ್ಯಕಾಲದ ಗಳಿಗೆ ಅತಿಶಯ ಒಳ್ಳೆಯ ದಾದೀತು. ಆಗ ಎಲ್ಲ ದೇವತೆಗಳೂ ಒಲಿದಾರು. ಈ ಅಧ್ಯಾಯದ ಕೊನೆಯಲ್ಲಿ ಇದನ್ನು ಒಂದು ರೂಪಕದ ಮೂಲಕ ಹೇಳಿದೆ. ಅದನ್ನು ತಿಳಿದುಕೊಳ್ಳಿ. ಯಾವನ ಮರಣಕಾಲದಲ್ಲಿ ಅಗ್ನಿ ಉರಿಯುತ್ತದೋ, ಸೂರ್ಯ ಬೆಳಗುವನೋ, ಶುಕ್ಲಪಕ್ಷದ ಚಂದ್ರ ಪ್ರಕಾಶಿಸುತ್ತಿರುವನೋ, ಉತ್ತರಾಯಣದಲ್ಲಿನ ನಿರಭ್ರ–ಸುಂದರ ಆಕಾಶ ಹರಡಿದೆಯೋ, ಅವನು

ಬ್ರಹ್ಮದಲ್ಲಿ ವಿಲೀನವಾಗುತ್ತಾನೆ. ಯಾವನ ಮರಣಕಾಲದಲ್ಲಿ ಹೊಗೆ ಮುಸುಕಿರುವುದೋ, ಒಳಗೆ ಹೊರಗೆ ಕತ್ತಲೆ ಮುತ್ತಿರುವುದೊ, ಕೃಷ್ಣಪಕ್ಷದ ಚಂದ್ರ ಅತ್ಯಂತ ಕ್ಷೀಣನಾಗಿರುವನೊ, ದಕ್ಷಿಣಾಯನದಲ್ಲಿನ ಅಭ್ರಾಚ್ಛಾದಿತ ಮಲಿನ ಆಕಾಶ ಹರಡಿದೆಯೋ, ಅವನು ಹುಟ್ಟು–ಸಾವಿನ ಪರಂಪರೆಗೆ ಮತ್ತೆ ಸಿಕ್ಕಿಬೀಳುತ್ತಾನೆ.

ಈ ರೂಪಕದಿಂದ ಎಷ್ಟೋ ಜನ ಗೊಂದಲಕ್ಕೆ ಸಿಕ್ಕಿಬೀಳುತ್ತಾರೆ. ಪುಣ್ಯಮರಣ ಬರಬೇಕೆಂಬ ಇಷ್ಟವಿದ್ದರೆ ಅಗ್ನಿ, ಸೂರ್ಯ, ಚಂದ್ರ, ಆಕಾಶ ಇತ್ಯಾದಿ ದೇವತೆಗಳ ಕೃಪೆ ಅಗತ್ಯ. ಕರ್ಮದ ಚಿಹ್ನೆ ಅಗ್ನಿ. ಅದು ಯಜ್ಞದ ಕುರುಹು. ಕೊನೆಯ ಗಳಿಗೆಯಲ್ಲಿ ಯಜ್ಞದ ಜ್ವಾಲೆ ಉರಿಯುತ್ತಿರಬೇಕು. "ನತತವಾಗಿ ಕರ್ತವ್ಯ ಮಾಡುವಾಗ ಮರಣ ಬಂದರೆ ಧನ್ಯ. ಏನನ್ನೋ ಓದುತ್ತಿದ್ದಾಗ, ಕರ್ಮ ಮಾಡುತ್ತಿದ್ದಾಗ ನನಗೆ ಸಾವು ಬಂದರೆ ಸಾಕು" ಎಂದು ನ್ಯಾಯಮೂರ್ತಿ ರಾನಡೆ ಹೇಳುತ್ತಿದ್ದರು. ಉರಿಯುವ ಅಗ್ನಿಯ ಅರ್ಥ ಇದು. ಮರಣ ಕಾಲದಲ್ಲಿ ಕರ್ಮನಿರತನಾಗಿರುವುದೇ ಅಗ್ನಿಯ ಕೃಪೆ. ಕಡೆತನಕ ಬುದ್ಧಿಯ ಪ್ರಭೆ ಬೆಳಬೆಳಗುತ್ತಿರುವುದು ಸೂರ್ಯನ ಕೃಪೆ. ಮರಣ ಕಾಲದಲ್ಲಿ ಪವಿತ್ರಭಾವ ಬಲವತ್ತರವಾಗುವುದು ಚಂದ್ರ ಕೃಪೆ. ಮನದ ಭಾವನೆಯ ದೇವತೆ ಚಂದ್ರ. ಶುಕ್ಲಪಕ್ಷದ ಚಂದ್ರನಂತೆ ಮನಸ್ಸಿನಲ್ಲಿನ ಪ್ರೇಮ, ಭಕ್ತಿ, ಉತ್ಸಾಹ, ಪರೋಪಕಾರ, ದಯೆ ಇತ್ಯಾದಿ ಶುದ್ಧ ಭಾವನೆಗಳು ಪೂರ್ಣವಿಕಾಸ ಹೊಂದಬೇಕು. ಹೃದಯಾಕಾಶದಲ್ಲಿ ಆಸಕ್ತಿಯ ಮೋಡಗಳ ಅಭಾವವಿರುವುದು ಆಕಾಶದ ಕೃಪೆ. ಒಂದು ಸಲ ಮಹಾತ್ಮರು ಹೇಳಿದರು: "ಚರಖ, ಚರಖ ಎಂದು ಯಾವಾಗಲೂ ಹೇಳುತ್ತ ಬಂದೆ. ಅದು ಅತ್ಯಂತ ಪವಿತ್ರವೆಂದೆ. ಆದರೆ ಅಂತ್ಯಕಾಲದಲ್ಲಿ ಅದರ ವಾಸನೆಯೂ ಬೇಡ. ಯಾರು ನನಗೆ ಚರಖವನ್ನು ಸೂಚಿಸಿದನೊ, ಆತ ಅದರ ಚಿಂತೆ ವಹಿಸಲು ಸಮರ್ಥ. ಈಗ ಚರಖ ಎಷ್ಟೋ ಜನ ದೊಡ್ಡ ದೊಡ್ಡ ಮನುಷ್ಯರ ಕೈಗೆ ಹೋಗಿದೆ. ಅದರ ಚಿಂತೆ ಬಿಟ್ಟು ಪರಮಾತ್ಮನನ್ನು ಭೇಟಿಮಾಡಲು ನಾನು ಸಿದ್ಧನಾಗಿರಬೇಕು." ತಾತ್ಪರ್ಯವಿಷ್ಟೆ. ಹೃದಯದಲ್ಲಿ ಆಸಕ್ತಿಯ ಮೋಡಗಳಿಲ್ಲದಿರುವುದೇ ಉತ್ತರಾಯಣವಿದ್ದ ಹಾಗೆ.

ಕೊನೆಯ ಶ್ವಾಸೋಚ್ಛ್ವಾಸದವರೆಗೂ ಸೇವೆ ಸಲ್ಲಿಸಿ, ಭಾವನೆಗಳ ಬೆಳುದಿಂಗಳಲ್ಲಿ ಮಿಂದು, ಹೃದಯಾಕಾಶದಲ್ಲಿ ಕೊಂಚವೂ ಆಸಕ್ತಿ ಉಳಿಸಿ ಕೊಳ್ಳದೆ, ಬುದ್ಧಿ ಸತೇಜವಾಗಿದ್ದು, ಸಾವಿನ ಘಟ್ಟಕ್ಕೆ ಬಂದು ಸೇರಿದವನು ಪರಮಾತ್ಮನಲ್ಲಿ ಲೀನವಾಗುತ್ತಾನೆ. ಇಂಥ ಪರಮ ಮಂಗಲವಾದ ಕೊನೆ ಬರಬೇಕಾದರೆ ಹಗಲಿರುಳೂ ದಕ್ಷತೆಯಿಂದ ಹೋರಾಡಬೇಕು. ಒಂದು ಕ್ಷಣವೂ ಸಹ ಅಶುದ್ಧ ಸಂಸ್ಕಾರ ಮನಸ್ಸಿನ ಮೇಲೆ ಮೂಡಕೂಡದು. ಶಕ್ತಿ ದೊರೆಯಲೆಂದು ಪರಮೇಶ್ವರನ ಪ್ರಾರ್ಥನೆ ಮಾಡುತ್ತಿರಬೇಕು. ನಾಮಸ್ಮರಣೆ, ತತ್ವಸ್ಮರಣೆ ಯಾವಾಗಲೂ ಮತ್ತೆ ಮತ್ತೆ ನಡೆದಿರಬೇಕು.

ಭಾನುವಾರ,
೧೦-೪-೧೯೩೨.

## ೪೧. ಪ್ರತ್ಯಕ್ಷ ಅನುಭವದ ವಿದ್ಯೆ

ನನ್ನ ಕಂಠ ನೋಯುತ್ತಿದೆ. ಇಂದು ನನ್ನ ಧ್ವನಿ ಕೇಳಿಸೀತೋ ಇಲ್ಲವೋ ಕೊಂಚ ಸಂದೇಹವೇ. ಈ ಸಂದರ್ಭದಲ್ಲಿ ಸಾಧುಚರಿತರಾದ ಹಿರಿಯ ಮಾಧವರಾವ್ ಪೇಶ್ವೆಯವರ ಅಂತ್ಯಕಾಲದ ಕತೆ ನೆನಪಾಗುತ್ತದೆ. ಆ ಮಹಾಪುರುಷ ಮರಣಶಯ್ಯೆಯ ಮೇಲಿದ್ದ. ವಿಪರೀತವಾಗಿ ಕಫದ ಬಾಧೆ. ಕಫವು ಅತಿಸಾರದಲ್ಲಿ ಕೊನೆಗಾಣುವುದುಂಟು. ಮಾಧವರಾಯರು ವೈದ್ಯನನ್ನು ಕುರಿತು "ನನ್ನ ಕಫವನ್ನು ಹೋಗಲಾಡಿಸಿ ಅತಿಸಾರವಾಗು ವಂತೆ ಮಾಡಿ. ರಾಮನಾಮುವನ್ನುಚ್ಚರಿಸಲು ಬಾಯಾದರೂ ಬರುವಂತಾ ದೀತು" ಎಂದರು. ಇಂದು ನಾನು ಪರಮೇಶ್ವರನ ಪ್ರಾರ್ಥನೆ ಮಾಡು ತ್ತಿದ್ದೆ. 'ಧ್ವನಿ ಬಂದ ಹಾಗೆ ಮಾತನಾಡು' ಎಂದು ಅಪ್ಪಣೆ ಕೊಟ್ಟ. ಇಲ್ಲಿ ನಾನು ಗೀತೆ ಹೇಳುತ್ತಿರುವುದು ಯಾರಿಗಾದರೂ ಉಪದೇಶ ಮಾಡ ಬೇಕೆಂಬ ಉದ್ದೇಶದಿಂದಲ್ಲ. ಲಾಭ ಮಾಡಿಕೊಳ್ಳಬಯಸುವವರಿಗೆ ಇದ ರಿಂದ ನಿಜವಾಗಿ ಲಾಭವಾದೀತು. ಆದರೆ ನಾ ಗೀತೆ ಹೇಳುತ್ತಿರುವುದು ಅದು ರಾಮನಾಮ ಎಂದು. ಗೀತೆ ಹೇಳುವಾಗ ನನಗೆ ಹರಿನಾಮದ ಭಾವ ಇರುತ್ತದೆ.

ಈಗ ನಾನು ಹೇಳಿದುದಕ್ಕೂ ಒಂಬತ್ತನೆ ಅಧ್ಯಾಯಕ್ಕೂ ಸಂಬಂಧ ವುಂಟು. ಈ ಅಧ್ಯಾಯದಲ್ಲಿರುವುದು ಹರಿನಾಮದ ಅಪೂರ್ವ ಮಹಾತ್ಮ್ಯೆ. ಈ ಅಧ್ಯಾಯವಿರುವುದು ಗೀತೆಯ ಮಧ್ಯದಲ್ಲಿ. ಇಡೀ ಮಹಾಭಾರತದ ಮಧ್ಯೆ ಗೀತೆ, ಗೀತೆಯ ಮಧ್ಯೆ ಒಂಬತ್ತನೆಯ ಅಧ್ಯಾಯ. ಅನೇಕ ಕಾರಣಗಳಿಂದ ಈ ಅಧ್ಯಾಯಕ್ಕೆ ಪಾವನತೆ ಬಂದಿದೆ. ಜ್ಞಾನೇಶ್ವರರು ಸಮಾಧಿ ಹೋಗುವಾಗ ಈ ಅಧ್ಯಾಯವನ್ನು ಜಪಿಸುತ್ತ ಪ್ರಾಣಬಿಟ್ಟರಂತೆ. ಈ ಅಧ್ಯಾಯದ ಸ್ಮರಣ ಮಾತ್ರದಿಂದಲೇ ನನ್ನ ಹೃದಯ ತುಂಬಿ ಬರುತ್ತದೆ. ಕಣ್ಣಿನಲ್ಲಿ ನೀರೂರುತ್ತದೆ. ವ್ಯಾಸರು ಮಾಡಿದುದು ಎಂಥ ಉಪಕಾರ! ಕೇವಲ ಭರತಖಂಡಕ್ಕೆ ಮಾತ್ರವಲ್ಲ—ಇಡೀ ಮಾನವಜಾತಿಗೇ ಇದೊಂದು ಮಹೋಪಕಾರ. ಭಗವಂತ ಅರ್ಜುನನಿಗೆ ಹೇಳಿದ ಅಪೂರ್ವ

ವಸ್ತುವನ್ನು ಶಬ್ದಗಳಿಂದ ವರ್ಣಿಸಲು ಅಸಾಧ್ಯವಾಗಿತ್ತು. ಆದರೆ ದಯಾ ಪ್ರೇರಿತರಾಗಿ ವ್ಯಾಸರು ಆ ವಸ್ತುವನ್ನು ಸಂಸ್ಕೃತದಲ್ಲಿ ಪ್ರಕಟಗೊಳಿಸಿದರು. ಗುಹ್ಯವಸ್ತುವಿಗೆ ವಾಣಿಯ ರೂಪ ಕೊಟ್ಟರು. ಈ ಅಧ್ಯಾಯದ ಆರಂಭ ದಲ್ಲೇ ಭಗವಂತ ಹೇಳಿದ್ದಾನೆ.

"ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಂ"

ಅಪೂರ್ವ ರಾಜವಿದ್ಯೆ ಇದು. ಇದು ಅನುಭವಿಸಬೇಕಾದುದು. ಭಗವಂತ ಅದಕ್ಕೆ 'ಪ್ರತ್ಯಕ್ಷಾವಗಮಂ' ಎಂದಿದಾನೆ. ಶಬ್ದಗಳಿಗೆ ಸಿಲುಕದ, ಪ್ರತ್ಯಕ್ಷ ಅನುಭವಕ್ಕೆ ಮಾತ್ರ ಸಿಲುಕುವ ವಿಷಯವನ್ನು ಈ ಅಧ್ಯಾಯದಲ್ಲಿ ಹೇಳಿದೆ. ಆದುದರಿಂದ ಅದಕ್ಕೊಂದು ಅಪೂರ್ವ ಸೌಂದರ್ಯ ಬಂದಿದೆ.

'ಸತ್ತನಂತರ ದೊರೆಯುವ ಸ್ವರ್ಗ, ಅದರ ಕತೆ ಇಲ್ಲೇತಕ್ಕೆ? ಸ್ವರ್ಗಕ್ಕೆ ಹೋಗುವರಾರು, ಯಮಪುರಕ್ಕೆ ಹೋಗುವರಾರು, ಯಾರು ಹೇಳಬಲ್ಲರು? ನಾಲ್ಕು ದಿನ ಇಲ್ಲಿರಬೇಕಾಗಿದೆ. ರಾಮನ ಗುಲಾಮ ನಾಗಿರುವುದರಲ್ಲಿಯೇ ನನಗೆ ಆನಂದ'—ಎಂದು ತುಲಸೀದಾಸರು ಹೇಳುತ್ತಾರೆ.* ರಾಮನ ಗುಲಾಮನಾಗಿರುವಲ್ಲಿ ದೊರೆಯುವ ಆನಂದವೇ ಈ ಅಧ್ಯಾಯದಲ್ಲಿದೆ. ಇದೇ ದೇಹದಲ್ಲಿ ಇದೇ ಕಣ್ಣಿನಿಂದ ಅನುಭವಿಸು ವಂಥ ಫಲ, ಜೀವಿಸಿರುವಾಗಲೇ ಅನುಭವಕ್ಕೆ ಬರುವ ವಿಷಯ, ಈ ಅಧ್ಯಾಯದಲ್ಲಿದೆ. ಬೆಲ್ಲ ತಿನ್ನುವಾಗ ಅದರ ಸವಿ ತಿಳಿಯುತ್ತದೆ. ಹಾಗೇ ರಾಮನ ಗುಲಾಮನಾಗಿರುವುದರ ಸವಿ ಇಲ್ಲಿದೆ. ಮರ್ತ್ಯಲೋಕದ ಬಾಳಿನೊಳಗಣ ಸವಿಯನ್ನು ಪ್ರತ್ಯಕ್ಷ ಅನುಭವಕ್ಕೆ ತಂದುಕೊಡುವ ರಾಜವಿದ್ಯೆ ಈ ಅಧ್ಯಾಯದಲ್ಲಿದೆ. ಈ ರಾಜವಿದ್ಯೆ ರಹಸ್ಯವಾದುದು. ಆದರೂ ಭಗವಂತ ಎಲ್ಲರಿಗಾಗಿ ಅದನ್ನು ಬಿಡಿಸಿ ಹೇಳಿದಾನೆ.

## ೪೨. ಸುಲಭ ಮಾರ್ಗ

ಗೀತೆ ಯಾವ ಧರ್ಮದ ಸಾರವಾಗಿದೆಯೊ, ಆ ಧರ್ಮಕ್ಕೆ ವೈದಿಕ ಧರ್ಮವೆನ್ನುತ್ತಾರೆ. ವೇದಗಳಿಂದ ಹುಟ್ಟಿದ ಧರ್ಮ ವೈದಿಕ ಧರ್ಮ.

---

* 'ಕೋ ಜಾನೇಕೋ ಜೈಹೇ ಜಮಪುರಕೋ ಸುರಪುರ ಪರಧಾಮಕೋ
ತುಲಸಿಹಿ ಬಹುತ ಭಲೋ ಲಾಗತ ಜಗಜೀವನ ರಾಮುಗುಲಾಮಕೋ'

ಜಗತ್ತಿನ ಅತಿ ಪ್ರಾಚೀನ ಸಾಹಿತ್ಯದಲ್ಲಿ ವೇದಗಳು ಅತಿಪ್ರಾಚೀನವೆಂದು ಒಪ್ಪುತ್ತಾರೆ. ಎಂತಲೇ ಭಾವುಕರು ಅದನ್ನು ಅನಾದಿಯೆನ್ನುತ್ತಾರೆ. ಅಂತೇ ಪೂಜ್ಯವೆಂದು ತಿಳಿಯುತ್ತಾರೆ. ಇತಿಹಾಸದ ದೃಷ್ಟಿಯಿಂದಲೂ ವೇದ ನಮ್ಮ ಸಮಾಜದ ಪ್ರಾಚೀನ ಭಾವನೆಗಳ ಅತಿ ಹಳೆಯ ಚಿಹ್ನೆ. ತಾಮ್ರಪಟ, ಶಿಲಾಲಿಪಿ, ನಾಣ್ಯ, ಪಾತ್ರೆ, ಪ್ರಾಣಿಗಳ ಅವಶೇಷಗಳಿಗಿಂತಲೂ ಈ ಲಿಖಿತ ಸಾಧನ ಅತಿ ಮಹತ್ವದ್ದು. ಮೊದಲನೆ ಐತಿಹಾಸಿಕ ಆಧಾರ ವೆಂದರೆ ವೇದ. ಈ ವೇದದಲ್ಲಿ ಬೀಜರೂಪದಲ್ಲಿದ್ದ ಧರ್ಮ, ಗಿಡವಾಗಿ ಬೆಳೆದು ಕೊನೆಗೆ ಗೀತೆಯು ಮಧುರ ಫಲ ಕೊಟ್ಟಿತು. ಹಣ್ಣನ್ನು ಬಿಟ್ಟರೆ ನಾವು ಗಿಡದಲ್ಲಿ ತಿನ್ನುವುದಿನ್ನೇನು? ಗಿಡಕ್ಕೆ ಹಣ್ಣು ಬಿಟ್ಟಾಗ ಮಾತ್ರ ಅದು ತಿನ್ನಲು ದೊರಕೀತು. ವೇದಧರ್ಮದ ಸಾರದ ಸಾರ ಎಂದರೇನೆ ಗೀತೆ.

ಪ್ರಾಚೀನಕಾಲದಿಂದ ರೂಢವಾಗಿದ್ದ ಈ ವೇದಧರ್ಮದಲ್ಲಿ ಅನೇಕ ಯಜ್ಞಯಾಗ, ಕ್ರಿಯಾಕಲಾಪ, ತಪಶ್ಚರ್ಯೆ, ನಾನಾ ಸಾಧನೆಗಳನ್ನು ಕುರಿತು ಹೇಳಿದೆ. ಈ ಎಲ್ಲ ಕರ್ಮಕಾಂಡ ನಿರುಪಯುಕ್ತವಾಗಿರದಿದ್ದರೂ ಅವುಗಳಿಗೆ ಅಧಿಕಾರದ ಅಗತ್ಯವಿತ್ತು. ಎಲ್ಲರ ಕೈಗೂ ಅವು ಎಟಕುವಂತಿರ ಲಿಲ್ಲ. ಎತ್ತರವಾದ ಗಿಡದ ಮೇಲಿರುವ ತೆಂಗಿನಕಾಯಿಯನ್ನು ಹತ್ತಿ ತೆಗೆಯುವವರಾರು? ಅದರ ಸಿಪ್ಪೆ ಸುಲಿಯುವವರಾರು? ಒಡೆಯುವವ ರಾರು? ನಮಗೇನೋ ವಿಶೇಷ ಹಸಿವು ಆದರೂ ಆ ಗಿಡದ ಮೇಲಿನ ಕಾಯಿ ಹೇಗೆ ಸಿಕ್ಕಬೇಕು? ಕೆಳಗಿನಿಂದ ನಾನು ತೆಂಗಿನಕಾಯಿಯ ಕಡೆ ನೋಡುತ್ತೇನೆ. ಮೇಲಿನಿಂದ ಅದು ನನ್ನನ್ನು ನೋಡುತ್ತದೆ. ಇಷ್ಟರಿಂದ ಹೊಟ್ಟೆಯಲ್ಲಿನ ಉರಿ ಶಾಂತವಾಗುವುದುಂಟೆ? ಆ ತೆಂಗಿನಕಾಯಿಗೂ ನನಗೂ ಪ್ರತ್ಯಕ್ಷ ಭೇಟಿಯಾಗುವ ತನಕ ಎಲ್ಲಾ ವ್ಯರ್ಥ. ಈ ವೇದ ಗಳಲ್ಲಿನ ನಾನಾ ಕ್ರಿಯೆಗಳಲ್ಲಿ ಅತ್ಯಂತ ಸೂಕ್ಷ್ಮವಿಚಾರಗಳಿರಬಹುದು. ಸಾಮಾನ್ಯಜನಕ್ಕೆ ಅವು ತಿಳಿಯುವುದು ಹೇಗೆ? ವೇದಮಾರ್ಗವನ್ನು ಬಿಟ್ಟರೆ ಮೋಕ್ಷವಿಲ್ಲ. ಆದರೆ ವೇದಕ್ಕೆ ತಕ್ಕ ಅಧಿಕಾರವಿಲ್ಲ ಮುಂದೇನು? ಎಂತಲೇ ದಯಾಳು ಶರಣರು ಮುಂದೆ ಬಂದು ' ಈ ವೇದಗಳನ್ನು ಕಡೆದು ರಸ ತೆಗೆಯೋಣ. ಸ್ವಲ್ಪದರಲ್ಲಿ ಅವುಗಳ ಸಾರವನ್ನು ತೆಗೆದು ಜಗತ್ತಿಗೆ ಹಂಚೋಣ ' ಎಂದರು. ತುಕಾರಾಮ ಮಹಾರಾಜರು ಹೇಳುತ್ತಾರೆ:

"ವೇದ ಅನಂತ ಹೇಳಿತು. ಅರ್ಥ ಇಷ್ಟೆ ಹೊಳೆಯಿತು"*

ಯಾವ ಅರ್ಥ ಅದು? ಹರಿನಾಮ. ಇದೇ ವೇದಗಳ ಸಾರ. ರಾಮ ನಾಮದಿಂದ ಮೋಕ್ಷ. ಹೆಂಗಸರು, ಮಕ್ಕಳು, ಶೂದ್ರರು, ಅಜ್ಞಾನಿಗಳು ದುರ್ಬಲರು, ರೋಗಿಗಳು, ಅಂಗಹೀನರು—ಎಲ್ಲರಿಗೂ ಮೋಕ್ಷ ಸಾಧ್ಯ ವಾಯಿತು. ವೇದಗಳಲ್ಲಿ ಅಡಗಿದ ಮೋಕ್ಷವನ್ನು ಭಗವಂತ ರಾಜ ಮಾರ್ಗದ ಮೇಲೆ ತಂದಿರಿಸಿದ. ಮೋಕ್ಷಕ್ಕೆ ಸಾದಾ ಸುಲಭೋಪಾಯ. ಸಾದಾ ಬದುಕು, ಸ್ವಧರ್ಮ ಕರ್ಮ, ಸೇವಾಕರ್ಮಗಳನ್ನೆ ಯಜ್ಞಮಯ ಮಾಡಲಾಗದೆ? ಬೇರೆ ಯಜ್ಞ ಯಾಗಗಳೇಕೆ? ನಿತ್ಯದ ಸೇವಾಕರ್ಮವೇ ಯಜ್ಞರೂಪವಾಗಲಿ. ಅದೇ ರಾಜಮಾರ್ಗ.

ಯಾನಾಸ್ಥಾಯ ನರೋ ರಾಜನ್ ನ ಪ್ರಮಾದ್ಯೇತ ಕರ್ಹಿಚಿತ್ ।
ಧಾವನ್ನಿಮೀಲ್ಯ ವಾ ನೇತ್ರೇ ನ ಸ್ಖಲೇನ್ನ ಪತೇದಿಹ ॥

ಈ ದಾರಿಗುಂಟ ಕಣ್ಣು ಮುಚ್ಚಿ ಹೊರಟರೂ ಬೀಳಲಾರ. ಎರಡನೆ ದಾರಿ 'ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ' ಎಂದಿದೆ. ಕತ್ತಿಯ ಧಾರೆ ಯಂತೆ ವೈದಿಕ ಮಾರ್ಗ ಬಿಕ್ಕಟ್ಟಾದುದು. ರಾಮನ ಸೇವಕನಾಗಿರುವುದು ಸುಲಭ. ಮೆಲ್ಲಮೆಲ್ಲನೆ ಎತ್ತರವನ್ನೇರಿಸುತ್ತ ರಸ್ತೆಯನ್ನು ಮೇಲಕ್ಕೊಯ್ದು, ಇಂಜಿನಿಯರು ನಮ್ಮನ್ನು ಶಿಖರಕ್ಕೆ ತಲಪಿಸುತ್ತಾನೆ. ನಾವು ಅಷ್ಟೊಂದು ಎತ್ತರಕ್ಕೇರುತ್ತಿದೇವೆಂಬುದೂ ತಿಳಿದುಬರುವುದಿಲ್ಲ. ಆ ಇಂಜಿನಿಯರನ ಆ ಕೌಶಲದ ಹಾಗೇ ಈ ರಾಜಮಾರ್ಗದ ವಿಚಾರ. ಈ ದಾರಿಯ ಮೂಲಕ ಸಾಧಾರಣ ಕರ್ಮದಿಂದಲೇ ಪರಮಾತ್ಮನನ್ನೊಲಿಸಿಕೊಳ್ಳ ಬಹುದು.

ಎಲ್ಲಿಯಾದರೂ ಅವಿತುಕೊಂಡಿದಾನೆಯೇ ಈ ಪರಮೇಶ್ವರ? ಗಿರಿ ಕಂದರದಲ್ಲಿ, ನದಿಯಲ್ಲಿ, ಇಲ್ಲವೆ ಸ್ವರ್ಗದಲ್ಲಿ—ಎಲ್ಲಾದರೂ ಅಡಗಿ ಕುಳಿತಿದಾನೆಯೆ? ವಜ್ರ ರತ್ನ ಬೆಳ್ಳಿ ಬಂಗಾರ ಪೃಥ್ವಿಯ ಗರ್ಭದಲ್ಲಿ ಅಡಗಿರುತ್ತವೆ. ಮುತ್ತು ಹವಳ ಸಮುದ್ರದಲ್ಲಿ ಅವಿತಿರುತ್ತದೆ. ಹೀಗೆ ಈ ಪರಮೇಶ್ವರರೂಪದ ರತ್ನ ಎಲ್ಲಾದರೂ ಅಡಗಿದೆಯೇ? ಎಲ್ಲಾದರೂ

---

* ವೇದ ಅನಂತ ಬೋಲಲಾ । ಅರ್ಥ ಇತುಕಾ ಚಿ ಸಾಧಲಾ ॥

ಅಗೆದು ಪರಮೇಶ್ವರನನ್ನು ತೆಗೆಯಬೇಕಾಗಿದೆಯೆ? ಇದಿರಿನಲ್ಲೇ ಇದಾನೆ ದೇವರು! ಎಲ್ಲೆಲ್ಲೂ ನಿಂತಿದಾನೆ. ಈ ಅಖಿಲ ಜಗತ್ತೆಲ್ಲ ದೇವರದೇ ಮೂರ್ತಿ. ಈ ಎಲ್ಲಾ ಜನರೂ ದೇವರ ಮೂರ್ತಿಯೇ. ಭಗವಂತ ಹೇಳುತ್ತಾನೆ—'ಈ ಮಾನವ ರೂಪದಿಂದ ಪ್ರಕಟವಾದ ಹರಿಮೂರ್ತಿಯ ಅವಮಾನ ಮಾಡಬೇಡವೋ!' ಈ ಚರಾಚರದಲ್ಲೆಲಾ ಈಶ್ವರನೆ ಪ್ರಕಟ ವಾಗಿದಾನೆ. ಆತನನ್ನು ಶೋಧಿಸಲು ಕೃತ್ರಿಮ ಉಪಾಯವೇಕೆ? ತೀರ ಸುಲಭೋಪಾಯವೊಂದಿದೆ. ನೀವು ಮಾಡುವ ಸೇವೆಗೆ ರಾಮನನ್ನು ಜೋಡಿಸಿದರೆ ಸಾಕು. ರಾಮನ ಸೇವಕರಾಗಿ. ಆ ಕಠಿಣ ವೇದ ಮಾರ್ಗ, ಆ ಯಜ್ಞ, ಆ ಸ್ವಾಹಾ, ಆ ಸ್ವಧಾ, ಆ ಶ್ರಾದ್ಧ, ಆ ತರ್ಪಣ— ಎಲ್ಲವೂ ಮೋಕ್ಷಕ್ಕೆ ಸಾಗಿಸಿಕೊಂಡೊಯ್ದೀತು. ಅಧಿಕಾರಿ, ಅನಧಿಕಾರಿ ಎಂಬ ಗೊಂದಲ ಮಾತ್ರ ಇದ್ದದ್ದೇ. ನಿಮಗದು ಬೇಡವೇ ಬೇಡ. ನೀವು ಮಾಡುವುದೆಲ್ಲ ಪರಮೇಶ್ವರನಿಗರ್ಪಿತವಾಗಲಿ. ನಿಮ್ಮ ಪ್ರತಿಯೊಂದು ಕೃತಿಗೂ ಅವನ ಸಂಬಂಧವಿರಲಿ. ಒಂಬತ್ತನೆ ಅಧ್ಯಾಯದ ಹೇಳಿಕೆ ಇದು. ಎಂತಲೇ ಅದು ಭಕ್ತರಿಗೆ ತುಂಬಾ ಪ್ರಿಯ.

## ೪೩. ಅಧಿಕಾರ ಭೇದದ ಗೊಂದಲವಿಲ್ಲ

ಕೃಷ್ಣನ ಬಾಳಿನಲ್ಲೆಲ್ಲ ಅತ್ಯಂತ ಮಧುರ ಅವನ ಬಾಲ್ಯ. ವಿಶೇಷ ಉಪಾಸನೆ ಬಾಲಕೃಷ್ಣನದೇ. ದನಗಾಹಿಗಳೊಂದಿಗೆ ಆತ ದನ ಕಾಯಲು ಹೋಗುತ್ತಿದ್ದ. ಅವರೊಂದಿಗೆ ಊಟ ಮಾಡುತ್ತಿದ್ದ. ನಗುತ್ತಿದ್ದ, ನಲಿಯುತ್ತಿದ್ದ. ಗೋವಳರು ಇಂದ್ರನ ಪೂಜೆಗೆ ಹೊರಟಾಗ ಆತ 'ಇಂದ್ರನನ್ನು ನೋಡಿದೀರಾ ಯಾರಾದರೂ? ಅವನದೇನು ಬಂತು ಉಪಕಾರ? ಎದುರಿಗೆ ಕಾಣುತ್ತಿರುವ ಈ ಗೋವರ್ಧನ ಪರ್ವತದಲ್ಲಿ ಆಕಳು ಮೇಯುತ್ತವೆ. ಅಲ್ಲಿಂದಲೇ ಹೊಳೆ ಹರಿಯುತ್ತದೆ. ಅದನ್ನು ಪೂಜಿಸಿ' ಎಂದು ಬೋಧಿಸುತ್ತಿದ್ದ. ಜೊತೆಗೆ ಆಡಿದ ಗೋಪಾಲಕರಿಗೆ, ಮಾತನಾಡಿದ ಗೋಪಿಯರಿಗೆ, ಆತ ಮೋಕ್ಷದ ದಾರಿ ತೆಗೆದು ತೋರಿಸಿದ. ಕೃಷ್ಣಪರಮಾತ್ಮ ಅನುಭವದಿಂದ ತೋರಿಸಿದ. ಸರಳ ಮಾರ್ಗ ಇದು. ಬಾಲ್ಯದಲ್ಲಿ ಅವನಿಗೆ ಹಸುಗಳ ಸಹವಾಸ. ಪ್ರೌಢವಯಸ್ಸಿನಲ್ಲಿ ಕುದುರೆಗಳ

ಸಂಬಂಧ. ಮುರಲೀನಾದ ಕೇಳಿಸುತ್ತಲೂ ಹಸುಗಳು ಮೈ ಮರೆಯು ತ್ತಿದ್ದವು. ತಮ್ಮ ಬೆನ್ನ ಮೇಲೆ ಕೃಷ್ಣನ ಕೈ ಬೀಳುತ್ತಲೂ ಕುದುರೆಗಳಿಗೆ ಸ್ಫೂರ್ತಿ. ಆ ಹಸು, ಆ ಕುದುರೆ ಎಲ್ಲವೂ ಕೃಷ್ಣಮಯವಾಗುತ್ತಿದ್ದವು. 'ಪಾಪಯೋನಿ' ಎನ್ನುವ ಆ ಪಶುಗಳಿಗೂ ಮೋಕ್ಷ ಬರುತ್ತಿತ್ತು. ಮನುಷ್ಯನಿಗೆ ಮಾತ್ರವಲ್ಲ; ಪಶುಪಕ್ಷಿಗಳಿಗೂ ಮೋಕ್ಷದ ಅಧಿಕಾರ ವಿದೆಯೆಂಬುದನ್ನು ಶ್ರೀ ಕೃಷ್ಣ ಸ್ಪಷ್ಟಗೊಳಿಸಿದಾನೆ. ತನ್ನ ಬಾಳಿನಲ್ಲಿ ಆತ ಅದನ್ನನುಭವಿಸಿದ.

ಭಗವಂತನ ಅನುಭವ ಹೇಗೋ ಹಾಗೇ ವ್ಯಾಸರದೂ. ಇಬ್ಬರದೂ ಏಕರೂಪ. ಇಬ್ಬರ ಬಾಳಿನ ಸಾರವೂ ಒಂದೇ. ವಿದ್ವತ್ತು, ಕರ್ಮ ಕಲಾಪ, ಇವನ್ನವಲಂಬಿಸಿಲ್ಲ ಮೋಕ್ಷ. ಆದಕ್ಕೆ ಸಾದಾ, ಸರಳ ಭಕ್ತಿ ಸಾಕು. ಮುಗ್ಧ ಭಾವಿಕ ಸ್ತ್ರೀಯರು ನಾ ತಾ ಎನ್ನುವ ಜ್ಞಾನಿಗಳನ್ನು ಮೀರಿಸಿ ಮುಂದೆ ಹೋಗಿದ್ದಾರೆ. ಪವಿತ್ರ ಮನಸ್ಸು, ಮುಗ್ಧ ಶುದ್ಧಭಾವ; ಇಷ್ಟಾದರೆ ಮೋಕ್ಷ ಏನೂ ಕಷ್ಟವಲ್ಲ. ಮಹಾಭಾರತದಲ್ಲಿ ಜನಕ ಸುಲಭಾ ಸಂವಾದ ಎಂಬ ಪ್ರಕರಣವಿದೆ. ಜ್ಞಾನಕ್ಕಾಗಿ ಜನಕರಾಜ ಒಬ್ಬ ಸ್ತ್ರೀಯ ಬಳಿ ಹೋದ ಪ್ರಸಂಗವನ್ನು ವ್ಯಾಸರು ಚಿತ್ರಿಸಿದಾರೆ. ಸ್ತ್ರೀಯರಿಗೆ ವೇದಗಳ ಅಧಿಕಾರವುಂಟೋ ಇಲ್ಲವೋ ಎಂದು ನೀವು ಚರ್ಚಿಸುತ್ತ ಕೂತಿರಿ. ಮಹಾಭಾರತದಲ್ಲಿನ ಸುಲಭಾ ಪ್ರತ್ಯಕ್ಷವಾಗಿ ಜನಕನಿಗೆ ಬ್ರಹ್ಮವಿದ್ಯೆ ಹೇಳಿಕೊಡುತ್ತಿದಾಳೆ. ಸಾಧಾರಣ ಸ್ತ್ರೀ ಆಕೆ. ಜನಕನೋ ಸಮ್ರಾಟ್, ವಿದ್ಯಾಸಂಪನ್ನ. ಆದರೂ ಮಹಾಜ್ಞಾನಿ. ಜನಕನ ಬಳಿ ಮೋಕ್ಷವಿಲ್ಲ. ಅದಕ್ಕಾಗಿ ಆತನನ್ನು ಸುಲಭೆಯ ಕಾಲುಹಿಡಿಯಲು ಹಚ್ಚಿದಾರೆ ವ್ಯಾಸರು. ಆ ತುಲಾಧಾರ ವೈಶ್ಯನೂ ಹಾಗೇ. ಜಾಜಲಿ ಬ್ರಾಹ್ಮಣ ಆತನ ಹತ್ತಿರ ಜ್ಞಾನಕ್ಕಾಗಿ ಬರುತ್ತಾನೆ. 'ದಂಡಿಗೆಯನ್ನು ಸರಳವಾಗಿಡುವುದರಲೆ ನನ್ನ ಜ್ಞಾನವೆಲ್ಲಾ' ಎನ್ನುತ್ತಾನೆ ತುಲಾಧಾರ. ಆ ಬೇಡನ ಕತೆಯೂ ಹೀಗೇ. ಆತ ಕಟುಕ. ಪಶುಗಳನ್ನು ಕಡಿದು ಸಮಾಜಸೇವೆ ಮಾಡುತ್ತಿದ್ದ. ಅಹಂಕಾರಿಯಾದ ತಪಸ್ವಿಯೊಬ್ಬನನ್ನು ಅವನ ಗುರು ಈ ಬೇಡನ ಕಡೆ ಕಳುಹಿಸಿದ. ಕಟುಕನೇನು ಜ್ಞಾನ ಕೊಟ್ಟಾನು? ಬ್ರಾಹ್ಮಣನಿಗೆ ಆಶ್ಚರ್ಯ. ಆತ ಬೇಡನ ಬಳಿ ಬಂದ. ಬೇಡನೇನು ಮಾಡುತ್ತಿದ್ದ? ಮಾಂಸವನ್ನು

ಕತ್ತರಿಸುತ್ತಿದ್ದ, ತೊಳೆಯುತ್ತಿದ್ದ, ಒರೆಸಿ ಮಾರಾಟಕ್ಕಿಡುತ್ತಿದ್ದ. 'ನನ್ನ ಈ ಕರ್ಮವನ್ನು ಸಾಧ್ಯವಿದ್ದಮಟ್ಟಿಗೂ ಧರ್ಮಮಯಮಾಡಲು ಯತ್ನಿಸುತ್ತೇನೆ ಸಾಧ್ಯವಾದಮಟ್ಟಿಗೂ ನನ್ನ ಆತ್ಮವನ್ನು ಈ ಕರ್ಮದಲ್ಲಿ ತೊಡಗಿಸಿ ತಂದೆತಾಯಿಗಳ ಸೇವೆ ಮಾಡುತ್ತೇನೆ' ಎಂದು ಆ ಬೇಡ ಬ್ರಾಹ್ಮಣನಿಗೆ ಹೇಳಿದ. ಈ ಬೇಡನ ರೂಪದಲ್ಲಿ ವ್ಯಾಸರು ಆದರ್ಶ ಮೂರ್ತಿಯೊಂದನ್ನು ನಿಲ್ಲಿಸಿದಾರೆ.

ಎಲ್ಲರಿಗೂ ಮೋಕ್ಷ ತೆರೆದಿದೆಯೆಂಬುದು ಸ್ಪಷ್ಟವಾಗಲೆಂದೇ ಮಹಾಭಾರತದಲ್ಲಿ ಈ ಸ್ತ್ರೀಯರ, ವೈಶ್ಯರ, ಶೂದ್ರರ ಕತೆ ಬಂದಿರುವುದು. ಆ ಕತೆಯ ತತ್ವವನ್ನು ಈ ಒಂಬತ್ತನೆ ಅಧ್ಯಾಯದಲ್ಲಿ ಹೇಳಿದೆ. ಅದರ ಮೇಲೆ ಮುದ್ರೆ ಬಿದ್ದಿದೆ ಇಲ್ಲಿ. ರಾಮನ ಸೇವಕನಾಗಿರುವಲ್ಲಿ ಇರುವ ಆನಂದವೇ ಆ ಬೇಡನ ಬಾಳಿನಲ್ಲಿ ಇದೆ. ತುಕಾರಾಮ ಮಹಾರಾಜರು ಅಹಿಂಸಕರು. ಆದರೂ ಕಟುಕ ಸಜನ ಕಟುಕನ ಕೆಲಸ ಮಾಡಿಯೂ ಮೋಕ್ಷ ಸಂಪಾದಿಸಿದುದನ್ನು ಅವರು ತುಂಬಾ ಕೌತುಕದಿಂದ ವರ್ಣಿಸಿದಾರೆ. 'ಪಶುಗಳ ಕೊಲೆ ಮಾಡುವವರಿಗೆ ಏನು ಗತಿ?' ಎಂಬುದನ್ನು ಅವರೇ ಬೇರೆ ಕಡೆ ಹೇಳಿದಾರೆ. ಆದರೂ—

"ಸಜನ ಕಟುಕ ಮಾರಿದ ಮಾಂಸ"*

ಎಂಬ ಚರಣ ಬರೆದು ಸಜನ ಕಟುಕ ಭಗವಂತನಿಗೆ ನೆರವಾಗುವನೆಂದು ವರ್ಣಿಸಿದಾರೆ. ನರಸೀ ಮೆಹತಾನ ಹುಂಡಿ ನಡಸಿಕೊಡುವ, ನಾಥರಿಗೆ ಕಾವಡಿ ಹೊತ್ತು ತರುತ್ತಿದ್ದ, ದಾಮಾಜಿಗಾಗಿ ಹೊಲೆಯವನಾಗುವ, ಮಹಾರಾಷ್ಟ್ರದ ಮೆಚ್ಚಿನ ಜನಾಬಾಯಿಗೆ ಬೀಸುವುದರಲ್ಲಿ ಕುಟ್ಟುವುದರಲ್ಲಿ ನೆರವಾಗುವ ಭಗವಂತ, ಸಜನ ಕಟುಕನಿಗೂ ಸಹ ಅಂಥ ಪ್ರೇಮದಿಂದಲೇ ಸಹಾಯ ಮಾಡುತ್ತಿದ್ದನೆಂದು ತುಕಾರಾಮರು ಹೇಳಿದಾರೆ. ಸಾರಾಂಶ ವಿಷ್ಟೆ: ಎಲ್ಲ ಕೃತ್ಯಗಳಿಗೂ ಪರಮೇಶ್ವರನ ಸಂಬಂಧವನ್ನು ಜೋಡಿಸಬೇಕು. ಸ್ವಚ್ಛವೂ ಪವಿತ್ರವೂ ಸೇವಾಮಯವೂ ಆಗಿದ್ದರೆ ಆಯಿತು. ಆ ಕರ್ಮ ಯಜ್ಞರೂಪಿಯೆ.

---

* ಸಜನ ಕಸಾಯಾ ವಿಕೊಂಲಾಗೇ ಮಾಂಸ.

## ೪೪. ಕರ್ಮಫಲ ದೇವರಿಗೆ ನೈವೇದ್ಯ

ಒಂಬತ್ತನೆ ಅಧ್ಯಾಯದಲ್ಲಿ ಇದೇ ವಿಶೇಷ ವಿಚಾರವಿದೆ. ಕರ್ಮಯೋಗ, ಭಕ್ತಿಯೋಗಗಳ ಮಧುರ ಮಿಲನ. ಕರ್ಮಮಾಡಿಯೂ ಫಲದ ತ್ಯಾಗಮಾಡುವುದು ಕರ್ಮಯೋಗ. ಫಲದ ವಾಸನೆಯಿಲ್ಲದಂತೆ ಕೌಶಲದಿಂದ ಕರ್ಮ ಮಾಡಬೇಕು. ಇದು ಅಖರೋಡ್ ಗಿಡ ನೆಟ್ಟಂತೆ. ೨೫ ವರ್ಷದ ಮೇಲೆ ಅದು ಹಣ್ಣು ಬಿಡುತ್ತದೆ. ನಮ್ಮ ಜೀವನದಲ್ಲಿ ಆ ಹಣ್ಣು ಸಿಗದೆಯೆ ಹೋದೀತು. ಆದರೂ ಗಿಡ ನೆಡು—ಅಕ್ಕರೆಯಿಂದ ನೀರೆರೆ, ಗಿಡ ನೆಡು, ಹಣ್ಣಿನಾಸೆ ಬಿಡು—ಇದು ಕರ್ಮಯೋಗ. ಭಕ್ತಿಯೋಗವೆಂದರೇನು? ಭಾವಪೂರ್ವಕ ಈಶ್ವರನೊಂದಿಗೆ ಒಂದುಗೂಡುವುದು ಭಕ್ತಿ. ಕರ್ಮಯೋಗ, ಭಕ್ತಿಯೋಗಗಳು ಒಂದೆಡೆ ಸೇರುವುದು ರಾಜಯೋಗದಲ್ಲಿ. ಈ ರಾಜಯೋಗಕ್ಕೆ ಅನೇಕರು ಅನೇಕ ರೀತಿ ವ್ಯಾಖ್ಯೆ ಮಾಡಿದಾರೆ. ಕರ್ಮಯೋಗ, ಭಕ್ತಿಯೋಗಗಳ ಮಧುರ ಮಿಶ್ರಣವೇ ರಾಜಯೋಗ. ಇದು ನನ್ನ ವ್ಯಾಖ್ಯೆ.

ಕರ್ಮಮಾಡಿದರೆ ಬಂದ ಫಲವನ್ನು ಎಸೆಯುವಂತಿಲ್ಲ. ಅದನ್ನು ದೇವರಿಗರ್ಪಿಸುವುದು. ಫಲವನ್ನು ಎಸೆದುಬಿಡಿ ಎಂದರೆ ಅದನ್ನು ನಿಷೇಧಿಸಿದಂತಾಯಿತು. ಅರ್ಪಣದಲ್ಲಿ ಹಾಗಾಗದು. ಈ ವ್ಯವಸ್ಥೆ ಅತಿ ಸುಂದರವಾದುದು. ಅದರಲ್ಲಿನ ಸೋಗು ಅಪೂರ್ವವಾದುದು. ಫಲವನ್ನು ತ್ಯಜಿಸಬೇಕು ಎಂದರೆ ಅದನ್ನು ತೆಗೆದುಕೊಳ್ಳುವವರಾರೂ ಇಲ್ಲ ಎಂದು ಅರ್ಥವಲ್ಲ. ಯಾರಾದರೂ ಅದನ್ನು ತೆಗೆದುಕೊಳ್ಳತಕ್ಕವರೇ. ಅಂಥವರು ಯೋಗ್ಯರೊ, ಅಯೋಗ್ಯರೊ ಎಂಬ ಪ್ರಶ್ನೆ ಬರಬಹುದು. ಯಾರೋ ಭಿಕ್ಷುಕನನ್ನು ಕಂಡರೆ 'ಏನಯ್ಯಾ, ಇಷ್ಟು ಧಾಂಡಿಗನಾಗಿ ಭಿಕ್ಷೆಬೇಡಲು ನಿನಗೇನು ಕೇಡು? ಹೋಗು' ಎನ್ನುತ್ತೇವೆ. ಆತ ಭಿಕ್ಷೆ ಬೇಡುವುದು ಯೋಗ್ಯವಾದುದೋ ಹೇಗೆ ಎಂದು ಯೋಚಿಸುತ್ತೇವೆ. ಆ ಬಡಪಾಯಿ ನಾಚಿಕೆಯಿಂದ ಹೊರಟುಹೋಗುತ್ತಾನೆ. ನಮ್ಮಲ್ಲಿ ಸಹಾನುಭೂತಿಗೆ ಪೂರ್ಣ ಅಭಾವ. ಆ ಭಿಕ್ಷುಕನ ಯೋಗ್ಯತೆ ನಮಗೇನು ತಿಳಿದೀತು? ಚಿಕ್ಕವನಾಗಿದ್ದಾಗ ತಾಯಿಯ ಬಳಿ ಇಂಥ ಶಂಕೆಯನ್ನೆ ನಾನು ತೋರಿಸಿದ್ದೆ, ಆಕೆಯ ಉತ್ತರವಿನ್ನೂ ನನ್ನ ಕಿವಿಯಲ್ಲಿ ದುಮುದುಮಿಸುತ್ತಿದೆ.

"ಈ ಭಿಕಾರಿ ನೋಡಲು ಗಟ್ಟಿಮುಟ್ಟಾಗಿದಾನೆ. ಈತನಿಗೆ ಭಿಕ್ಷೆ ನೀಡಿದರೆ ಅವನ ಚಟ, ಸೋಮಾರಿತನ ಹೆಚ್ಚೀತು" ಎಂದು ನಾ ಹೇಳಿದ್ದೆ. ಗೀತೆಯಲ್ಲಿನ 'ದೇಶೇ ಕಾಲೇಚ ಪಾತ್ರೇಚ' ಎಂಬ ಶ್ಲೋಕವನ್ನು ಅಂದು ತೋರಿಸಿದ್ದೆ. ಅದಕ್ಕೆ ತಾಯಿ "ಈಗ ಭಿಕ್ಷೆಗೆ ಬಂದವನು ಪರಮಾತ್ಮ. ಇನ್ನು ಪಾತ್ರಾಪಾತ್ರತೆಯ ವಿಚಾರ ಮಾಡು. ಭಗವಂತನು ಅಪಾತ್ರನೆ? ಪಾತ್ರಾಪಾತ್ರತೆಯ ವಿಚಾರಮಾಡಲು ನಿನಗಾಗಲಿ ನನಗಾಗಲಿ ಏನು ಅಧಿಕಾರ? ಹೆಚ್ಚು ವಿಚಾರ ಮಾಡುವ ಅಗತ್ಯವೇ ನನಗಿಲ್ಲ. ನನಗೆ ಆತನೇ ಭಗವಂತ" ಎಂದರು. ಆಕೆಯ ಆ ಉತ್ತರಕ್ಕಿಂತ ಸರಿಯಾದ ಉತ್ತರ ನನಗಿನ್ನೂ ದೊರೆತಿಲ್ಲ.

ಇನ್ನೊಬ್ಬನಿಗೆ ಊಟ ಹಾಕುವಾಗ ಆತನ ಪಾತ್ರಾಪಾತ್ರತೆಯ ವಿಚಾರ ಬರುತ್ತದೆ. ನನ್ನ ಗಂಟಲಲ್ಲಿ ಅನ್ನ ತುರುಕಿಕೊಳ್ಳುವಾಗ ನನಗಾದರೂ ಅಧಿಕಾರವುಂಟೇ ಎಂಬ ವಿಚಾರ ಏಕೆ ಬರುವುದಿಲ್ಲ? ನಮ್ಮ ಬಾಗಿಲಿಗೆ ಬಂದಾತ ಅಭದ್ರ ಭಿಕಾರಿ ಎಂದು ತಿಳಿಯುವುದೇಕೆ? ನಾವು ಯಾರಿಗೆ ಕೊಡುತ್ತೇವೋ ಆತನನ್ನು ದೇವರೆಂದೇ ತಿಳಿಯಬೇಕು. "ನಿನ್ನ ಕರ್ಮದ ಫಲವನ್ನು ಯಾರಾದರೂ ಉಣ್ಣಲೇಬೇಕಲ್ಲವೇ. ಮೊದಲೇ ಅದನ್ನು ದೇವರಿಗೆ ಅರ್ಪಿಸಿಬಿಡು" ಎಂದು ಹೇಳುವುದು ರಾಜಯೋಗ. ಅದು ಒಳ್ಳೆಯ ಸ್ಥಳ ತೋರಿಸುತ್ತದೆ. ಫಲವನ್ನು ತ್ಯಜಿಸುವ ನಿಷೇಧಾತ್ಮಕ ಕರ್ಮವೂ ಇಲ್ಲಿ ಇಲ್ಲ. ಭಗವಂತನಿಗೆ ಅರ್ಪಣೆಯಾಗುವುದರಿಂದ ಪಾತ್ರಾಪಾತ್ರತೆಯ ಪ್ರಶ್ನೆಯೂ ಇಲ್ಲ. ಭಗವಂತನಿಗೆ ಕೊಟ್ಟ ದಾನ ಸರ್ವದಾ ಶುದ್ಧವೆ. ನಿನ್ನ ಕರ್ಮದಲ್ಲಿ ದೋಷವಿದ್ದರೂ ಸಹ ಅದು ಆತನ ಕೈಗೆ ಹೋಗುತ್ತಲೆ ಪವಿತ್ರವಾಗುತ್ತದೆ. ದೋಷವನ್ನು ದೂರಗೊಳಿಸಲು ನಾವು ಎಷ್ಟೇ ಪ್ರಯತ್ನಿಸಲಿ ಅದು ಉಳಿಯುತ್ತದೆ. ಆದರೂ ಸಾಧ್ಯವಿದ್ದ ಮಟ್ಟಿಗೂ ಶುದ್ಧವಾಗಿ ಕರ್ಮ ಮಾಡಬೇಕು. ಬುದ್ಧಿ ಪರಮಾತ್ಮ ಕೊಟ್ಟ ಬಳುವಳಿ. ಅದನ್ನು ಸಾಧ್ಯವಿದ್ದಮಟ್ಟಿಗೂ ಶುದ್ಧವಾಗಿ ಉಪಯೋಗಿಸುವುದು ನಮ್ಮ ಕರ್ತವ್ಯ. ಅದಕ್ಕೆ ತಪ್ಪಿ ನಡೆದರೆ ಅಪರಾಧವಾದೀತು. ಅಂತೇ ಪಾತ್ರಾಪಾತ್ರ ವಿವೇಕ ಅಗತ್ಯ. ಭಗವತ್ಸ್ವರೂಪ ಎಂದರೆ ಆ ವಿವೇಕ ಸುಲಭವಾದೀತು.

ಫಲದ ವಿನಿಯೋಗ, ಚಿತ್ತಶುದ್ಧಿಗೆ ದಾರಿಯಾಗಬೇಕು. ಯಾವ ಕಾರ್ಯ ಹೇಗೆ ಆಗುತ್ತದೋ ಹಾಗೇ ಅದನ್ನು ಭಗವಂತನಿಗೆ ನೀಡು, ಪ್ರತ್ಯಕ್ಷ ಕ್ರಿಯೆ ನಡೆಯುತ್ತಿದ್ದ ಹಾಗೇ ಅದನ್ನು ದೇವರಿಗರ್ಪಿಸಿ ಮನಸ್ಸಿನ ಪುಷ್ಟಿ ದೊರಕಿಸಬೇಕು. ಫಲವನ್ನು ತ್ಯಜಿಸಬೇಕಾಗಿಲ್ಲ; ದೇವರಿಗರ್ಪಿಸ ಬೇಕು. ಆದುದರಿಂದ ಮನಸ್ಸಿನಲ್ಲಿ ಹುಟ್ಟುವ ಕಾಮಕ್ರೋಧಗಳನ್ನು ದೇವರಿಗೇ ಅರ್ಪಿಸಿ ಮುಕ್ತರಾಗಬೇಕು.

ಕಾಮ ಕ್ರೋಧವೆನ್ನ ।
ವಹಿವೆ ನತಿಗೆ ನಿನ್ನ ॥ *

ಸಂಯಮಾಗ್ನಿಯಲ್ಲಿ ಹಾಕಿ ಸುಡಬೇಕಾದುದೇನೂ ಇಲ್ಲ. ಒಡನೆಯೆ ಚಟ್ಟನೆ ಅರ್ಪಿಸಬೇಕು. ಅದಕ್ಕಾಗಿ ಕುಸ್ತಿ ಬೇಕಾಗಿಲ್ಲ.

ಹಾಲುಸಕ್ಕರೆಗೇ ಗುಣ ।
ಬೇವಿನ್ನೇಕೆ ಒಣ ? ॥ †

ಇಂದ್ರಿಯಗಳೂ ಸಾಧನೆಗಳೇ. ಅವನ್ನೂ ಈಶ್ವರನಿಗರ್ಪಿಸು. ಕಿವಿ ಸ್ವಾಧೀನದಲ್ಲಿರುವುದು ಕಷ್ಟ. ಹಾಗೆಂದು ಕೇಳುವುದನ್ನೇ ಬಿಡುವುದುಂಟೇ? ಕೇಳಿದರೂ ಹರಿಕಥೆಯನ್ನೆ ಕೇಳಿ. ಕೇಳದಿರುವುದು ಕಷ್ಟ. ಕೇಳುವ ವಿಷಯ ಹರಿಕಥೆಯಾದರೆ ಕಿವಿಯ ಉಪಯೋಗ ಹೆಚ್ಚು ಸುಲಭ, ಮಧುರ, ಹಿತಕಾರಿ. ರಾಮನಿಗೆ ನಿಮ್ಮ ಕಿವಿ ಕೊಡಿ. ನಾಲಗೆಯಿಂದ ರಾಮನಾಮ ಹೇಳಿ. ಇಂದ್ರಿಯಗಳೇನೂ ಶತ್ರುಗಳಲ್ಲ; ಒಳ್ಳೆಯವೇ. ಅವುಗಳ ಶಕ್ತಿಯೂ ದೊಡ್ಡದು. ಪ್ರತಿಯೊಂದು ಇಂದ್ರಿಯವನ್ನೂ ಈಶ್ವರಾರ್ಪಣ ಬುದ್ಧಿಯಿಂದ ಉಪಯೋಗಿಸುವುದು ರಾಜಮಾರ್ಗ. ಇದೇ ರಾಜಯೋಗ.

## ೪೫. ವಿಶಿಷ್ಟ ಕ್ರಿಯೆಗಾಗಿ ಆಗ್ರಹ ಬೇಡ

ಕೆಲವೊಂದು ಕ್ರಿಯೆಗಳನ್ನು ಮಾತ್ರ ದೇವರಿಗರ್ಪಿಸಬೇಕೆಂದೇನೂ ಇಲ್ಲ. ಎಲ್ಲ ಕರ್ಮ ಜಾತಿಗಳನ್ನೂ ಅವನಿಗರ್ಪಿಸಿ. ಶಬರಿಯ ಆ ಬೋರೇ ಹಣ್ಣು! ರಾಮ ಅವುಗಳನ್ನೇ ಸ್ವೀಕರಿಸಿದ. ಪರಮೇಶ್ವರ ಪೂಜೆಗಾಗಿ ಗವಿಗೆ ಹೋಗಬೇಕಾಗಿಲ್ಲ. ಎಲ್ಲಿ ಯಾವ ಕರ್ಮ ಮಾಡುತ್ತಿದೀರೋ

* " ಕಾಮ ಕ್ರೋಧ ಆಮ್ಹಾ ವಾಹಿಲೇ ವಿಠ್ಠಲೀ "
† " ರೋಗ ಜಾಯ ದುಧೇಸಾಖರೇ । ತರೀ ನಿಂಬಕಾಂ ಪಿವಾಯಾ ॥ "

ಅದನ್ನೇ ದೇವರಿಗರ್ಪಿಸಿಬಿಡಿ. ತಾಯಿ ಮಗುವಿನ ಆರೈಕೆ ಮಾಡುತ್ತಾಳೆ. ದೇವರ ಆರೈಕೆಯನ್ನೇ ಆಕೆ ಮಾಡಿದ ಹಾಗೆ. ಮಗುವಿಗೆ ಸ್ನಾನವಾದರೆ ದೇವರಿಗೇ ಅಭಿಷೇಕವಾದಂತೆ ಮಗು ಎಂದರೆ ಪರಮಾತ್ಮನ ಪ್ರೀತಿಯ ಕಾಣಿಕೆಯೆಂಬ ಭಾವನೆಯಿಂದ ಅದನ್ನು ಬೆಳೆಸಬೇಕು. ರಾಮಚಂದ್ರನನ್ನು ಕೌಸಲ್ಯೆ, ಕೃಷ್ಣನನ್ನು ಯಶೋದೆ, ಎಷ್ಟು ಪ್ರೀತಿಯಿಂದ ಸಲಹುತ್ತಿದ್ದರು! ಅದರ ವರ್ಣನೆ ಮಾಡುವಾಗ ಶುಕ, ವಾಲ್ಮೀಕಿ, ತುಲಸೀದಾಸರು ತಾವು ಧನ್ಯರೆಂದು ಭಾವಿಸಿದರು. ಆ ಕ್ರಿಯೆಯ ಬಗ್ಗೆ ಅವರಿಗಾದ ಆನಂದ ಅಪಾರ. ತಾಯಿಯ ಆ ಸೇವಾಕ್ರಿಯೆ ಬಹಳ ದೊಡ್ಡದು. ಆ ಬಾಲಕ ಪರಮಾತ್ಮನ ಆ ಮೂರ್ತಿ; ಅದರ ಸೇವೆಗಿಂತ ಹೆಚ್ಚಿನ ಭಾಗ್ಯವಿನ್ನೇನು? ನಾವು ನಮ್ಮ ನಮ್ಮ ಸೇವೆಯಲ್ಲಿ ಈ ಭಾವನೆಯನ್ನು ಉಪಯೋಗಿಸಿದರೆ ನಮ್ಮ ಕರ್ಮದಲ್ಲಿ ಎಂಥ ಪರಿವರ್ತನೆಯಾದೀತು? ಯಾವ ಸೇವೆ ದೊರೆತರೂ ಅದು ದೇವರ ಸೇವೆ ಎಂದು ಭಾವಿಸಬೇಕು.

ಎತ್ತಿನ ಸೇವೆ ಮಾಡುತ್ತಾನೆ ರೈತ. ಅದೇನು ತುಚ್ಛವೆ? ಅಲ್ಲ. ಶಕ್ತಿರೂಪದಿಂದ ವಿಶ್ವವನ್ನು ತುಂಬಿದ ಎತ್ತನ್ನು ವಾಮದೇವ ವೇದದಲ್ಲಿ ವರ್ಣಿಸಿದಾನೆ. ರೈತನ ಎತ್ತೂ ಅದೇ ಶಕ್ತಿಯೆ.

"ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ
ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ
ತ್ರಿಧಾ ಬದ್ಧೋ ವೃಷಭೋ ರೋರವೀತಿ
ಮಹೋ ದೇವೋ ಮರ್ತ್ಯಾಂ ಆವಿವೇಶ ॥"

ನಾಲ್ಕು ಕೊಂಬು, ಮೂರು ಕಾಲು, ಎರಡು ತಲೆ, ಏಳು ಕೈಯುಳ್ಳ, ಮೂರು ಕಡೆ ಕಟ್ಟಲ್ಪಟ್ಟಿರುವ, ಮಹಾ ತೇಜಸ್ವಿಯಾಗಿದ್ದು ಮರ್ತ್ಯ ವಸ್ತುಗಳಲ್ಲೆಲ್ಲ ತುಂಬಿಕೊಂಡಿರುವ, ಗರ್ಜನೆ ಮಾಡುವ, ಈ ವಿಶ್ವವ್ಯಾಪಿ ಯಾದ ವೃಷಭವನ್ನೇ ರೈತ ಪೂಜಿಸುತ್ತಿದಾನೆ. ಈ ಒಂದು ಋಚೆಗೆ ಸಾಯಣಾಚಾರ್ಯರು ಬೇರೆ ಬೇರೆ ಏಳು ಅರ್ಥ ಕೊಟ್ಟಿದಾರೆ. ಮಹಾ ವಿಚಿತ್ರ ಎತ್ತು ಇದು! ಆಕಾಶದಲ್ಲಿ ಗರ್ಜಿಸುತ್ತ ಮಳೆ ಸುರಿಸುವ ಎತ್ತು, ಮಲ ಮೂತ್ರ ಸುರಿಸಿ ಬೆಳೆ ಬೆಳೆಯುವ ರೈತನ ಎತ್ತು, ಎರಡೂ ಒಂದೇ. ಈ ದಿವ್ಯ ಭಾವನೆಯಿಂದ ರೈತ ಎತ್ತಿನ ಸೇವೆ ಮಾಡಿದರೆ ಪರಮಾತ್ಮನಿಗೆ ಮುಟ್ಟೀತು.

ಮನೆಯಲ್ಲಿನ ಗೃಹಲಕ್ಷ್ಮಿ ಅಡಿಗೆಯ ಮನೆಯನ್ನು ಶುಚಿಯಾಗಿಡುತ್ತಾಳೆ. ಒಲೆಯ ಮೇಲೆ ಶುಚಿಯಾದ ಸಾತ್ವಿಕವಾದ ಹೋಳಿಗೆ ಸಿದ್ಧವಾಗಿದೆ. ಮನೆಯವರೆಲ್ಲರಿಗೂ ಆ ಊಟ ಪುಷ್ಟಿದಾಯಕವೂ ತುಷ್ಟಿದಾಯಕವೂ ಆಗಲೆಂದು ಅವಳ ಆಸೆ. ಗೃಹಲಕ್ಷ್ಮಿಯ ಈ ಕರ್ಮವೂ ಯಜ್ಞರೂಪಿಯೆ. ಆ ತಾಯಿ ನಡಸಿರುವುದೂ ಒಂದು ಸಣ್ಣ ಯಜ್ಞವೇ. ಪರಮೇಶ್ವರನನ್ನು ತೃಪ್ತಿಗೊಳಿಸಬೇಕೆಂಬ ಭಾವನೆಯಿಂದ ಮಾಡಿದ ಅಡಿಗೆ ಎಷ್ಟು ಸ್ವಚ್ಛವೂ ಪವಿತ್ರವೂ ಆದೀತೆಂಬುದನ್ನು ಕಲ್ಪಿಸಿಕೊಳ್ಳಿ. ಆ ಗೃಹಲಕ್ಷ್ಮಿಯ ಮನಸ್ಸಿನಲ್ಲಿ ಇಂಥ ಮಹಾ ಭಾವನೆಯಿದ್ದರೆ ಭಾಗವತದಲ್ಲಿನ ಋಷಿಪತ್ನಿಯವರಿಗೆ ಆಕೆ ಸಮನಾದಾಳು. ತಮ್ಮ ಸೇವೆಯ ಮೂಲಕ ಇಂಥ ತಾಯಂದಿರೆಷ್ಟೋ ಜನ ಮೋಕ್ಷ ಪಡೆದಿದ್ದಾರು. ನಾ ತಾ ಎಂದುಕೊಳ್ಳುವ ಜ್ಞಾನಿಗಳೂ ಪಂಡಿತರೂ ಮೂಲೆಯಲ್ಲಿ ಬಿದ್ದಿದ್ದಾರು.

## ೪೬. ಇಡೀ ಬಾಳು ಹರಿಮಯವಾಗಬಲ್ಲದು

ನಮ್ಮ ನಿತ್ಯದ ನಿಮಿಷ ನಿಮಿಷದ ಬಾಳು ಸಾಧಾರಣವಾಗಿ ಕಂಡರೂ ನಿಜವಾಗಿ ಅದು ಹಾಗಿಲ್ಲ. ಅದರಲ್ಲಿ ಮಹಾ ಅರ್ಥವುಂಟು. ಅಖಂಡವಾಗಿ ಬಾಳೇ ಒಂದು ಮಹಾಯಜ್ಞಕರ್ಮ. ನಿದ್ದೆಯೂ ಒಂದು ಸಮಾಧಿಯೆ. ಎಲ್ಲ ಭೋಗಗಳನ್ನೂ ಈಶ್ವರನಿಗರ್ಪಿಸಿ ನಾವು ಅನುಭವಿಸುವ ನಿದ್ದೆ ಸಮಾಧಿಯಲ್ಲದಿನ್ನೇನು ? ಸ್ನಾನ ಮಾಡುವಾಗ ಪುರುಷಸೂಕ್ತ ಹೇಳುವ ಸಂಪ್ರದಾಯ ನಮ್ಮಲ್ಲಿದೆ. ಸ್ನಾನಕ್ಕೂ ಅದಕ್ಕೂ ಏನು ಸಂಬಂಧ? ಕೊಂಚ ದೃಷ್ಟಿಸಿ ನೋಡಿದರೆ ಕಂಡೀತು. ಸಾವಿರ ಕೈ, ಸಾವಿರ ಕಣ್ಣುಳ್ಳ ಆ ವಿರಾಟ್ ಪುರುಷನಿಗೂ ನಿಮ್ಮ ಸ್ನಾನಕ್ಕೂ ಏನು ಸಂಬಂಧ? ಸಂಬಂಧವಿಷ್ಟೆ. ನೀವು ಸುರಿದುಕೊಳ್ಳುವ ನೀರಿನಲ್ಲಿ ಸಾವಿರಾರು ಹನಿಯಿವೆ. ಆ ಹನಿ ನಿಮ್ಮ ತಲೆ ತೊಳೆದು ನಿಮ್ಮ ಪಾಪ ಕಳೆಯುತ್ತದೆ. ನಿಮ್ಮ ಮಸ್ತಕದ ಮೇಲೆ ಈಶ್ವರನ ಆಶೀರ್ವಾದ ಅದು. ಪರಮೇಶ್ವರನ ಸಹಸ್ರ ಹಸ್ತಗಳಲ್ಲಿ ಸಹಸ್ರ ಧಾರೆ ನಿಮ್ಮ ಮೇಲೆ ಸುರಿಯುತ್ತದೆ. ಹನಿಯ ರೂಪದಲ್ಲಿ ಸ್ವತಃ ಪರಮೇಶ್ವರನೆ ನಿಮ್ಮ ತಲೆಯ ಕೊಳೆಯನ್ನು ತೊಳೆಯುತ್ತಿದಾನೆ.

ಆ ಸ್ನಾನದಲ್ಲಿ ಇಂಥ ದಿವ್ಯ ಭಾವನೆ ಬರಲಿ. ಆಗ ಅದೊಂದು ಅದ್ವಿತೀಯ ಸ್ನಾನವಾದೀತು. ಅದರಲ್ಲಿ ಅನಂತ ಶಕ್ತಿ ಬಂದೀತು.

ಯಾವ ಕರ್ಮವನ್ನೇ ಆಗಲಿ, ಪರಮೇಶ್ವರನದೆಂಬ ಭಾವನೆಯಿಂದ ಮಾಡಿದರೆ ಅದು ಪವಿತ್ರವಾಗುತ್ತದೆ. ಇದು ಅನುಭವದ ಮಾತು. ನಮ್ಮ ಮನೆಗೆ ಬಂದವರು ಈಶ್ವರರೂಪಿಗಳೆಂಬ ಭಾವನೆ ಬರಬೇಕು. ಯಾವ ನಾದರೊಬ್ಬ ದೊಡ್ಡ ಮನುಷ್ಯ ಬಂದಾಗ ನಾವೆಷ್ಟು ಸ್ವಚ್ಛತೆಯಿಂದ ಇರುತ್ತೇವೆ, ಎಷ್ಟು ಚೆಂದಾದ ಅಡಿಗೆ ಮಾಡಿಸುತ್ತೇವೆ! ಬಂದವನು ಪರಮೇಶ್ವರನೇ ಎಂಬ ಭಾವನೆ ಬಂದರೆ ಆ ಕ್ರಿಯೆಯಲ್ಲಿ ಎಂಥ ಪರಿವರ್ತನೆ ಯಾದೀತು! ಕಬೀರ ಬಟ್ಟೆಗಳನ್ನು ನೇಯುತ್ತಿದ್ದ. ಅದರಲ್ಲಿ ತಲ್ಲೀನನಾಗಿ

"ಝೀನೀ ಝೀನೀ ಝೀನೀ ಝೀನೀ, ಬೀನೀ ಚದರಿಯಾ"

ಎಂದು ಹಾಡುತ್ತಾ ನಲಿಯುತ್ತಿದ್ದ. ಪರಮೇಶ್ವರನಿಗೆ ಹೊದಿಸುವುದಕ್ಕಾಗಿ ಬಟ್ಟೆ ನೇಯುತ್ತಿದ್ದ ಹಾಗಿತ್ತು. ಋಗ್ವೇದದಲ್ಲಿನ ಋಷಿ ಹೇಳುತ್ತಾನೆ.—

"ವಸ್ತ್ರೇವ ಭದ್ರಾ ಸುಕೃತಾ ಸುಪಾಣೀ"

ಸುಂದರವಾದ ಕೈಗಳಿಂದ ನೆಯ್ದ ಬಟ್ಟೆಯ ಹಾಗೆ ನಾನು ನನ್ನೀಸ್ತೋತ್ರ ವನ್ನು ಈಶ್ವರನಿಗೆ ಹೊದಿಸುತ್ತಿದೇನೆ. ಕವಿಯ ಸ್ತೋತ್ರ ದೇವರಿಗಾಗಿ. ನೇಕಾರನ ಬಟ್ಟೆಯೂ ದೇವರಿಗಾಗಿಯೆ. ಎಂಥ ಹೃದಯಂಗಮ ಕಲ್ಪನೆ! ಹೃದಯ ಉಕ್ಕಿಸುವ ವಿಚಾರ! ಈ ಭಾವನೆ ಬಂದರೆ ಬಾಳು ಎಷ್ಟು ನಿರ್ಮಲವಾದೀತು! ಕತ್ತಲೆಯಲ್ಲಿ ಮಿಂಚು ಹೊಳೆದರೆ ಒಮ್ಮೆಲೇ ಬೆಳಕಾಗುತ್ತದೆ. ಮೆಲ್ಲ ಮೆಲ್ಲನೆ ಬೆಳಕಾಗುವುದೆ? ಇಲ್ಲ. ಒಂದೇ ಒಂದು ಕ್ಷಣದಲ್ಲಿಯೆ ಎಲ್ಲ ಅಂತರ್ಬಾಹ್ಯ ಪರಿವರ್ತನೆ. ಅದೇ ಮೇರೆಗೆ ಪ್ರತಿ ಯೊಂದು ಕ್ರಿಯೆಯನ್ನೂ ಈಶ್ವರನೊಂದಿಗೆ ಕೂಡಿಸಿದಲ್ಲಿ ಬಾಳಿನಲ್ಲಿ ಒಮ್ಮೆಲೇ ಅದ್ಭುತ ಶಕ್ತಿ ಹುಟ್ಟುತ್ತದೆ. ಅನಂತರ ಪ್ರತಿಯೊಂದು ಕ್ರಿಯೆಯೂ ವಿಶುದ್ಧವಾಗುತ್ತದೆ. ಬಾಳಿನಲ್ಲಿ ಉತ್ಸಾಹ ಹುಟ್ಟುತ್ತದೆ. ಇಂದು ನಮ್ಮ ಬಾಳಿನಲ್ಲಿ ಎಲ್ಲಿದೆ ಉತ್ಸಾಹ? ಸಾಯುವಂತಿಲ್ಲವೆಂದು ನಾವು ಬದುಕಿದೇವೆ, ಅಷ್ಟೆ. ಎಲ್ಲೆಲ್ಲೂ ಉತ್ಸಾಹಕ್ಕೆ ಬರ. ಅಳುಬುರುಕ, ಕಲಾಹೀನ ಬದುಕು. ಎಲ್ಲ ಕ್ರಿಯೆಗಳನ್ನೂ ಈಶ್ವರನೊಂದಿಗೆ

ಕೂಡಿಸಬೇಕೆಂಬ ಭಾವ ಬರಲಿ. ಅನಂತರ ನಿಮ್ಮ ಬದುಕು ರಮಣೀಯವೂ ನಮನೀಯವೂ ಆದೀತು.

ಪರಮೇಶ್ವರನ ಒಂದು ಹೆಸರಿನಿಂದ ಒಮ್ಮೆಲೆ ಪರಿವರ್ತನೆಯಾಗುವಲ್ಲಿ ಸಂದೇಹವಿಲ್ಲ. ರಾಮನಾಮ ಹೇಳುವುದರಿಂದ ಏನು ಪ್ರಯೋಜನ ಎನ್ನಬೇಡಿ. ಹೇಳಿಯಾದರೂ ನೋಡಿ. ಸಾಯಂಕಾಲ ರೈತ ಹೊಲದಿಂದ ಮರಳುತ್ತಿದ್ದಾನೆ ಎನ್ನಿ. ದಾರಿಯಲ್ಲೊಬ್ಬ ಭೇಟಿಯಾಗುತ್ತಾನೆ.

'ದಾರಿಕಾರ ಬಂಧು, ನಾರಾಯಣಾ, ನಿಲ್ಲು, ರಾತ್ರಿಯಾಗುತ್ತ ಬಂತು ನಡೆ, ನಮ್ಮ ಮನೆಗೆ ಹೋಗೋಣ.' ರೈತನ ಮುಖದಿಂದ ಇಂಥ ಮಾತು ಬಂದರೆ ಆ ದಾರಿಕಾರನ ರೂಪ ಬದಲಾದೀತೋ ಇಲ್ಲವೋ? ಅವನು ದಾರಿಕಾರನಾದರೂ ಪವಿತ್ರನಾದಾನು. ಇಂಥ ಬದಲಾವಣೆಯುಂಟಾಗುವುದು ಭಾವದಿಂದ. ಎಲ್ಲವೂ ಇರುವುದು ಭಾವನೆಯಲ್ಲೇ. ಜೀವನವೇ ಭಾವನಾಮಯ. ೨೦ ವರ್ಷದ ವರಕೀಯನೊಬ್ಬ ಮನೆಗೆ ಬರುತ್ತಾನೆ. ವಧುವಿನ ತಂದೆ ಆತನಿಗೆ ಕನ್ಯಾದಾನ ಮಾಡುತ್ತಾನೆ. ಆ ಹುಡುಗ ೨೦ ವರ್ಷದವನಾಗಿದ್ದರೂ ಸಹ ೫೦ ವರ್ಷದ ಆ ತಂದೆ ಹುಡುಗನ ಕಾಲಿಗೆ ಬೀಳುತ್ತಾನೆ. ಇದು ಹೀಗೇಕೆ? ಕನ್ಯೆಯನ್ನರ್ಪಿಸುವ ಆ ಕರ್ಮವೆ ಅಷ್ಟು ಪವಿತ್ರ. ಅದನ್ನು ಸ್ವೀಕರಿಸುವಾತ ದೇವರೆಂದೇ ತೋರುತ್ತಾನೆ. ಅಳಿಯದೇವರ ಬಗ್ಗೆ ಮಾವ ತಳೆಯುವ ಈ ಭಾವನೆಯನ್ನೇ ಇನ್ನೂ ಮುಂಬರಿಸಿ ಹೆಚ್ಚಿಸಿ.

ಇಂಥ ಸುಳ್ಳು ಕಲ್ಪನೆಗಳಲ್ಲಿ ಏನು ಅರ್ಥ ಎಂದು ಯಾರಾದರೂ ಕೇಳಬಹುದು. ಮೊದಲಿಗೇ ಸುಳ್ಳು—ಸತ್ಯ ಎನ್ನುವುದು ಬೇಡ. ಮೊದಲು ಅಭ್ಯಾಸ ಮಾಡಿ. ಅನುಭವ ಪಡೆದುಕೊಳ್ಳಿ. ಸುಳ್ಳು—ಸತ್ಯ ಆಮೇಲೆ ತಿಳಿದೀತು. ಅಳಿಯದೇವರು ಪರಮಾತ್ಮನೆಂಬ ಆ ಕಲ್ಪನೆ ಕೇವಲ ಶಾಬ್ದಿಕವಾಗಿರದೆ ನಿಜವಾದುದಾಗಿರಲಿ. ಆಗ ಪರಿವರ್ತನೆಯೇನೆಂಬುದು ತಿಳಿದೀತು. ಈ ಪವಿತ್ರ ಭಾವನೆಯಿಂದ ವಸ್ತುಗಳ ಪೂರ್ವರೂಪ—ಉತ್ತರ ರೂಪಗಳಲ್ಲಿ ಭೂಮ್ಯಾಕಾಶಗಳ ಅಂತರ ಕಾಣಿಸುತ್ತದೆ. ಕುಪಾತ್ರ ಸುಪಾತ್ರವಾದೀತು. ದುಷ್ಟ ಶಿಷ್ಟವಾದೀತು. ವಾಲ್ಯಾ ಕೋಳಿಯದು ಹೀಗೇ ಆಗಲಿಲ್ಲವೆ? ವೀಣೆಯ ಮೇಲೆ ಬೆರಳು ನರ್ತಿಸುತ್ತಿದೆ.

ಮುಖದಿಂದ ನಾರಾಯಣ ನಾಮ ಹೊರಡುತ್ತಿದೆ. ಕೊಲ್ಲಲು ಬಂದರೂ ಶಾಂತಿಗೆಡದೆ, ಪ್ರತಿಯಾಗಿ ತನ್ನನ್ನೇ ಪ್ರೇಮಪೂರ್ಣ ಕಣ್ಣಿನಿಂದ ನೋಡುತ್ತಿದ್ದಾನೆ. ಇಂಥ ದೃಶ್ಯವನ್ನು ಹಿಂದೆಂದೂ ಆತ ನೋಡಿರಲಿಲ್ಲ. ತನ್ನ ಕೊಡಲಿಯನ್ನು ಕಂಡು ಓಡಿಹೋಗುವ ಇಲ್ಲವೇ ತನ್ನ ಮೇಲೆ ಏರಿ ಬರುವ ಎರಡೇ ಬಗೆಯ ಪ್ರಾಣಿಗಳನ್ನು ಆತ ಅದುವರೆಗೆ ನೋಡಿದ್ದ. ನಾರದರಾದರೋ ಓಡಿಹೋಗಲೂ ಇಲ್ಲ, ಪ್ರತಿಧಾಳಿಯನ್ನೂ ಮಾಡಲಿಲ್ಲ. ಶಾಂತವಾಗಿ ನಿಂತಿದ್ದರು. ವಾಲ್ಯಾನ ಕೊಡಲಿ ಸ್ತಬ್ಧವಾಯಿತು. ನಾರದರ ಹುಬ್ಬು ಬದಲಿಸಲಿಲ್ಲ. ನಡೆದೇ ಇತ್ತು ಮಧುರ ಭಜನೆ. 'ಕೊಡಲಿಯೇಕೆ ನಿಂತುಹೋಯಿತು?' ಎಂದು ನಾರದರು ಕೇಳಿದರು. 'ನೀವು ಶಾಂತವಾಗಿ ಇರುವುದನ್ನು ಕಂಡು' ಎಂದ ವಾಲ್ಯಾ. ನಾರದರು ಅವನನ್ನು ರೂಪಾಂತರ ಮಾಡಿಬಿಟ್ಟರು, ಆ ರೂಪಾಂತರ ನಿಜವೋ ಸುಳ್ಳೋ?

ನಿಜವಾಗಿಯೂ ದುಷ್ಟರೆನ್ನುವವರಿದ್ದಾರೆಯೆ? ನಿರ್ಣಯಿಸುವವರಾದರೂ ಯಾರು? ನಿಜವಾದ ದುಷ್ಟ ಇದುರಿಗೆ ನಿಂತಿದ್ದಾಗಲೂ ಸಹ ಆತ ಪರಮಾತ್ಮ ಎಂಬ ಭಾವನೆ ಬರಲಿ. ದುಷ್ಟನಾಗಿದ್ದರೂ ಸಹ ಆತ ಶರಣನಾದಾನು. ಸುಳ್ಳು ಕಲ್ಪನೆ ಮಾಡಬೇಕೆ ಎಂದೀರಿ. ಆತ ದುಷ್ಟನೇ ಎಂಬುದನ್ನಾರು ಬಲ್ಲವರು? ತಾವು ಒಳ್ಳೆಯವರಾಗಿರುವುದರಿಂದ ಸಜ್ಜನರಿಗೆ ಎಲ್ಲವೂ ಒಳ್ಳೆಯದಾಗಿ ತೋರುತ್ತದೆ. ನಿಜವಾಗಿ ಹಾಗೆ ಯಾರೂ ಇರುವುದಿಲ್ಲ ಎಂದು ಕೆಲವರೆನ್ನುತ್ತಾರೆ. ನಿನಗೆ ಕಂಡುದನ್ನೇ ನಿಜ ಎನ್ನೋಣವೆ? ಎಂದರೆ ದುಷ್ಟರ ಕೈಯಲ್ಲಿ ಮಾತ್ರ ಸೃಷ್ಟಿಯ ಸಮ್ಯಕ್ ಜ್ಞಾನದ ಸಾಧನೆಯಿದ್ದಂತಾಯಿತು! ಸೃಷ್ಟಿ ಒಳ್ಳೆಯದೇ. ದುಷ್ಟರಿಗೆ ಮಾತ್ರ ದುಷ್ಟವಾಗಿ ಕಾಣುವುದೆಂದೇಕೆ ಹೇಳಬಾರದು? ಅಣ್ಣಾ, ಸೃಷ್ಟಿ ಕನ್ನಡಿ. ನೀವಿದ್ದ ಹಾಗೆ ಈ ಇದಿರಿನ ಕನ್ನಡಿಯಲ್ಲಿ ನಿಮ್ಮ ಪ್ರತಿಬಿಂಬ. ನಿಮ್ಮ ದೃಷ್ಟಿಯಂತೆ ಸೃಷ್ಟಿಯ ರೂಪ. ಎಂತಲೇ ಸೃಷ್ಟಿ ಒಳ್ಳೆಯದು, ಪವಿತ್ರವಾದುದು ಎಂದು ಕಲ್ಪಿಸಿಕೊಳ್ಳಿ. ಸಾಧಾರಣ ಕ್ರಿಯೆಯಲ್ಲಿ ಈ ಭಾವ ತುಂಬಿ. ಅನಂತರ ನಡೆಯುವ ಚಮತ್ಕಾರವನ್ನು ನೋಡಿ. ಭಗವಂತ ಹೇಳಬೇಕಾಗಿರುವುದೂ ಇದನ್ನೇ—'ಏನೇನನ್ನು ಮಾಡುತ್ತೀಯೊ, ಅದನ್ನೆಲ್ಲ ಇದ್ದುದಿದ್ದಂತೆಯೇ ಭಗವಂತನಿಗರ್ಪಿಸು.'

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಂ ॥**

ನಾವು ಚಿಕ್ಕವರಿದ್ದಾಗ ತಮ್ಮ ತಾಯಿ ಒಂದು ಕತೆ ಹೇಳುತ್ತಿದ್ದರು. ತುಂಬ ಸ್ವಾರಸ್ಯವಾದ ಕತೆ. ಆದರೆ ಅದರ ರಹಸ್ಯ ಮಾತ್ರ ಬಹಳ ಬೆಲೆಯುಳ್ಳುದು. ಒಬ್ಬ ಹೆಣ್ಣುಮಗಳು. ಮಾಡಿದುದನ್ನೆಲ್ಲ ಕೃಷ್ಣಾರ್ಪಣ ಮಾಡುವುದೆಂದು ಆಕೆ ನಿರ್ಧರಿಸಿದ್ದಳು. ಗೋಮೆ ಹಚ್ಚಿ, ಹೊರಕ್ಕೆಸೆದು ಕೃಷ್ಣಾರ್ಪಣ ಎನ್ನುವಳು. ತತ್‌ಕ್ಷಣ ಆ ಸಗಣಿ ಅಲ್ಲಿಂದ ಎದ್ದು ಮಂದಿರದಲ್ಲಿನ ಮೂರ್ತಿಯ ಮುಖದ ಮೇಲೆ ಕೂಡುತ್ತಿತ್ತು. ಮೂರ್ತಿಯನ್ನು ತೊಳೆ ತೊಳೆದು ಪೂಜಾರಿ ಸೋತುಹೋದ. ಆದರೆ ಮಾಡುವುದೇನು? ಕೊನೆಗೆ ಈ ಮಹಿಮೆಯೆಲ್ಲ ಆ ಹೆಂಗಸಿನದೆಂಬುದು ತಿಳಿಯಿತು. ಆಕೆ ಬದುಕಿರುವವರೆಗೂ ಮೂರ್ತಿ ಸ್ವಚ್ಛವಾಗಿರುವಂತಿಲ್ಲ. ಒಂದು ದಿನ ಆಕೆ ಹಾಸಿಗೆ ಹಿಡಿದಳು. ಸಾವಿನ ಕೊನೆಯ ಗಳಿಗೆ ಸಮೀಪಿಸಿತು. ಮರಣವೂ ಕೃಷ್ಣಾರ್ಪಣ ಎಂದಳಾಕೆ. ತತ್‌ಕ್ಷಣವೆ ದೇವಾಲಯದಲ್ಲಿನ ಮೂರ್ತಿ ಒಡೆದುಹೋಯಿತು. ಆ ಹೆಂಗಸನ್ನು ಕರೆದೊಯ್ಯಲು ಮೇಲಿನಿಂದ ವಿಮಾನ ಬಂತು. ಅವಳು ಅದನ್ನೂ ಕೃಷ್ಣಾರ್ಪಣ ಮಾಡಿದಳು. ತತ್‌ಕ್ಷಣ ಗುಡಿಯ ಮೇಲೆ ಬಿತ್ತು ವಿಮಾನ. ತುಂಡು ತುಂಡಾಯಿತು. ಶ್ರೀಕೃಷ್ಣನ ಧ್ಯಾನದ ಮುಂದೆ ಸ್ವರ್ಗವೆಲ್ಲಿ ಬಂತು?

ಸಾರಾಂಶವಿಷ್ಟೆ: ನಾವು ಮಾಡುವ ಸುಕರ್ಮ ಕುಕರ್ಮಗಳನ್ನೆಲ್ಲ ಈಶ್ವರಾರ್ಪಣ ಮಾಡುವುದರಿಂದ ಬೇರೊಂದು ಬಗೆಯ ಸಾಮರ್ಥ್ಯ ಹುಟ್ಟುತ್ತದೆ. ಜೋಳದ ಕಾಳು ಹಳದಿಗೆಂಪು. ಅದನ್ನು ಹುರಿದರೆ ಎಷ್ಟು ಅಂದವಾದ ಅರಳಾಗುತ್ತದೆ! ಅಚ್ಚಬಿಳ್ಳಗೆ ಅಷ್ಟಕೋನದ ಅಚ್ಚುಕಟ್ಟಾದ ಆ ಅಂದದ ಅರಳನ್ನು ಆ ಜೋಳದ ಕಾಳಿನ ಪಕ್ಕದಲ್ಲಿಟ್ಟು ನೋಡಿ. ಎಷ್ಟು ಅಂತರ! ಆದರೆ ಆ ಅರಳು ಆ ಜೋಳದ್ದೇ. ಅದರಲ್ಲಿ ಸಂಶಯವಿಲ್ಲ. ಈ ವ್ಯತ್ಯಾಸ ಅಗ್ನಿಯೊಂದರಿಂದ ಆಯಿತು. ಅದೇ ರೀತಿ ಆ ಗಟ್ಟಿ ಜೋಳದ ಕಾಳನ್ನು ಬೀಸುಕಲ್ಲಿನಲ್ಲಿ ಹಾಕಿ ಬೀಸಿ. ಮೆತ್ತನೆಯ ಹಿಟ್ಟಾಗುತ್ತದೆ. ಬೆಂಕಿಯ ಸಂಪರ್ಕದಿಂದ ಅರಳಾಯಿತು, ಬೀಸುವ ಕಲ್ಲಿನಲ್ಲಿ ಹಾಕಿದರೆ ಮೆತ್ತನೆಯ ಹಿಟ್ಟಾಯಿತು. ಹೀಗೆಯೇ ನಿಮ್ಮ ಚಿಕ್ಕ ಕ್ರಿಯೆಗಳ ಮೇಲೆ

ಹರಿಸ್ಮರಣೆಯ ಸಂಸ್ಕಾರ ಹಾಕಿದರೆ ಅದು ಅಪೂರ್ವವಾಗುತ್ತದೆ. ಭಾವನೆಯಿಂದ ಬೆಲೆ ಬೆಳೆಯುತ್ತದೆ. ಆ ಹೂ, ಆ ಬಿಲ್ವಪತ್ರ, ಆ ತುಳಸೀದಲ—ತುಚ್ಛವಲ್ಲ.

ವಿರಲನ್ನ ಬೆರೆಸ-ತುಕಾ ಹೇಳ್ತಾನೆ
ನೋಡಪರ ಸುರಸ ।*

ಪ್ರತಿಯೊಂದರಲ್ಲಿಯೂ ಪರಮಾತ್ಮನನ್ನು ಬೆರೆಸಿ, ಅನಂತರ ಅನುಭವಿಸಿ. ಈ ವಿಠ್ಠಲನ ಮಸಾಲೆಗಿಂತ ಹೆಚ್ಚಿನ ಬೇರೆ ಮಸಾಲೆಯುಂಟೆ? ಈ ದಿವ್ಯವಾದ ಮಸಾಲೆಯ ಮುಂದೆ ಇನ್ನಾವುದನ್ನು ತಂದೀರಿ ? ಈಶ್ವರನ ಮಸಾಲೆಯನ್ನು ಪ್ರತಿಯೊಂದು ಕ್ರಿಯೆಯಲ್ಲಿಯೂ ಬೆರೆಸಿ. ಎಲ್ಲವೂ ಸುಂದರವಾದೀತು, ರುಚಿಕರವಾದೀತು

ರಾತ್ರಿ ಎಂಟು ಗಂಟೆಗೆ ದೇವಾಲಯದಲ್ಲಿ ಆರತಿ ನಡೆದಿದ್ದಾಗ-ಗಂಧ ಧೂಪ ಇಡುತ್ತಿದ್ದಾಗ, ದೀವಿಗೆ ಉರಿಯುತ್ತಿದ್ದಾಗ, ಆರತಿ ಬೆಳಗುತ್ತಿದ್ದಾಗ, ನಿಜವಾಗಿಯೂ ಪರಮಾತ್ಮನನ್ನು ನೋಡುತ್ತಿರುವಂತೆ ನಮಗೆ ಭಾಸವಾಗುತ್ತದೆ. ಹಗಲೆಲ್ಲ ಎಚ್ಚರವಾಗಿದ್ದ ದೇವರು ಇನ್ನು ನಿದ್ದೆ ಹೋಗುತ್ತಾನೆ.

'ಮಲಗು ಮಲಗಯ್ಯ ಗೋಪಾಲಾ'

ಎನ್ನುತ್ತಾರೆ ಭಕ್ತರು. 'ದೇವರು ಎಲ್ಲಾದರೂ ಮಲಗುತ್ತಾನೆಯೇ?' ಎಂದು ಸಂದೇಹಪಡುವವನು ಕೇಳುತ್ತಾನೆ. ಎಲೋ ದೇವರು ಏನು ಮಾಡಲಾರ? ದೇವರೇ ಎಚ್ಚರವಾಗಿರದಿದ್ದರೆ, ಮಲಗಿಕೊಳ್ಳದಿದ್ದರೇ ಇನ್ನೇನು ಕಲ್ಲು ಎಚ್ಚರವಾಗಿರಬೇಕೆ, ಮಲಗಿಕೊಳ್ಳಬೇಕೆ? ದೇವರೇ ಎಚ್ಚರವಾಗಿರುತ್ತಾನೆ. ದೇವರೇ ಮಲಗಿಕೊಳ್ಳುತ್ತಾನೆ. ದೇವರೇ ಏಳುತ್ತಾನೆ. ಬೆಳಗಿನ ಜಾವದಲ್ಲಿ ತುಲಸೀದಾಸರು ದೇವರನ್ನು ಎಚ್ಚರಿಸುತ್ತಿದಾರೆ, ಬಿನ್ನವಿಸಿಕೊಳ್ಳುತ್ತಿದಾರೆ—

"ಜಾಗಿಯೆ ರಘುನಾಥ ಕುವರ ಪಂಛೀ ಬನ ಬೋಲೇ"

ನಮ್ಮ ಬಂಧು ಭಗಿನಿಯರು, ನರನಾರಿಯರು ಶ್ರೀರಾಮಚಂದ್ರನ ಸ್ವರೂಪಗಳೆಂದು ತಿಳಿದು ಅವರೆನ್ನುತ್ತಾರೆ—ನನ್ನ ರಾಮರಾಯರುಗಳಿರಾ, ಎದ್ದೇಳಿ.

---

* ತುಕಾಮ್ಹಣೇ ಚಚೀಆಲೀ । ಜೇಕಾ ಮಿಶ್ರಿತ ವಿಠ್ಠಲೇ ॥

ಎಂಥ ಸುಂದರ ವಿಚಾರ! ಹಾಸ್ಟೆಲಿನಲ್ಲಿ ಹುಡುಗರನ್ನೆಬ್ಬಿಸಬೇಕಾದರೆ 'ಏಳುತ್ತೀರೋ ಇಲ್ಲವೋ' ಎಂದು ಗದರಿಸುತ್ತಾರೆ. ಪ್ರಾತಃಕಾಲದ ಮಂಗಲ ಸಮಯ. ಆಗ ಶೋಭಿಸೀತೆ ಆ ಕಠೋರವಾಣಿ? ವಿಶ್ವಾಮಿತ್ರನ ಆಶ್ರಮದಲ್ಲಿ ಮಲಗಿದಾನೆ ರಾಮಚಂದ್ರ. ಅವನನ್ನು ವಿಶ್ವಾಮಿತ್ರ ಎಬ್ಬಿಸುತ್ತಿದಾನೆ. ವಾಲ್ಮೀಕಿ ರಾಮಾಯಣದಲ್ಲಿ ವರ್ಣನೆಯಿದೆ:

"ರಾಮೇತಿ ಮಧುರಾಂ ವಾಣೀಂ ವಿಶ್ವಾಮಿತ್ರೋಽಭ್ಯಭಾಷತ ।
ಉತ್ತಿಷ್ಠ ನರಶಾರ್ದೂಲ ಪೂರ್ವಾ ಸಂಧ್ಯಾ ಪ್ರವರ್ತತೇ ॥"

'ರಾಮ, ವತ್ಸಾ ಏಳು' ಎಂದು ಸವಿದನಿಯಲ್ಲಿ ವಿಶ್ವಾಮಿತ್ರ ಕರೆಯುತ್ತಿದಾನೆ. ಎಂಥ ಸುಂದರ ಕರ್ಮ ಇದು. ಹಾಸ್ಟೆಲಿನಲ್ಲಿ ಎಬ್ಬಿಸುವುದು ಎಷ್ಟು ಕರ್ಕಶ! ಏಳೇಳು ಜನ್ಮಗಳ ವೈರಿ ಯಾವನೋ ಎಬ್ಬಿಸಲು ಬಂದಿರಬೇಕೆಂದು ಆ ಹುಡುಗನಿಗನಿಸುತ್ತದೆ. ಮೆಲ್ಲಮೆಲ್ಲನೆ ಕರೆಯಿರಿ ಅನಂತರ ಗಟ್ಟಿಯಾಗಿ. ಕರ್ಕಶತೆ, ಕಠೋರತೆ ಬೇಡ. ಆಗ ಏಳದಿದ್ದರೆ ಇನ್ನು ಹತ್ತು ನಿಮಿಷ ಬಿಟ್ಟುಕೊಂಡು ಎಬ್ಬಿಸಿ. ಇಂದು ಏಳದಿದ್ದರೆ ನಾಳೆಯಾದರೂ ಎದ್ದಾನು ಎಂದು ಆಸೆಯಿಟ್ಟುಕೊಳ್ಳಿ. ಆತ ಏಳಬೇಕೆಂದು ಸುಂದರವಾದ ಹಾಡು, ಸ್ತೋತ್ರ, ಶ್ಲೋಕ ಹೇಳಿ. ಎಬ್ಬಿಸುವ ಈ ಸಾದಾ ಕ್ರಿಯೆ— ಅದನ್ನು ಸಹ ಕಾವ್ಯಮಯವಾಗಿ, ಸಹೃದಯವಾಗಿ, ಸುಂದರವಾಗಿ ಮಾಡಬಹುದು. ದೇವರನ್ನೇ ಎಬ್ಬಿಸುವ ಹಾಗೆ, ಪರಮೇಶ್ವರನ ಮೂರ್ತಿಯನ್ನೇ—ಮೆಲ್ಲನೆ ಎಚ್ಚರಿಸುವ ಹಾಗೆ ಇದು. ನಿದ್ದೆಯಿಂದ ಎಬ್ಬಿಸುವುದೂ ಒಂದು ಶಾಸ್ತ್ರ!

ಎಲ್ಲ ವ್ಯವಹಾರದಲ್ಲೂ ಈ ಕಲ್ಪನೆ ಬರಬೇಕು. ಶಿಕ್ಷಣಶಾಸ್ತ್ರದಲ್ಲಂತೂ ಕಲ್ಪನೆಗೆ ಬಹಳ ಮಹತ್ವವುಂಟು. ಮಕ್ಕಳೆಂದರೆ ದೇವರ ಮೂರ್ತಿಗಳು. ಈ ದೇವರ ಸೇವೆ ಸಲ್ಲಿಸುತ್ತಿದೇನೆ ಎಂಬ ಭಾವ ಗುರುವಿಗಿರಬೇಕು. ಆಗ ಆತ "ನಡೆ, ಮನೆಗೆ ಹೋಗು, ಒಂದು ಗಂಟೆ ನಿಂತುಕೊಂಡಿರು, ಕೈ ಮುಂದೆ ಮಾಡು, ಅಂಗಿ ಎಷ್ಟು ಹೊಲಸು, ಮೂಗಿಗೆ ಸಿಂಬಳ ಎಷ್ಟು" ಎಂದು ಗದರಿಸಲಾರ. ಅದಕ್ಕೆ ಪ್ರತಿಯಾಗಿ ಆತ ಮಗುವಿನ ಮೂಗನ್ನು ಮೆಲ್ಲನೆ ಶುಚಿಗೊಳಿಸಿಯಾನು, ಹರಿದುದನ್ನು ಹೊಲಿದಾನು. ಶಿಕ್ಷಕ ಹೀಗೆ ವರ್ತಿಸಿದರೆ ಅದರ ಪರಿಣಾಮ ಹೇಗಾದೀತು! ಹೊಡೆಯುವುದರಿಂದ

ಎಲ್ಲಾದರೂ ಪರಿಣಾಮವಾದೀತೆ? ಮಕ್ಕಳೂ ಸಹ ಇಂಥ ದಿವ್ಯಭಾವನೆಯಿಂದ ಗುರುವಿನ ಕಡೆ ನೋಡಬೇಕು. ಗುರುವೇ ಹರಿಮೂರ್ತಿಯೆಂದು ಹುಡುಗರು, ಹುಡುಗರೇ ಹರಿಮೂರ್ತಿಯೆಂದು ಗುರುಗಳು, ಪರಸ್ಪರ ಭಾವಿಸಿಕೊಂಡು ವರ್ತಿಸಿದಲ್ಲಿ ವಿದ್ಯೆ ಎಷ್ಟೋ ತೇಜಸ್ವಿಯಾದೀತು. ಮಕ್ಕಳೂ ದೇವರು. ಗುರುವೂ ದೇವರು. ಗುರುವೇ ಶಂಕರನ ಮೂರ್ತಿ. ಅವರಿಂದ ನಾವು ಬೋಧಾಮೃತ ಪಡೆಯುತ್ತಿದೇವೆ, ಆತನ ಸೇವೆಮಾಡಿ ಜ್ಞಾನ ದೊರಕಿಸುತ್ತಿದೇವೆ ಎಂಬ ಕಲ್ಪನೆ ಮಕ್ಕಳಿಗೆ ಬಂದರೆ ಅವರು ಹೇಗೆ ವರ್ತಿಸಬಹುದು !

## ೪೭. ಪಾಪದ ಭಯವಿಲ್ಲ

ಎಲ್ಲೆಲ್ಲೂ ಹರಿಭಾವನೆ ಉಂಟಾದರೆ ಪರಸ್ಪರ ಹೇಗೆ ನಡೆದುಕೊಳ್ಳಬೇಕೆಂಬುದರ ನೀತಿಶಾಸ್ತ್ರವೆಲ್ಲ ಅಂತಃಕರಣದಲ್ಲಿ ಸಹಜವಾಗಿ ಹುಟ್ಟೀತು. ಅದರ ಅಗತ್ಯವೂ ಇರದು. ಅನಂತರ ದೋಷ ದೂರವಾದಾವು, ಪಾಪ ಓಡಿಹೋದಾವು, ಪಾಪದ ಕತ್ತಲೆ ಕಳೆದೀತು.

ತುಕಾರಾಂ ಹೇಳಿದಾರೆ—

ನೀನಾದೆ ನಡೆ ಮುಕ್ತ, ಹರಿನಾಮ ನುಡಿ ನಿತ್ಯ ।
ನಿನಗಿಲ್ಲ ಪಾಪ ಲವ, ಬಳಿಸಾರೆ ನುಡಿಯುತ್ತ ॥ *

ನಡೆ, ಪಾಪ ಮಾಡಲು ನೀನು ಮುಕ್ತ. ಪಾಪ ಮಾಡುವಾಗ ನೀನು ದಣಿಯುತ್ತೀಯೋ, ಇಲ್ಲವೆ ಪಾಪವನ್ನು ಸುಡುವಾಗ ಹರಿನಾಮ ದಣಿಯುತ್ತದೆಯೋ ನೋಡೋಣ. ಹರಿನಾಮದಿದಿರು ತಡೆದು ನಿಲ್ಲುವಂಥ ಗಟ್ಟಿ ಪಾಪ ಎಲ್ಲಿದೆ? "ಕರೀ ತುಜಸೀ ಕರವತಿ." ಎಷ್ಟು ಸಾಧ್ಯವೋ ಅಷ್ಟು ಪಾಪ ಮಾಡು. ನಿನ್ನ ಪಾಪಕ್ಕೂ ಹರಿನಾಮಕ್ಕೂ ಒಂದು ಸಲ ಕಾಳಗ ನಡೆದೇ ಬಿಡಲಿ. ಈ ಜನ್ಮದ ಪಾಪಗಳನ್ನು ಮಾತ್ರವಲ್ಲ—ಅನಂತ ಜನ್ಮದ ಪಾಪಗಳನ್ನೆಲ್ಲ ಒಂದೇ ಕ್ಷಣದಲ್ಲಿ ಸುಟ್ಟು ಬೂದಿ ಮಾಡಬಲ್ಲ ಸಾಮರ್ಥ್ಯವುಂಟು ಈ ನಾಮದಲ್ಲಿ. ಗವಿಯಲ್ಲಿ ಅನಂತ ಯುಗಗಳ

---

* ಚಾಲ ಕೇಲಾಸೀ ಮೋಕಳಾ । ಬೋಲ ವಿಠ್ಠಲ ವೇಳೋ ವೇಳಾ
ತುಜ ಪಾಪ ಚಿ ನಾಹಿ ಐಸೆ । ನಾಮ ಘೇತಾ ಜವಳೀ ವಸೇ

ಕತ್ತಲೆಯಿದ್ದರೂ ಸಹ ಒಂದೇ ಒಂದು ಕಡ್ಡಿ ಗೀಚಿದರೆ ಬೆಳಕಾಗುತ್ತದೆ. ಕತ್ತಲೆ ಹೋಗಿ ಪ್ರಕಾಶವಾಗುತ್ತದೆ. ಪಾಪ ಹಳೆಯದಾಗಿದ್ದಷ್ಟೂ ಬೇಗ ಸಾಯುತ್ತದೆ. ಸಾವನ್ನೆ ಅದು ಇದಿರುನೋಡುತ್ತಿರುತ್ತದೆ. ಹಳೆಯ ಕಟ್ಟಿಗೆ ಬೇಗ ಬೂದಿಯಾಗುವುದಿಲ್ಲವೆ?

ರಾಮನಾಮದ ಬಳಿ ಪಾಪ ಇರಲಾರದು. 'ರಾಮ ಎನ್ನುತ್ತಲೂ ದೆವ್ವ ಓಡಿಹೋಗುತ್ತದೆ' ಎಂದು ಮಕ್ಕಳು ಹೇಳುವುದಿಲ್ಲವೆ. ಚಿಕ್ಕವನಾಗಿ ಇದ್ದಾಗ ನಾನು ರಾತ್ರಿ ಸ್ಮಶಾನಕ್ಕೆ ಹೋಗಿಬರುತ್ತಿದ್ದೆ. ಸ್ಮಶಾನಕ್ಕೆ ಹೋಗಿ ಒಂದು ಗೂಟ ನೆಟ್ಟುಬರುವ ಪಂದ್ಯ ನಡೆಯುತ್ತಿತ್ತು. ಹಾವು, ಕಪ್ಪೆ, ಮುಳ್ಳು ಬೇಕಾದಷ್ಟು. ಅಂಥ ಕತ್ತಲೆಯಲ್ಲೂ ನನಗೇನೂ ಅನಿಸುತ್ತಿರಲಿಲ್ಲ. ಒಂದು ಸಲವೂ ಭೂತ ಕಾಣಿಸಲಿಲ್ಲ. ಕಲ್ಪನೆಯ ಭೂತ ಕಾಣಿಸುವುದಾದರೂ ಹೇಗೆ? ಹತ್ತು ವರ್ಷದ ಎಳೆಯ ಹುಡುಗ. ರಾತ್ರಿ ಸ್ಮಶಾನಕ್ಕೆ ಹೋಗಿ ಬರುವ ಧೈರ್ಯ ಅವನಿಗೆ ಬಂದುದು ಯಾವುದರಿಂದ? ರಾಮನಾಮದಿಂದ. ಅದು ಸತ್ಯರೂಪಿ ಪರಮಾತ್ಮನ ಸಾಮರ್ಥ್ಯ. ಪರಮೇಶ್ವರ ಹತ್ತಿರ ಇರುವನೆಂಬ ಭಾವನೆಯಿದ್ದರೆ ಸರಿ. ಜಗತ್ತೆಲ್ಲ ತಿರುಗಿಬಿದ್ದರೂ ದೇವರ ಸೇವಕ ಅಳುಕುವುದಿಲ್ಲ. ಯಾವ ರಾಕ್ಷಸ ತಿಂದೀತು ಆತನನ್ನು? ಆತನ ಕೆನ್ನೆ ತಿಂದೀತು. ಸತ್ಯವನ್ನು ಆ ರಾಕ್ಷಸ ಜೀರ್ಣಿಸಿಕೊಳ್ಳಲಾರ. ಸತ್ಯವನ್ನು ಜೀರ್ಣಿಸಿಕೊಳ್ಳಬಲ್ಲ ಶಕ್ತಿ ಜಗತ್ತಿನಲ್ಲೇ ಇಲ್ಲ. ಈಶ್ವರನ ಹೆಸರಿನೆದುರಿಗೆ ಪಾಪ ನಿಲ್ಲುವುದೇ ಅಸಾಧ್ಯ. ಎಂತಲೇ ಈಶ್ವರನೊಂದಿಗೆ ಸೇರಿಕೊಳ್ಳಿ. ಅವನ ಕೃಪಾಪಾತ್ರರಾಗಿ. ಎಲ್ಲ ಕರ್ಮಗಳನ್ನೂ ಅವನಿಗರ್ಪಿಸಿ. ಅವನವರೇ ಆಗಿರಿ. ಎಲ್ಲ ಕರ್ಮಗಳ ನೈವೇದ್ಯವನ್ನೂ ಪ್ರಭುವಿಗೇ ಅರ್ಪಿಸಬೇಕೆಂಬ ಭಾವನೆ ದಿನೇದಿನೇ ಹೆಚ್ಚು ಉತ್ಕಟವಾದಲ್ಲಿ ನಿಮ್ಮ ಕ್ಷುದ್ರ ಬಾಳು ದಿವ್ಯ ವಾದೀತು. ಮಲಿನ ಜೀವನ ಸುಂದರವಾದೀತು.

## ೪೮. ಸ್ವಲ್ಪವಾದರೂ ಸವಿಯಿರಲಿ

ಸಾರಾಂಶವಿಷ್ಟೆ: 'ಪತ್ರಂ ಪುಷ್ಪಂ ಫಲಂ ತೋಯಂ' ಏನೇ ಇರಲಿ, ಭಕ್ತಿಯಿದ್ದರೆ ಸಾಕು. ಎಷ್ಟು ಕೊಟ್ಟಿರಿ ಎಂಬುದು ಮುಖ್ಯವಲ್ಲ. ಯಾವ ಭಾವನೆಯಿಂದ ಕೊಟ್ಟಿರಿ ಎನ್ನುವುದು ಮುಖ್ಯ. ಒಮ್ಮೆ ನನಗೂ ಒಬ್ಬ

ಪ್ರೊಫೆಸರರಿಗೂ ಶಿಕ್ಷಣಶಾಸ್ತ್ರದ ಬಗ್ಗೆ ಮಾತು ನಡೆಯಿತು. ಇಬ್ಬರಲ್ಲೂ ವಿಚಾರಭೇದ. ಕೊನೆಗೆ ಪ್ರೊಫೆಸರು 'ನಾನು ಹದಿನೆಂಟು ವರ್ಷ ಈ ಕೆಲಸ ಮಾಡುತ್ತಿದೇನೆ' ಎಂದರು. ತಮ್ಮ ಅಭಿಪ್ರಾಯ ನನಗೆ ಒಪ್ಪಿಗೆಯಾಗುವಂತೆ ಅವರು ಪ್ರಯತ್ನಿಸಬೇಕಾಗಿತ್ತು. ಅದನ್ನು ಬಿಟ್ಟು ಇಷ್ಟು ವರ್ಷ ಶಿಕ್ಷಣಕಾರ್ಯ ಮಾಡುತ್ತಿರುವುದಾಗಿ ಅವರು ಹೇಳಿಕೊಂಡಾಗ ನಾನು "ಹದಿನೆಂಟು ವರ್ಷಕಾಲ ಎತ್ತು ಯಂತ್ರದ ಜೊತೆಗೆ ಸುತ್ತುತ್ತಿದ್ದರೆ ಅದು ಯಂತ್ರಶಾಸ್ತ್ರಜ್ಞನಾದೀತೆ?" ಎಂದೆ. ಯಂತ್ರಶಾಸ್ತ್ರಜ್ಞ ಬೇರೆ. ಗರಗರ ತಿರುಗುವ ಆ ಎತ್ತು ಬೇರೆ. ಶಿಕ್ಷಣಶಾಸ್ತ್ರಜ್ಞ ಬೇರೆ. ಶಿಕ್ಷಣದ ಕೂಲಿ ಮಾಡುವವನು ಬೇರೆ. ನಿಜವಾದ ಶಾಸ್ತ್ರಜ್ಞನಿಗೆ ಆರು ತಿಂಗಳಲ್ಲಿ ಬರುವ ಅನುಭವ, ಇಪ್ಪತ್ತುವರ್ಷ ಕೆಲಸ ಮಾಡುವ ಕೂಲಿಗಾರನಿಗೆ ತಿಳಿಯಲಾರದು. ಸಾರಾಂಶವಿಷ್ಟೆ. ಇಷ್ಟು ವರ್ಷ ಕೆಲಸಮಾಡಿವೆ ಎಂದು ಆ ಪ್ರೊಫೆಸರು ತನ್ನ ಗಡ್ಡ ತೋರಿಸಿದ. ಗಡ್ಡದಿಂದ ಸತ್ಯ ಸಿದ್ಧವಾಗುವುದಿಲ್ಲ. ಹಾಗೇ ಪರಮೇಶ್ವರನ ಮುಂದೆ ಎಷ್ಟು ರಾಶಿ ಹಾಕಿದರೂ ಅದಕ್ಕೆ ಮಹತ್ವವಿಲ್ಲ. ಅಳತೆ, ರೀತಿ, ಬೆಲೆಗಳಿಗೆ ಮಹತ್ವವಿಲ್ಲ. ಭಾವನೆಗೆ ಮಾತ್ರ ಮಹತ್ವ. ಅರ್ಪಣ ಮಾಡಿದುದೇನು, ಎಷ್ಟು, ಎಂಬುದು ಮುಖ್ಯವಲ್ಲ. ಅರ್ಪಣೆ ಮಾಡಿದುದು ಹೇಗೆ – ಎನ್ನುವುದೇ ಮುಖ್ಯ. ಗೀತೆಯಲ್ಲಿರುವ ಶ್ಲೋಕ ಬರೀ ಏಳು ನೂರು. ಹತ್ತು ಹನ್ನೆರಡು ಸಾವಿರ ಶ್ಲೋಕದ ಗ್ರಂಥಗಳೂ ಉಂಟು. ವಸ್ತು ದೊಡ್ಡದಾಗಿದ್ದ ಮಾತ್ರಕ್ಕೆ ಅದರ ಉಪಯೋಗವೂ ದೊಡ್ಡದೆಂದೇನೂ ಅಲ್ಲ. ಆ ವಸ್ತುವಿನಲ್ಲಿರುವ ತೇಜಸ್ಸು ಎಂಥದು, ಸಾಮರ್ಥ್ಯ ಎಂಥದು ಎಂಬುದನ್ನು ನೋಡಬೇಕು. ಬಾಳಿನಲ್ಲಿ ಮಾಡಿದ ಕ್ರಿಯೆಗಳೆಷ್ಟು ಎಂಬುದು ಮಹತ್ವದ್ದಲ್ಲ. ಈಶ್ವರಾರ್ಪಣ ಬುದ್ಧಿಯಿಂದ ಒಂದೇ ಒಂದು ಕ್ರಿಯೆ ನಡೆದರೂ ಸಹ ಅದರಿಂದಲೇ ಸಾಕಷ್ಟು ಅನುಭವ ದೊರೆತೀತು. ಹತ್ತುಹನ್ನೆರಡು ವರ್ಷಗಳಲ್ಲಿ ದೊರೆಯದಂಥ ಅನುಭವ ಒಂದೊಂದು ಸಲ ಒಂದೇ ಕ್ಷಣದಲ್ಲಿ ದೊರೆಯುವುದುಂಟು.

ಬಾಳಿನಲ್ಲಿ ಸಾಧಾರಣ ಕರ್ಮ, ನಾದಾ ಕ್ರಿಯೆ—ಎಲ್ಲವನ್ನೂ ಪರಮಾತ್ಮನಿಗೆ ಅರ್ಪಿಸಿ. ಎಂದರೆ ಬದುಕಿನಲ್ಲಿ ಸಾಮರ್ಥ್ಯ ಬಂದೀತು. ಮೋಕ್ಷ ಕೈಗೆ ಸಿಕ್ಕೀತು. ಕರ್ಮ ಮಾಡುವುದು, ಅದರ ಫಲವನ್ನು

ತ್ಯಜಿಸದೆ ಈಶ್ವರನಿಗರ್ಪಿಸುವುದು—ರಾಜಯೋಗ. ಕರ್ಮಯೋಗಕ್ಕೂ ಮುಂದಿನ ಹೆಜ್ಜೆ ಇದು. 'ಕರ್ಮ ಮಾಡಿ, ಫಲ ಬಿಟ್ಟುಬಿಡಿ. ಫಲದ ಆಸೆ ಇಟ್ಟುಕೊಳ್ಳಬೇಡಿ' ಎಂದು ಕರ್ಮಯೋಗ ಹೇಳುತ್ತದೆ. ಅಲ್ಲಿಗೆ ಕರ್ಮಯೋಗ ಮುಗಿಯಿತು. 'ಕರ್ಮದ ಫಲವನ್ನು ತ್ಯಜಿಸಬೇಡಿ. ಎಲ್ಲ ಕರ್ಮಗಳನ್ನೂ ದೇವರಿಗರ್ಪಿಸಿ. ಅವು ಹೂವಿದ್ದಂತೆ. ಮುಂದಕ್ಕೊಯ್ಯುವ ಸಾಧನ. ಆ ಮೂರ್ತಿಗೆ ಅದನ್ನರ್ಪಿಸಿ. ಒಂದು ಕಡೆಯಿಂದ ಕರ್ಮ, ಒಂದು ಕಡೆಯಿಂದ ಭಕ್ತಿ—ಹೀಗೆ ಸಂಯೋಗಮಾಡಿ ಬಾಳನ್ನು ಸುಂದರಗೊಳಿಸಿರಿ. ಫಲದ ತ್ಯಾಗ ಮಾಡಬೇಡಿ. ಅದನ್ನು ದೇವನೊಂದಿಗೆ ಕೂಡಿಸಿ' ಎನ್ನುತ್ತದೆ ರಾಜಯೋಗ. ಕರ್ಮಯೋಗದಲ್ಲಿ ಹರಿದ ಫಲಗಳನ್ನು ರಾಜಯೋಗದಲ್ಲಿ ಬೆಸೆಸಲಾಗುತ್ತದೆ. ನೆಡುವುದಕ್ಕೂ ಬಿಸುಡುವುದಕ್ಕೂ ಬಹಳ ಅಂತರವುಂಟು. ನೆಟ್ಟದ್ದು ಅನಂತವಾಗಿ ಮತ್ತೆ ಸಿಕ್ಕುತ್ತದೆ. ಬಿಸುಟದ್ದು ಹಾಗೇ ನಷ್ಟವಾಗಿ ಹೋಗುತ್ತದೆ. ಈಶ್ವರನಿಗೆ ಅರ್ಪಿಸಿದ ಕರ್ಮ ನೆಟ್ಟಂತೆ. ಅದರಿಂದ ಬಾಳಿನಲ್ಲಿ ಅಪಾರ ಆನಂದ ತುಂಬುತ್ತದೆ. ಅಪಾರ ಪಾವಿತ್ರ್ಯ ಬರುತ್ತದೆ.

ಭಾನುವಾರ,
೧೭–೪–೧೯೩೨.

## ೪೯. ಗೀತೆಯ ಪೂರ್ವಾರ್ಧ – ಸಿಂಹಾವಲೋಕನ

ಇಲ್ಲಿಗೆ ಗೀತೆಯ ಪೂರ್ವಾರ್ಧ ಮುಗಿಯಿತು. ಉತ್ತರಾರ್ಧಕ್ಕೆ ಪ್ರವೇಶಿಸುವ ಮೊದಲು, ಇದುವರೆಗೆ ಆದ ಭಾಗದ ಸಾರಾಂಶವೇನೆಂದು ಕಂಡುಕೊಂಡರೆ ಒಳ್ಳೆಯದಾದೀತು. ಗೀತೆ ಮೋಹನಾಶಾರ್ಥವೂ ಸ್ವಧರ್ಮ ಪ್ರವೃತ್ಯರ್ಥವೂ ಆಗಿದೆಯೆಂದು ಮೊದಲನೆಯ ಅಧ್ಯಾಯದಲ್ಲಿ. ಎರಡನೆಯದರಲ್ಲಿ ನಮಗೆ ಬಾಳಿನ ಸಿದ್ಧಾಂತ, ಕರ್ಮಯೋಗ, ಸ್ಥಿತಪ್ರಜ್ಞದರ್ಶನ ಆಯಿತು. ಮೂರು ನಾಲ್ಕು ಐದನೆಯ ಅಧ್ಯಾಯಗಳಲ್ಲಿ ಕರ್ಮ, ವಿಕರ್ಮ ಅಕರ್ಮಗಳ ವಿವರಣೆ ದೊರೆಯಿತು. ಸ್ವಧರ್ಮಾಚರಣೆಯೇ ಕರ್ಮ ಹೊರಗಿನಿಂದ ಸ್ವಧರ್ಮಾಚರಣೆಯ ಕರ್ಮ ನಡೆದಿದ್ದಾಗ ಅದಕ್ಕೆ ಸಹಾಯವಾಗಿ ನಡೆಯಬೇಕಾದ ಮಾನಸಿಕ ಕರ್ಮವೇ ವಿಕರ್ಮ. ಕರ್ಮ ವಿಕರ್ಮಗಳೆರಡೂ ಒಂದುಗೂಡಿ ಚಿತ್ತಶುದ್ಧಿ ಪೂರ್ಣವಾದಾಗ, ಎಲ್ಲ ತಳಮಳ, ವಾಸನೆ, ವಿಕಾರ, ಭೇದಭಾವಗಳು ಇಲ್ಲವಾದಾಗ ಅಕರ್ಮದಶೆ ಪ್ರಾಪ್ತವಾಗುತ್ತದೆ. ಈ ಅಕರ್ಮದಶೆಯಲ್ಲೂ ಮತ್ತೆ ಎರಡು ರೀತಿ. ಹಗಲಿರುಳೂ ಕರ್ಮ ಮಾಡುತ್ತಿದ್ದರೂ ಸಹ ಕೊಂಚವೂ ಮಾಡದಂತೆ ಅನುಭವಿಸುವುದು ಒಂದು ರೀತಿ. ಇದಕ್ಕೆ ಪ್ರತಿಯಾಗಿ ಏನನ್ನೂ ಮಾಡದೆಯೆ ಅವ್ಯಾಹತವಾಗಿ ಕರ್ಮ ನಡೆಸಿರುವುದು ಇನ್ನೊಂದು ರೀತಿ. ಈ ಎರಡು ರೀತಿಗಳಿಂದ ಅಕರ್ಮಸ್ಥಿತಿ ಲಭಿಸುತ್ತದೆ. ಈ ರೀತಿಗಳೆರಡೂ ತೋರಿಕೆಗೆ ಭಿನ್ನವಾಗಿರುವಂತೆ ಕಂಡರೂ ಅವುಗಳ ಸ್ವರೂಪ ಮಾತ್ರ ಒಂದೇ. ಈ ರೀತಿಗಳಿಗೆ ಸಂನ್ಯಾಸ, ಕರ್ಮಯೋಗ ಎಂದು ಹೆಸರಿದ್ದರೂ ಎರಡರ ಸಾರವೂ ಒಂದೇ. ಕಡೆಯ ಅಂತಿಮ ಗುರಿ ಅಕರ್ಮ ಸ್ಥಿತಿ. ಮೋಕ್ಷವೆನ್ನುವುದು ಅದಕ್ಕೇ. ಹೀಗೆ ಗೀತೆಯ ಮೊದಲ ಐದು ಅಧ್ಯಾಯಗಳಲ್ಲಿ ಬಾಳಿನ ಎಲ್ಲ ಶಾಸ್ತ್ರಾರ್ಥವೂ ಬಂದುಹೋಯಿತು.

ಅನಂತರ ಈ ಅಕರ್ಮರೂಪಿ ಗುರಿಯನ್ನು ಪಡೆಯಲು ಅಗತ್ಯವಾದ ಅನೇಕ ದಾರಿ, ಒಳಗಿನಿಂದ ಮನಸ್ಸನ್ನು ಶುದ್ಧಗೊಳಿಸುವ ಅನೇಕ ಸಾಧನೆಗಳ ವಿಚಾರ, ಆರನೆಯ ಅಧ್ಯಾಯದಿಂದ ಆರಂಭವಾಯಿತು.

ಆರನೆಯ ಅಧ್ಯಾಯದಲ್ಲಿ ಚಿತ್ತದ ಏಕಾಗ್ರತೆಗಾಗಿ ಧ್ಯಾನಯೋಗವನ್ನು ಸೂಚಿಸಿ ಅಭ್ಯಾಸ, ವೈರಾಗ್ಯಗಳು ಅದಕ್ಕೆ ಅಗತ್ಯವೆಂದು ಹೇಳಿದೆ. ಏಳನೆಯ ಅಧ್ಯಾಯದಲ್ಲಿ ವಿಶಾಲವಾದ ಭಕ್ತಿಯ ಮಹಾಸಾಧನೆಯನ್ನು ಹೇಳಿದೆ. ಪ್ರೇಮದಿಂದಲೋ, ಜಿಜ್ಞಾಸೆಯಿಂದಲೋ, ವಿಶ್ವಕಲ್ಯಾಣದ ಆಸಕ್ತಿಯಿಂದಲೋ, ಇಲ್ಲವೆ ವೈಯಕ್ತಿಕ ಕಾಮನೆಯಿಂದಲೋ – ಈಶ್ವರನ ಕಡೆ ಹೇಗಾದರೂ ಹೋಗಬಹುದು. ಅಂತೂ ಒಮ್ಮೆ ಆತನ ದರಬಾರಿನಲ್ಲಿ ಪ್ರವೇಶ ಮಾಡಿದರೆ ಸರಿ. ಈ ಅಧ್ಯಾಯದಲ್ಲಿನ ಈ ವಿಷಯವನ್ನು ಪ್ರಪತ್ತಿ ಯೋಗ, ಎಂದರೆ ಈಶ್ವರನಿಗೆ ಶರಣು ಹೋಗೆಂದು ಹೇಳುವ ಯೋಗ— ಎಂದು ನಾನು ಕರೆಯುತ್ತೇನೆ. ಏಳನೆಯದರಲ್ಲಿ ಪ್ರಪತ್ತಿಯೋಗ, ಎಂಟನೆಯದರಲ್ಲಿ ಸಾತತ್ಯಯೋಗ. ಇಲ್ಲಿ ನಾ ಕೊಟ್ಟ ಹೆಸರುಗಳು ಪುಸ್ತಕದಲ್ಲಿ ಕಾಣಿಸಲಿಕ್ಕಿಲ್ಲ. ನನಗೆ ಉಪಯೋಗವಾಗುವಂಥ ಹೆಸರನ್ನು ನಾನು ಕೊಡುತ್ತಿದೇನೆ. ಸಾಧನೆಯನ್ನು ಅಂತ್ಯಕಾಲದವರೆಗೂ ಸತತವಾಗಿ ನಡಸುವುದು ಸಾತತ್ಯಯೋಗ. ಒಮ್ಮೆ ತುಳಿದ ದಾರಿಯಲ್ಲಿಯೆ ಸತತವಾಗಿ ಹೆಜ್ಜೆ ಬೀಳುತ್ತ ಹೋಗಬೇಕು. ಹಿಡಿದೂ ಬಿಟ್ಟೂ ಸಾಗುವ ಮನುಷ್ಯ ಗುರಿಯನ್ನೆಂದೂ ತಲಪಲಾರ. ಸಾಧನೆ ಮಾಡುವುದಾದರೂ ಎಲ್ಲಿಯತನಕ ಎಂದು ನಿರಾಶೆಯಿಂದಾಗಲಿ ಬೇಸರದಿಂದಾಗಲಿ ಯೋಚಿಸಿ ಉಪಯೋಗವಿಲ್ಲ. ಫಲ ದೊರೆಯುವವರೆಗೂ ಸಾಧನೆ ನಡೆದಿರಬೇಕು.

ಈ ಸಾತತ್ಯಯೋಗವನ್ನು ಹೇಳಿ ಒಂಬತ್ತನೆಯ ಅಧ್ಯಾಯದಲ್ಲಿ ಒಂದು ಸಾಧಾರಣ, ಆದರೆ ಬಾಳಿನ ಬಣ್ಣವನ್ನೆಲ್ಲ ಬದಲಿಸುವ, ವಸ್ತುವನ್ನು ಭಗವಂತ ಕೊಟ್ಟ. ಅದು ರಾಜಯೋಗ. ಕ್ಷಣಕ್ಷಣಕ್ಕೂ ನಡೆಯುವ ಕರ್ಮಗಳನ್ನೆಲ್ಲ ಈಶ್ವರಾರ್ಪಣ ಮಾಡು ಎನ್ನುತ್ತದೆ ಒಂಬತ್ತನೆಯ ಅಧ್ಯಾಯ. ಈ ಒಂದು ವಿಷಯದಿಂದಾಗಿ ಸರ್ವ ಶಾಸ್ತ್ರಸಾಧನಗಳು, ಕರ್ಮ ವಿಕರ್ಮಗಳು ಮುಳುಗಿಹೋದವು. ಈ ಸಮರ್ಪಣ ಯೋಗದಲ್ಲಿ ಎಲ್ಲ ಕರ್ಮಸಾಧನೆಗಳೂ ಮುಳುಗಿಹೋದವು. ಸಮರ್ಪಣಯೋಗವೆಂದ ರೇನೆ ರಾಜಯೋಗ. ಇಲ್ಲಿಗೆ ಎಲ್ಲ ಸಾಧನೆಗಳಿಗೂ ಮುಗಿತಾಯ. ಹೀಗೆ ವ್ಯಾಪಕವೂ ಸಮರ್ಥವೂ ಆದ ಈ ಈಶ್ವರಾರ್ಪಣ ವಿಚಾರ ಸಾಧಾರಣವಾಗಿ ಕಾಣಿಸಿದರೂ ತುಂಬ ಕಷ್ಟದ್ದಾಗಿಬಿಟ್ಟಿದೆ. ಮನೆಯಲ್ಲಿ ಕುಳಿತುಕೊಂಡ

ಹಾಗೇ, ಅತ್ಯಂತ ಅಜ್ಞಾನಿಯಿಂದ ಮೊದಲಾಗಿ ವಿದ್ವಾಂಸರವರೆಗೆ ಎಲ್ಲರಿಗೂ ವಿಶೇಷ ಶ್ರಮವಿಲ್ಲದೆಯೆ ಸಾಧ್ಯವಾಗುವ ಸಾಧನೆ ಇದು. ಎಂತಲೇ ಸುಲಭ. ಆದರೆ ಸುಲಭವಾದರೂ ಇದನ್ನು ಸಾಧಿಸಲು ಬಹಳ ಪುಣ್ಯ ಪಡೆದಿರಬೇಕು.

'ಅನೇಕ ಸುಕೃತದ ಯೋಗ, ವಿಠ್ಠಲನ ಪ್ರೇಮದ ಮಾರ್ಗ।' *

ಅನಂತಜನ್ಮದ ಪುಣ್ಯವಿದ್ದರೆ ಮಾತ್ರ ಈಶ್ವರನಲ್ಲಿ ಆಸಕ್ತಿಯುಂಟಾಗುತ್ತದೆ. ಕಣ್ಣಿಗೆ ಏನಾದರೂ ಕೊಂಚ ತಾಕಿದರೆ ಸಾಕು, ಗಳಗಳನೆ ಕಣ್ಣೀರು ಉದುರುತ್ತದೆ. ಆದರೆ ಪರಮೇಶ್ವರನ ಹೆಸರು ಉಚ್ಚರಿಸುತ್ತಲೂ ಎರಡು ಹನಿಯಾದರೂ ಕಣ್ಣಿನಲ್ಲಿ ಬಾರದು. ಅದಕ್ಕೆ ಉಪಾಯವೇನು? ಸಾಧುಗಳು ಹೇಳುವಂತೆ ಒಂದು ಅರ್ಥದಿಂದ ಅತಿ ಸುಲಭವಾದ ಭಾವ ಇದು. ಹಾಗೆಯೇ ಕಠಿಣವೂ ಹೌದು. ಈಗಿನ ಕಾಲದಲ್ಲಂತೂ ತೀರಾ ಕಠಿಣ.

ಇವೊತ್ತು ಜಡವಾದದ ಪರೆ ನಮ್ಮ ಕಣ್ಣಿನ ಮೇಲೆ ಇದೆ. ಈಶ್ವರನು ಇರುವುದಾದರೂ ಎಲ್ಲಿ—ಎಂಬ ಪ್ರಶ್ನೆ ಪ್ರಾರಂಭವಾಗುತ್ತದೆ. ಆತ ಯಾರಿಗೂ, ಎಲ್ಲೂ ಪ್ರತೀತವಾಗುವುದಿಲ್ಲ. ಬಾಳೆಲ್ಲವೂ ವಿಕಾರಮಯವೂ, ವಿಷಮತಾಪೂರ್ಣವೂ, ವಿಷಯಲೋಲುಪವೂ ಆಗಿದೆ. ಅತ್ಯುಚ್ಚವಿಚಾರ ಮಾಡುವ ತತ್ತ್ವಜ್ಞಾನಿಗಳಿಗೂ ಸಹ, ಇಂದು ಎಲ್ಲರಿಗೂ ಹೊಟ್ಟೆ ತುಂಬುವಷ್ಟು ರೊಟ್ಟಿ ಹೇಗೆ ಸಿಕ್ಕೀತೆಂಬುದನ್ನು ಬಿಟ್ಟರೆ ಬೇರೆ ವಿಚಾರವಿಲ್ಲ. ಇದು ಅವರ ತಪ್ಪಲ್ಲ. ಇಂದು ಅನೇಕರಿಗೆ ಹೊಟ್ಟೆಗೇ ಇಲ್ಲ. ಇಂದಿನ ಅತಿ ದೊಡ್ಡ ಸಮಸ್ಯೆಯೆಂದರೆ ಅನ್ನ. ಈ ಪ್ರಶ್ನೆಯನ್ನು ಬಿಡಿಸುವುದರಲ್ಲೇ ಬುದ್ಧಿಯೆಲ್ಲವೂ ತೊಡಗಿಕೊಂಡಿದೆ. "ಬುಭುಕ್ಷಮಾಣಃ ರುದ್ರರೂಪೇಣ ಅವತಿಷ್ಠಂತೇ" ಎಂದು ಸಾಯಣಾಚಾರ್ಯರು ರುದ್ರನ ವ್ಯಾಖ್ಯೆ ಮಾಡಿದ್ದಾರೆ. ಹಸಿದ ಜನ ಎಂದರೇನೆ ರುದ್ರನ ಅವತಾರ. ಸಾಮ್ರಾಜ್ಯವಾದ ಇತ್ಯಾದಿ ಹಲವು ವಾದ —ತತ್ತ್ವ, ರಾಜಕೀಯ, ಈ ಅನ್ನಕ್ಕಾಗಿ ತಲೆಯೆತ್ತಿ ನಿಂತಿವೆ. ಈ ಪ್ರಶ್ನೆಯಿಂದ ದೂರವಾಗುವ ಅವಕಾಶವೂ ಇಲ್ಲ. ಯಾರೊಂದಿಗೂ ಕಲಹವಾಡದೆ ಸುಖವಾಗಿ ಎರಡು ತುತ್ತು ಅನ್ನ ಹೇಗೆ ತಿನ್ನಬಹುದೆಂಬ ವಿಚಾರದಲ್ಲೇ ಇಂದು ದಿನ ಕಳೆಯುತ್ತದೆ. ಇಂಥ ಚಮತ್ಕಾರಿಕ ಸಮಾಜರಚನೆಯಿರುವಲ್ಲಿ

* ಬಹುತಾ ಸುಕೃತಾಂಚೀ ಜೋಡೀ। ಮ್ಹಣುನೀ ವಿಠ್ಠಲೀ ಆವಡೀ॥

ಈಶ್ವರಾರ್ಪಣದಂಥ ಸಾದಾ ಸುಲಭ ವಿಷಯವೂ ಕಷ್ಟತರದ್ದಾಗಿರು ವುದೇನೂ ಆಶ್ಚರ್ಯವಲ್ಲ. ಇದಕ್ಕೇನು ಉಪಾಯ ? ಈಶ್ವರಾರ್ಪಣ ಯೋಗವನ್ನು ಸಾಧಿಸುವುದು ಹೇಗೆ, ಅದು ಸುಲಭವಾಗುವುದು ಹೇಗೆ ಎಂಬುದನ್ನು ಈ ಅಧ್ಯಾಯದಲ್ಲಿ ನೋಡೋಣ.

## ೫೦. ಪರಮೇಶ್ವರ ದರ್ಶನಕ್ಕೆ ಬಾಲಬೋಧದ ರೀತಿ

ಚಿಕ್ಕ ಮಕ್ಕಳಿಗೆ ಕಲಿಸಲು ನಾವು ಯೋಚಿಸುವ ಉಪಾಯಗಳನ್ನೇ ಎಲ್ಲೆಡೆಯಲ್ಲೂ ಪರಮಾತ್ಮನನ್ನು ನೋಡಲು ಈ ಅಧ್ಯಾಯದಲ್ಲಿ ಸೂಚಿಸಿದೆ. ಮಕ್ಕಳಿಗೆ ಅಕ್ಷರ ಕಲಿಸುವುದು ಎರಡು ರೀತಿಯಿಂದ. ಮೊದಲು ಮೊದಲು ಅಕ್ಷರಗಳನ್ನು ದೊಡ್ಡದಾಗಿ ಬರೆದು ತೋರಿಸುವುದೊಂದು ರೀತಿ. ಮುಂದೆ ಈ ಅಕ್ಷರಗಳನ್ನೇ ಚಿಕ್ಕದಾಗಿ ಬರೆದುತೋರಿಸಿ ಕಲಿಸುತ್ತೇವೆ. ಅದೇ 'ಕ'. ಅದೇ 'ಗ'. ಮೊದಲು ದೊಡ್ಡದು. ಅನಂತರ ಚಿಕ್ಕದು. ಇದೊಂದು ಪದ್ಧತಿ. ಗೊಂದಲವಿಲ್ಲದ ಸಾದಾ ಅಕ್ಷರಗಳನ್ನು ಮೊದಲು ಕಲಿಸಿ ಅನಂತರ ಕಷ್ಟಸಾಧ್ಯ ಅಕ್ಷರ ಕಲಿಸುವುದು ಇನ್ನೊಂದು ರೀತಿ. ಪರಮೇಶ್ವರನನ್ನು ಕಾಣಲು ಕಲಿಸುವುದೂ ಹೀಗೇ. ಮೊದಲು ಸ್ಪಷ್ಟವಾದ ಪರಮೇಶ್ವರನನ್ನು ನೋಡುವುದು. ಸಮುದ್ರ, ಪರ್ವತ ಇತ್ಯಾದಿಗಳಲ್ಲಿ ಪ್ರಕಟವಾದ ಪರಮಾತ್ಮ ತಟ್ಟನೆ ಗೋಚರಿಸುತ್ತಾನೆ. ಈ ಸ್ಥೂಲ ಪರಮಾತ್ಮ ಅರ್ಥ ವಾದಲ್ಲಿ ಅನಂತರ ಒಂದು ನೀರಿನ ಹನಿಯಲ್ಲಿ, ಒಂದು ಮಣ್ಣಿನ ಕಣದಲ್ಲಿ ಕೂಡ ಆತನಿರುವುದು ಅರ್ಥವಾದೀತು. ದೊಡ್ಡ 'ಕ' ಸಣ್ಣ 'ಕ' ಗಳಲ್ಲಿ ವ್ಯತ್ಯಾಸವೇನೂ ಇಲ್ಲ. ಸ್ಥೂಲದಲ್ಲಿರುವುದೇ ಸೂಕ್ಷ್ಮದಲ್ಲಿದೆ. ಇದು ಒಂದು ರೀತಿ.

ಇನ್ನೂ ಒಂದು ರೀತಿ, ಗೊಂದಲಕ್ಕೊಳಗಾಗದ ಹಾಗೆ ಸರಲ ಪರಮಾತ್ಮನನ್ನು ಮೊದಲು ನೋಡುವುದು. ಅನಂತರ ಕೊಂಚ ಗೊಂದಲ ದ್ದಾದರೂ ಸರಿ. ಶುದ್ಧ ಪರಮಾತ್ಮನ ಆವಿರ್ಭಾವ ಸಹಜವಾಗಿ ಪ್ರಕಟ ವಾಗಿದ್ದಲ್ಲಿ ಅದನ್ನು ಒಡನೆಯೆ ಗ್ರಹಿಸಲು ಸಾಧ್ಯವಾಗುತ್ತದೆ. ರಾಮನಲ್ಲಿ ಪ್ರಕಟವಾದ ಪರಮಾತ್ಮನ ಆವಿರ್ಭಾವ ಅರ್ಥವಾದ ಹಾಗೆ. ಈ ರಾಮ ಎನ್ನುವ ಶಬ್ದ ಸರಲವಾದುದು. ಗೊಂದಲಕ್ಕೆಡೆಗೊಡದ ಪರಮೇಶ್ವರ ಈತ.

ರಾವಣ ಎಂಬ ಶಬ್ದವೋ? ಅದು ಸಂಯುಕ್ತಾಕ್ಷರ. ಅಲ್ಲಿ ಏನೋ ಮಿಶ್ರಣವುಂಟು. ರಾವಣನ ತಪಸ್ಸು, ಕರ್ಮಶಕ್ತಿಗಳೇನೋ ಘನವೆ. ಆದರೆ ಅದರಲ್ಲಿ ಕ್ರೂರತನ ಸೇರಿದೆ. ಮೊದಲು ರಾಮ ಎನ್ನುವ ಸರಲ ಅಕ್ಷರ ಕಲಿಯಿರಿ. ದಯೆ, ವಾತ್ಸಲ್ಯ, ಪ್ರೀತಿಗಳುಳ್ಳ ರಾಮ ಸಾಕ್ಷಾತ್ ಪರಮೇಶ್ವರ. ಆತನನ್ನು ಬೇಗನೆ ಗ್ರಹಿಸಬಹುದು. ರಾವಣನಲ್ಲಿನ ದೇವರನ್ನು ಕಾಣಲು ಕೊಂಚ ಕಾಲ ಹಿಡಿದೀತು. ಮೊದಲು ಸರಲ ಅಕ್ಷರ. ಅನಂತರ ಸಂಯುಕ್ತಾಕ್ಷರ. ಸಜ್ಜನರಲ್ಲಿ ಮೊದಲು ಪರಮಾತ್ಮನನ್ನು ಕಂಡು ಅನಂತರ ದುರ್ಜನರಲ್ಲೂ ಕಾಣಲು ಕಲಿಯಬೇಕು. ಸಾಗರದಲ್ಲಿನ ವಿಶಾಲ ಪರಮೇಶ್ವರನೇ ಆ ನೀರಿನ ಹನಿಯಲ್ಲೂ ಇದಾನೆ. ರಾಮಚಂದ್ರ ನಲ್ಲಿನ ಪರಮೇಶ್ವರನೇ ರಾವಣನಲ್ಲೂ ಇದಾನೆ. ಸ್ಥೂಲದಲ್ಲಿರುವುದೇ ಸೂಕ್ಷ್ಮದಲ್ಲಿ. ಸುಲಭತೆಯಲ್ಲಿರುವುದೇ ಕಠಿನತೆಯಲ್ಲಿ. ಈ ಎರಡೂ ರೀತಿಯಿಂದ ನಾವು ಈ ವಿಶ್ವಗ್ರಂಥವನ್ನೋದಲು ಕಲಿಯಬೇಕಾಗಿದೆ.

ಈ ಅಪಾರ ಸೃಷ್ಟಿಯೆಲ್ಲ ಈಶ್ವರನ ಪುಸ್ತಕವಿದ್ದಂತೆ. ಕಣ್ಣಿನ ಮೇಲೆ ದಪ್ಪ ಪರದೆ ಬಿದ್ದಿದ್ದಾಗ ಈ ಪುಸ್ತಕ ಮುಚ್ಚಿದಂತೆ ತೋರುತ್ತದೆ. ಸೃಷ್ಟಿಯ ಈ ಪುಸ್ತಕದಲ್ಲಿ ಸುಂದರ ಅಕ್ಷರಗಳಿಂದ ಪರಮಾತ್ಮ ಎಲ್ಲೆಲ್ಲೂ ಬರೆದಿದಾನೆ. ನಮಗೆ ಅದು ಕಾಣದು. ಹತ್ತಿರದಲ್ಲೇ ಇರುವ ಸಾದಾ ಈಶ್ವರರೂಪ ಮನುಷ್ಯನಿಗೆ ಅರ್ಥವಾಗದು. ದೂರದಲ್ಲಿರುವ ಪ್ರಖರ ರೂಪವನ್ನು ತಡೆಯಲಾಗದು. ಈಶ್ವರ ದರ್ಶನಕ್ಕೆ ಇದೊಂದು ದೊಡ್ಡ ವಿಘ್ನ. ತಾಯಿಯಲ್ಲೇ ದೇವರನ್ನು ಕಾಣು—ಎಂದು ಹೇಳಿದಾಗ ದೇವರು ಇಷ್ಟು ಸಾದಾ ಇರುವುದುಂಟೆ ಎಂದು ಮನುಷ್ಯನ ಪ್ರಶ್ನೆ. ಪ್ರಖರ ಪರಮಾತ್ಮ ಪ್ರಕಟವಾದರೆ ನೀನು ತಡೆಯಬಲ್ಲೆಯಾ? ದೂರದ ಸೂರ್ಯ ಹತ್ತಿರ ಬರಲೆಂದು ಕುಂತಿ ಆಶಿಸಿದಳು. ಆದರೆ ಆತ ಹತ್ತಿರ ಬಂದ ಹಾಗೆ ಆಕೆ ಉರಿಯತೊಡಗಿದಳು—ಆ ಉಗ್ರತೆಯನ್ನು ಸಹಿಸಲಾರದೆ. ತನ್ನ ಎಲ್ಲ ಶಕ್ತಿಯಿಂದ ಈಶ್ವರ ಎದುರಿಗೆ ಬಂದು ನಿಂತರೆ ತಡೆಯಲಾಗುವುದಿಲ್ಲ. ತಾಯಿಯ ಸೌಮ್ಯರೂಪದಿಂದ ಕಾಣಿಸಿದರೆ ನಂಬಲಾಗುವುದಿಲ್ಲ. ಮಿಠಾಯಿ ಜೀರ್ಣವಾಗದು. ಸಾದಾ ಹಾಲು ರುಚಿಸದು. ಈ ಲಕ್ಷಣ ರೋಗದ್ದು, ಮರಣದ್ದು. ಪರಮಾತ್ಮನ ದರ್ಶನಕ್ಕೆ ಇಂಥ ರೋಗಿಷ್ಟ ಮನಃಸ್ಥಿತಿ

ಸಲ್ಲದು. ಅದನ್ನು ಬಿಟ್ಟುಬಿಡಲೇಬೇಕು. ಮೊದಲು ನಮ್ಮ ಬಳಿ ಇರುವ ಸ್ಪಷ್ಟ, ಸರಲ ಪರಮಾತ್ಮನನ್ನು ನೋಡಬೇಕು. ಅನಂತರ ಸೂಕ್ಷ್ಮ. ಕಠಿನ ಪರಮಾತ್ಮನನ್ನು ನೋಡಬೇಕು.

## ೫೧. ಮಾನವರೊಳಗಿನ ದೇವರು

ಮೊಟ್ಟಮೊದಲನೆಯ ಪರಮಾತ್ಮ-ಮೂರ್ತಿ ತಾಯಿ. 'ಮಾತೃ ದೇವೋ ಭವ' ಎಂದು ಹೇಳುತ್ತದೆ ಶ್ರುತಿ. ಹುಟ್ಟುತ್ತಲೂ ಮಗುವಿಗೆ ತಾಯಿಯ ದರ್ಶನ. ವಾತ್ಸಲ್ಯರೂಪದಿಂದ ಪರಮಾತ್ಮನ ಮೂರ್ತಿಯೆ ಅಲ್ಲಿ ನಿಂತಹಾಗಿರುತ್ತದೆ. ಈ ತಾಯಿಯ ವ್ಯಾಪ್ತಿಯನ್ನೇ ಬೆಳೆಸಿ 'ವಂದೇ ಮಾತರಂ' ಎಂದು ರಾಷ್ಟ್ರಮಾತೆಯನ್ನು, ಮುಂದೆ ಭೂಮಾತೆ ಪೃಥ್ವಿಯನ್ನು ಪೂಜಿಸುತ್ತೇವೆ. ಆದರೆ ಮೊದಲಿಗೆ ಮಗುವಿನೆದುರು ನಿಂತ ಪರಮಾತ್ಮನ ಉಚ್ಚ ಪ್ರತಿಮೆ ತಾಯಿಯದೇ! ತಾಯಿಯ ಪೂಜೆಯಿಂದ ಮುಕ್ತಿ ದೊರೆಯುವುದೇನೂ ಅಸಾಧ್ಯವಲ್ಲ. ತಾಯಿಯ ಪೂಜೆ ಎಂದರೆ ವಾತ್ಸಲ್ಯ ರೂಪದಿಂದ ಬಂದ ಪರಮಾತ್ಮನ ಪೂಜೆ. ತಾಯಿ ನಿಮಿತ್ತಮಾತ್ರ. ಅವಳಲ್ಲಿ ತನ್ನ ವಾತ್ಸಲ್ಯವನ್ನಿರಿಸಿ ಪರಮಾತ್ಮ ಅವಳನ್ನು ಕುಣಿಸುತ್ತಾನೆ. ತನ್ನೊಳಗೆ ಇಷ್ಟೊಂದು ವಾತ್ಸಲ್ಯವೇಕೆ ಎಂಬುದು ಆಕೆಗೆ ತಿಳಿಯದು. ಇಳಿವಯಸ್ಸಿನಲ್ಲಿ ಉಪಯೋಗಕ್ಕೆ ಬರಲಿ ಎಂಬ ಲೆಕ್ಕಾಚಾರದಿಂದ ಆಕೆ ಮಗುವಿನ ಸೇವೆ ಮಾಡುತ್ತಾಳೇನು? ಛೇ! ಆಕೆ ಆ ಮಗುವನ್ನು ಹೆತ್ತಳು. ಬೇನೆ ಅನುಭವಿಸಿದಳು. ಆ ನೋವೇ ಆಕೆಗೆ ಆ ಮಗುವಿನ ಬಗ್ಗೆ ಗೀಳು ಹುಟ್ಟಿಸಿತು. ಅವಳನ್ನು ವತ್ಸಲೆಯನ್ನಾಗಿ ಮಾಡಿದ್ದೂ ಆ ಬೇನೆಯೇ. ಮಗುವನ್ನು ಪ್ರೀತಿಸದಿರಲು ಅವಳಿಂದ ಸಾಧ್ಯವಿಲ್ಲ. ನಿಸ್ಸೀಮ ಸೇವೆಯ ಮೂರ್ತಿ ಆ ತಾಯಿ! ಅತ್ಯುತ್ಕೃಷ್ಟ ಪರಮಾತ್ಮ ಪೂಜೆ ಈ ತಾಯಿಯ ಪೂಜೆ. ಈಶ್ವರನನ್ನು ಕರೆಯುವುದೂ ತಾಯಿ ಎಂತಲೇ. ಇದಕ್ಕಿಂತ ಉಚ್ಚ ಶಬ್ದವಿನ್ನೆಲ್ಲಿ? ತಾಯಿ ಎಂಬುದು ಮೊದಲನೆಯ ಸ್ಪಷ್ಟ ಶಬ್ದ. ಅಲ್ಲಿ ಈಶ್ವರನನ್ನು ಕಾಣಲು ಕಲಿಯಬೇಕು. ಆಮೇಲೆ ತಂದೆ, ಗುರು ಮೊದಲಾದವರಲ್ಲಿ ದೇವರನ್ನು ಕಾಣಬಹುದು. ಗುರು ಶಿಕ್ಷಣ ಕೊಡುತ್ತಾನೆ. ಪಶುಗಳಂತಿದ್ದವರನ್ನು ಮಾನವರನ್ನಾಗಿ ಮಾಡುತ್ತಾನೆ. ಎಂಥ ಉಪಕಾರ

ಆತನದು ! ಮೊದಲು ತಾಯಿ, ಆಮೇಲೆ ತಂದೆ, ಅನಂತರ ಗುರು, ಆಮೇಲೆ ಸಾಧು ಶರಣರು. ತೀರ ಸ್ಪಷ್ಟರೂಪಗಳಲ್ಲಿರುವ ಈ ದೇವರನ್ನು ಮೊದಲು ಕಾಣಲು ಕಲಿಯಬೇಕು. ಇಲ್ಲಿ ಆತ ಕಾಣಿಸದಿದ್ದರೆ ಇನ್ನೆಲ್ಲಿ ಕಾಣಿಸಿಯಾನು ?

ತಾಯಿ, ತಂದೆ, ಗುರುಗಳಲ್ಲಿ ದೇವರನ್ನು ಗುರುತಿಸಿದ ಹಾಗೇ ಚಿಕ್ಕ ಮಕ್ಕಳಲ್ಲಿ ಸಹ ಆತನನ್ನು ಗುರುತಿಸುವುದಾದರೆ ಎಷ್ಟು ಸೊಗಸು ! ಧ್ರುವ, ಪ್ರಹ್ಲಾದ, ನಚಿಕೇತ, ಸನಕ, ಸನಂದನ, ಸನತ್ಕುಮಾರ ಎಲ್ಲರೂ ಪುಟ್ಟ ಪುಟ್ಟ ಮಕ್ಕಳೇ. ಅವರ ವರ್ಣನೆಗಳಲ್ಲಿ ವ್ಯಾಸಾದಿಗಳು, ಪುರಾಣಕಾರರು ತಲ್ಲೀನರಾಗಿಹೋಗಿದಾರೆ. ಶುಕದೇವ, ಶಂಕರಾಚಾರ್ಯರೂ ಬಾಲಕರೆ. ಅವರ ರೂಪದಲ್ಲಿ ಪರಮಾತ್ಮ ಎಷ್ಟು ಶುದ್ಧ ರೀತಿಯಲ್ಲಿ ಪ್ರಕಟವಾದನೊ ಹಾಗೆ ಇನ್ನೆಲ್ಲೂ ಪ್ರಕಟವಾಗಲಿಲ್ಲ. ಮಕ್ಕಳೆಂದರೆ ಕ್ರಿಸ್ತನಿಗೆ ಬಲು ಪ್ರೀತಿ. ಒಮ್ಮೆ ಶಿಷ್ಯನೊಬ್ಬ ಕೇಳಿದ : 'ನೀವು ಯಾವಾಗಲೂ ದೇವರ ರಾಜ್ಯದ ಬಗ್ಗೆ ಮಾತಾಡುತ್ತೀರಿ. ಈ ರಾಜ್ಯದಲ್ಲಿ ಪ್ರವೇಶ ದೊರೆಯುವದಾದರೂ ಯಾರಿಗೆ?' ಹತ್ತಿರ ಒಬ್ಬ ಹುಡುಗ ನಿಂತಿದ್ದ. ಆತನನ್ನೆತ್ತಿ ಮೇಲೆ ಯೇಸು ನಿಲ್ಲಿಸಿದ. 'ಈ ಹುಡುಗನ ಹಾಗೆ ಇರುವವರಿಗೆಲ್ಲ ಅಲ್ಲಿ ಪ್ರವೇಶ' ಎಂದ ಯೇಸುವಿನ ಮಾತು ಸತ್ಯ. ಒಮ್ಮೆ ರಾಮದಾಸಸ್ವಾಮಿ ಮಕ್ಕಳೊಂದಿಗೆ ಆಡುತ್ತಿದ್ದರು. ಅದನ್ನು ಕಂಡು ಕೆಲವು ಸಭ್ಯರಿಗೆ ಆಶ್ಚರ್ಯ ವಾಯಿತು. 'ಏನು ಸ್ವಾಮಿ, ಇದು ನೀವು ನಡೆಸಿರೋದು' ಎಂದು ಒಬ್ಬ ಕೇಳಿದ. ಅದಕ್ಕೆ ಸಮರ್ಥರೆಂದರು :

ವಯಸಿನಾಗ ಪೋರ, ಆದಾನವ ತೋರ
ವಯಸಿನಾಗ ಥೋರ, ಆಗ್ನಾನವ ಚೋರ । *

ವಯಸ್ಸು ಹೆಚ್ಚಿದ ಹಾಗೆ ಕೊಂಬು ಮೂಡುತ್ತವೆ. ಆಗ ದೇವರ ನೆನಪು ಆಗದು. ಚಿಕ್ಕ ಮಗುವಿನ ಮನದಮೇಲೆ ಲೇಪವಿರುವುದಿಲ್ಲ. ಅವನ ಬುದ್ಧಿ ಸ್ವಚ್ಛವಾಗಿರುತ್ತದೆ. 'ಸುಳ್ಳು ಹೇಳಬಾರದು' ಎಂದು ಮಗುವಿಗೆ ಬೋಧಿಸುತ್ತಾರೆ. 'ಸುಳ್ಳು ಹೇಳುವುದೆಂದರೇನು' ಎಂತ ಆತ ಕೇಳುತ್ತಾನೆ.

---

* "ವಯೋ ಪೋರ ತೇ ಥೋರ ಹೋವೂನ ಗೇಲೇ
ವಯೋ ಥೋರ ತೇ ಚೋರ ಹೋವೂನ ರೇಲೇ"

ಆಗ 'ಇದ್ದುದನ್ನು ಇದ್ದಂತೆ ಹೇಳಬೇಕು' ಎಂಬ ಸಿದ್ಧಾಂತವನ್ನು ಅವನಿಗೆ ತಿಳಿಸುತ್ತಾರೆ. ಆ ಮಗುವಿಗೆ ಪೀಕಲಾಟ. ಇದ್ದುದನ್ನು ಇದ್ದಂತೆ ಹೇಳುವುದಲ್ಲದೆ ಬೇರೆ ಇನ್ನೊಂದು ರೀತಿಯೂ ಇರುವುದುಂಟೇ? ಇಲ್ಲದುದನ್ನು ಹೇಳುವುದು ಹೇಗೆ? ಚೌಕವನ್ನು ಚೌಕ ಎನ್ನಬೇಕು, ವರ್ತುಲವೆಂದು ಅನ್ನಕೂಡದು – ಎಂದಹಾಗೆ ಇದು. ಆ ಮಗುವಿಗೆ ಆಶ್ಚರ್ಯವಾಗುತ್ತದೆ. ಮಕ್ಕಳೆಂದರೆ ಶುದ್ಧ ಪರಮಾತ್ಮನ ಮೂರ್ತಿಗಳಿದ್ದಹಾಗೆ. ಅವರಿಗೆ ಹಿರಿಯರು ಸುಳ್ಳು ಶಿಕ್ಷಣ ಕೊಡುತ್ತಾರೆ. ಇರಲಿ. ತಾಯಿ, ತಂದೆ, ಗುರು, ಶರಣರ, ಮಕ್ಕಳ ರೂಪದಲ್ಲಿ ನಾವು ದೇವರನ್ನು ಕಾಣದಿದ್ದರೆ ಇನ್ನಾವ ರೂಪದಲ್ಲಿ ಕಂಡೇವು? ಇವಕ್ಕಿಂತ ಉತ್ಕೃಷ್ಟ ರೂಪ ಪರಮಾತ್ಮನಿಗೆ ಬೇರೆ ಇಲ್ಲ. ಆತನ ಈ ಸಾದಾ, ಸೌಮ್ಯರೂಪಗಳನ್ನು ಮೊದಲು ಗುರುತಿಸಬೇಕು. ಇದು ದಪ್ಪಕ್ಷರದ ಪರಮೇಶ್ವರ.

### ೫೨. ಸೃಷ್ಟಿಯೊಳಗೆ ಪರಮೇಶ್ವರ : ಕೆಲವು ಉದಾಹರಣೆ

ಮೊದಲು ಮಾನವನ ಸೌಮ್ಯತಮ ಪಾವನಮೂರ್ತಿಗಳಲ್ಲಿ ಪರಮಾತ್ಮನನ್ನು ಕಾಣಲು ಕಲಿಯೋಣ. ಹಾಗೇ ಸೃಷ್ಟಿಯಲ್ಲಿನ ವಿಶಾಲ ಮನೋಹರ ರೂಪಗಳಲ್ಲಿ ಮೊದಲು ಆತನನ್ನು ಕಾಣಲು ಕಲಿಯಬೇಕು

ಆ ಉಷಾ! ಸೂರ್ಯೋದಯಕ್ಕೆ ಮೊದಲಿನ ಆ ದಿವ್ಯಪ್ರಭೆ. ಆ ಉಷಾದೇವಿಯ ಹಾಡು ಹೇಳುವಾಗ ಋಷಿಗಳು ನರ್ತಿಸುತ್ತಿದ್ದರು. 'ಓ ಉಷಾ, ಪರಮಾತ್ಮನ ಸಂದೇಶದೊಂದಿಗೆ ಬರುವ ದಿವ್ಯ ದೂತಿ ನೀನು. ಮಂಜಿನ ಮಣಿಗಳಲ್ಲಿ ಮಿಂದು ಬಂದವಳು. ಅಮೃತತತ್ವದ ಬಾವುಟ ನೀನು ಎಂದು ಋಷಿಗಳು ಭವ್ಯವಾಗಿ, ಹೃದಯಂಗಮವಾಗಿ ವರ್ಣಿಸಿದಾರೆ. 'ಪರಮೇಶ್ವರನ ಸಂದೇಶ ಹೊತ್ತುಬರುವ ನಿನ್ನನ್ನು ನೋಡಿ ಆತನನ್ನು ನಾನು ಗುರುತಿಸದಿದ್ದರೆ ಇನ್ನಾರು ಆತನನ್ನು ನನಗೆ ತೋರಿಸುವವರು' ಎಂದ ವೈದಿಕ ಋಷಿ. ಎಂಥ ಚೆಲುವಿನ ರೂಪದಿಂದ ನರ್ತಿಸುತ್ತ ಬಂದು ನಿಲ್ಲುತ್ತಾಳೆ ಉಷೆ! ನಮ್ಮ ದೃಷ್ಟಿ ಅತ್ತ ಹೊರಳಿದರೆ ತಾನೆ?

ಹಾಗೆಯೇ ಆ ಸೂರ್ಯ. ಆತನ ದರ್ಶನ ಎಂದರೆ ಪರಮಾತ್ಮನ ದರ್ಶನ. ಆತ ಆಕಾಶದಲ್ಲಿ ಬಗೆ ಬಗೆಯ ಚಿತ್ರ ಬರೆಯುತ್ತಾನೆ. ಬೆಳಗ್ಗೆ

ಎದ್ದು ನೋಡಬೇಕು ಆತನ ಆ ಕಲೆಯನ್ನು. ಆ ದಿವ್ಯಕಲೆಗೆ, ಆ ಅನಂತ ಸೌಂದರ್ಯಕ್ಕೆ ಉಪಮೆ ಕೊಡಲು ಸಾಧ್ಯವೆ. ಆದರೆ ಯಾರು ನೋಡು ತ್ತಾರೆ? ಅಲ್ಲಿ ಆ ಸುಂದರ ಭಗವಂತ ಬಂದಿದಾನೆ, ಇಲ್ಲಿ ಈತ ಇನ್ನೂ ಹಾಗೇ ಹೊದೆದುಕೊಂಡು ಮಲಗುತ್ತಾನೆ! 'ಸೋಮಾರಿ, ಮಲಗಬೇಕು ಎನ್ನುತ್ತೀಯಲ್ಲವೆ. ನಿನ್ನನ್ನೆಬ್ಬಿಸದೆ ನಾ ಬಿಡುವುದಿಲ್ಲ' ಎನ್ನುತ್ತಾನೆ ಸೂರ್ಯ. ತನ್ನ ಬೆಚ್ಚನೆಯ ಕಿರಣಗಳನ್ನು ತೋರಿಸಿ ಆ ಸೋಮಾರಿ ಯನ್ನೆಚ್ಚರಿಸುತ್ತಾನೆ.

"ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ"

ಸೂರ್ಯ ಸ್ಥಾವರಜಂಗಮಕ್ಕೆಲ್ಲ ಆತ್ಮ ಚರಾಚರಕ್ಕೆಲ್ಲ ಆತ್ಮ, ಆಧಾರ. ಋಷಿಗಳು ಆತನನ್ನು 'ಮಿತ್ರ' ಎಂದು ಕರೆದಿದಾರೆ.

"ಮಿತ್ರೋ ಜನಾನ್ ಯಾತಯತಿ ಬ್ರುವಾಣೋ
ಮಿತ್ರೋ ದಾಧಾರ ಪೃಥಿವೀಮುತದ್ಯಾಮ್"

"ಈ ಗೆಳೆಯ ಜನಪದವನ್ನೆಬ್ಬಿಸುತ್ತಾನೆ. ಕೆಲಸಕ್ಕೆ ತೊಡಗಿಸುತ್ತಾನೆ. ಸ್ವರ್ಗ–ಪೃಥ್ವಿಗಳನ್ನಾತ ಧಾರಣೆ ಮಾಡುತ್ತಾನೆ. ನಿಜವಾಗಿಯೂ ಆ ಸೂರ್ಯ ಬಾಳಿನ ಆಧಾರವಾಗಿದಾನೆ. ಆತನಲ್ಲಿ ದೇವರನ್ನು ನೋಡಿ.

"ಪಾವನೆಯಾದ ಆ ಗಂಗೆ! ನಾನು ಕಾಶಿಯಲ್ಲಿದ್ದಾಗ ಗಂಗಾತೀರದಲ್ಲಿ ಕೂಡುತ್ತಿದ್ದೆ. ಆ ರಾತ್ರಿ ಏಕಾಂತವಾಗಿ ಹೋಗುತ್ತಿದ್ದೆ. ಆ ಪ್ರವಾಹ ಎಷ್ಟು ಸುಂದರ! ಎಷ್ಟು ಪ್ರಶಾಂತ! ಗಂಗಾನದಿಯ ಆ ಭವ್ಯ ಗಂಭೀರ ಪ್ರವಾಹ, ಅದರ ಕನ್ನಡಿಯ ಮೇಲೆ ಮೂಡಿದ ಅನಂತ ತಾರೆ! ನಾನು ಮೂಕ ನಾಗುತ್ತಿದ್ದೆ. ಶಂಕರನ ಜಡೆಯಿಂದ, ಎಂದರೆ ಹಿಮಾಚಲದಿಂದ ಹರಿದು ಬರುವ ಆ ಗಂಗೆ! ರಾಜರು ರಾಜ್ಯಗಳನ್ನು ತೃಣವತ್ತಾಗಿ ಭಾವಿಸಿ ಬಿಸುಟು ಅವಳ ತೀರದಲ್ಲಿ ತಪಸ್ಸು ಮಾಡಲು ಬರುತ್ತಿದ್ದರು. ಅಂಥ ಆ ಗಂಗೆಯನ್ನು ಕಂಡು ನನಗೆ ಗಾಢ ಶಾಂತಿ ದೊರೆಯುತ್ತಿತ್ತು. ಅದನ್ನು ನಾನು ವರ್ಣಿಸ ಲಾರೆ. ಅಲ್ಲಿಗೆ ಮಾತೇ ಮುಗಿಯುತ್ತದೆ. ಸತ್ತ ಬಳಿಕ ತನ್ನ ಮೂಳೆ ಯಾದರೂ ಗಂಗೆಯಲ್ಲಿ ಬೀಳಲೆಂದು ಹಿಂದೂ ಮನುಷ್ಯ ಆಶಿಸುವುದರ ಕಾರಣ ನನಗಾಗ ತಿಳಿಯುತ್ತಿತ್ತು. ನೀವು ನಗಬಹುದು. ಅದರಿಂದೇನೂ ಕೆಡುವುದಿಲ್ಲ. ನನಗೆ ಮಾತ್ರ ಈ ಭಾವನೆಗಳು ತುಂಬ ಪವಿತ್ರವಾಗಿಯೂ

ಸಂಗ್ರಹಣೀಯವಾಗಿಯೂ ತೋರುತ್ತವೆ. ಸಾಯುವಾಗ ಗಂಗಾಜಲ
ಎರಡು ಹನಿಯನ್ನು ಬಾಯಿಗೆ ಬಿಡುತ್ತಾರೆ. ಆ ಹನಿಗಳ ಮೂಲ
ಪರಮಾತ್ಮನೇ ಮುಖದಲ್ಲಿ ಅವತೀರ್ಣನಾಗುತ್ತಾನೆ. ಆ ಗಂಗೆ ಎಂದ
ಪರಮಾತ್ಮ. ಅವನ ಕರುಣೆಯಾಗಿ ಹರಿದವಳು ಆಕೆ. ನಿಮ್ಮ ಹೊರಗ
ಕೊಳೆಯನ್ನೆಲ್ಲ ತೊಳೆದ ತಾಯಿ. ಗಂಗೆಯಲ್ಲಿ ಪರಮಾತ್ಮ ಪ್ರಕಟವಾದುದ
ಕಾಣಿಸದಿದ್ದರೆ ಇನ್ನೆಲ್ಲಿ ಕಾಣಿಸಬಹುದು? ಸೂರ್ಯ, ನದಿಗಳು, ಏ
ಇಳಿಯುವ ಆ ಅನಂತ ಸಮುದ್ರ— ಎಲ್ಲವೂ ಪರಮಾತ್ಮನ ಮೂರ್ತಿಗಳೇ.

"ಆ ಗಾಳಿ! ಅದು ಬರುವುದೆಲ್ಲಿಂದ, ಹೋಗುವುದೆಲ್ಲಿಗೆ — ಯಾರಿಗೂ
ತಿಳಿಯದು. ಭಗವಂತನ ದೂತ ಅದು. ಭಾರತದಲ್ಲಿನ ಕೆಲವು ಗಾ
ಮೇಲಿನ ಸ್ಥಿರ ಹಿಮಾಲಯದಿಂದ ಬಂದರೆ, ಇನ್ನು ಕೆಲವು ಗಂಭೀರ ಸಾಗ
ದಿಂದ ಬರುತ್ತವೆ. ಈ ಪವಿತ್ರ ಗಾಳಿ ನಮ್ಮ ಎದೆಯನ್ನು ಸ್ಪರ್ಶಿಸುತ್ತವೆ.
ನಮ್ಮನ್ನು ಜಾಗೃತಗೊಳಿಸುತ್ತವೆ. ನಮ್ಮ ಕಿವಿಯಲ್ಲಿ ಗುಣಿಗುಣಿಸುತ್ತವೆ.
ಅವುಗಳ ಸಂದೇಶವನ್ನಾರು ಕೇಳಬೇಕು? ನಮಗೆ ಬಂದ ನಾಲ್ಕು ಸಾಲಿನ
ಪತ್ರಗಳನ್ನು ಸೆರೆಮನೆಯಧಿಕಾರಿ ನಮಗೆ ಮುಟ್ಟಿಸದಿದ್ದರೆ ಹುಳ್ಳಗಾಗು
ತ್ತೇವೆ. ಎಲೋ ಹತಭಾಗ್ಯ, ಏನುಂಟು ಆ ಚೀಟಿಯಲ್ಲಿ? ಪರಮೇಶ್ವರನ
ಅನಂತ ಸಂದೇಶಗಳು ಕ್ಷಣಕ್ಷಣಕ್ಕೂ ಗಾಳಿಯಲ್ಲಿ ಬರುತ್ತಿವೆಯಲ್ಲ —
ಅವುಗಳಿಗೆ ಕಿವಿಗೊಡು!

"ನಮ್ಮ ಕೆಲಸ ಕಾರ್ಯಗಳನ್ನು ಮಾಡುವ ಈ ದನ, ಈ ಹಸು-
ಎಷ್ಟು ವತ್ಸಲ, ಎಷ್ಟು ಪ್ರೇಮಲ! ಎರಡು ಮೂರು ಮೈಲಿ ದೂರದ
ಕಾಡಿನಿಂದ ಓಡಿಬರುತ್ತದೆ ಕರುವಿಗಾಗಿ ಗುಡ್ಡ ಬೆಟ್ಟಗಳಿಂದ ಸ್ವಚ್ಛವಾದ
ನೀರನ್ನು ಹೊತ್ತು ಧೋ ಧೋ ಎಂದು ಹರಿಯುತ್ತ ಬರುವ ನದಿಗಳನ್ನು
ಕಂಡಾಗ ವೇದದ ಋಷಿಗಳಿಗೆ, ತುಂಬಿದ ಮೊಲೆಗಳೊಂದಿಗೆ ಕರುವಿಗಾಗಿ
ಹಾತೊರೆಯುತ್ತ ಬರುವ ಹಸುವಿನ ಸ್ಮರಣೆಯಾಗುತ್ತದೆ. ಅವರು
ನದಿಯನ್ನು ಕುರಿತು ಹೇಳುತ್ತಾರೆ: "ಹೇ ದೇವಿ, ಹಾಲಿನಂಥ ಪವಿತ್ರ
ಪಾವನ ಮಧುರ ನೀರನ್ನು ತರುವ ನೀನು ಪ್ರತ್ಯಕ್ಷ ಕಾಮಧೇನು. ಹಸು
ಕಾಡಿನಲ್ಲೇ ಇರಲಾರದು. ಹಾಗೇ ನೀನೂ ಬೆಟ್ಟದಲ್ಲಿರಲಾರೆ. ಅಲ್ಲಿಂದ
ಜಿಗಿಯುತ್ತ ನೀರಡಿಸಿದ ಮಕ್ಕಳ ಭೆಟ್ಟಿಗಾಗಿ ನೀನು ಬರುತ್ತೀ."

"ವಾಶ್ರಾ ಇವ ಧೇನವಃ ಸ್ಯಂದಮಾನಾಃ"

ವತ್ಸಲ ಹಸುವಿನ ರೂಪದಲ್ಲಿ ಭಗವಂತನೇ ನಿಂತಿದಾನೆ ಬಾಗಿಲಲ್ಲಿ.

ಇನ್ನು ಆ ಕುದುರೆ – ಎಷ್ಟು ಉತ್ತಮ, ಎಷ್ಟು ಪ್ರಾಮಾಣಿಕ, ಎಷ್ಟು ಸ್ವಾಮಿನಿಷ್ಠ! ಅರಬ್ಬೀಗಳಿಗೆ ಕುದುರೆಯ ಮೇಲೆ ಅದೆಷ್ಟು ಪ್ರೀತಿ! ಆ ಅರಬ್ಬಿಯವನ ಕತೆ ಗೊತ್ತಿಲ್ಲವೆ ನಿಮಗೆ? ತೊಂದರೆಗೊಳಗಾದ ಆ ಅರಬ್ಬಿಯವನು ತನ್ನ ಕುದುರೆಯನ್ನು ಸೋದಾಗರನಿಗೆ ಮಾರಲು ಸಿದ್ಧನಾಗುತ್ತಾನೆ. ಕೈಯಲ್ಲಿ ಚೀಲ ಹಿಡಿದುಕೊಂಡು ಅದರ ಹತ್ತಿರ ಹೋಗುತ್ತಾನೆ. ಕುದುರೆಯ ಗಂಭೀರ, ಪ್ರೇಮಲ ಕಣ್ಣಿನ ಕಡೆ ಅವನ ದೃಷ್ಟಿ ಹೊರಳುತ್ತದೆ. ಅವನ ಹೃದಯ ತುಂಬಿಬರುತ್ತದೆ. 'ಪ್ರಾಣ ಹೋದರೂ ಚಿಂತೆಯಿಲ್ಲ. ಈ ಕುದುರೆಯನ್ನು ನಾನು ಮಾರಲಾರೆ. ಆಗುವುದೆಲ್ಲ ಆದೀತು. ಹೊಟ್ಟೆಗೆ ಸಿಗದಿದ್ದರೂ ಸರಿಯೆ. ದೇವರು ನೋಡಿ ಕೊಂಡಾನು' ಎನ್ನುತ್ತಾನೆ. ಬೆನ್ನು ಚಪ್ಪರಿಸುತ್ತಲೂ ಹೇಗೆ ಪ್ರೀತಿಯಿಂದ ಫುರುಫುರಿಸುತ್ತದೆ! ಎಷ್ಟು ಚಂದ ಈ ಆಯಾಲ, ನಿಜಕ್ಕೂ ಕುದುರೆಯ ಗುಣ ಅಮೌಲ್ಯ. ಏನಿದೆ ಆ ಸೈಕಲಿನಲ್ಲಿ? ಕುದುರೆಯ ಸೇವೆ ಮಾಡಿದರೆ ನಿಮಗಾಗಿ ಅದು ಪ್ರಾಣವನ್ನಾದರೂ ಕೊಟ್ಟೀತು. ನಿಮ್ಮ ಗೆಳೆಯನಾದೀತು. ನನ್ನ ಗೆಳೆಯನೊಬ್ಬ ಕುದುರೆ ಸವಾರಿ ಕಲಿಯುತ್ತಿದ್ದ. ಅದು ಅವನನ್ನು ಕೆಡಹುತ್ತಿತ್ತು. ಆತ ನನ್ನ ಹತ್ತಿರ ಬಂದು, 'ಕುದುರೆ ನನ್ನನ್ನು ಬೆನ್ನ ಮೇಲೇ ಏರಗೊಡುವುದಿಲ್ಲವಲ್ಲ' ಎಂದ. ನಾನು 'ನೀವು ಅದರ ಮೇಲೆ ಬರೀ ಸವಾರಿ ಮಾಡಲು ಹೋಗುತ್ತೀರಿ. ಅದರ ಸೇವೆಯನ್ನೆಂದಾದರೂ ಮಾಡುತ್ತೀರಾ? ಅದಕ್ಕೆ ತಿನಿಸು ಹಾಕಿ, ನೀರು ಕುಡಿಸಿ, ಮೈ ತಿಕ್ಕಿ— ಅನಂತರ ಕೂತುಕೊಳ್ಳಿ' ಎಂದೆ. ಆತ ಹಾಗೆ ಮಾಡತೊಡಗಿದ. ಕೆಲವು ದಿನ ಕಳೆದ ಬಳಿಕ ನನ್ನ ಬಳಿಗೆ ಬಂದು 'ಈಗ ಕುದುರೆ ನನ್ನನ್ನು ಕೆಳಕ್ಕೆ ದೂಡುವುದಿಲ್ಲ' ಎಂದ. ಕುದುರೆ ಎಂದರೆ ಪರಮಾತ್ಮ, ಭಕ್ತನನ್ನಾತ ದೂಡುವನೇ? ಆತನ ಭಕ್ತಿಯನ್ನು ಕಂಡು ಕುದುರೆ ನಮ್ರವಾಯಿತು. ಈತ ಭಕ್ತನೋ ಅಲ್ಲವೊ ಎಂದು ಪರೀಕ್ಷಿಸುತ್ತದೆ ಕುದುರೆ. ಭಗವಾನ್ ಶ್ರೀ ಕೃಷ್ಣನೂ ನಹ ಕುದುರೆಯ ಸೇವೆ ಮಾಡುತ್ತಿದ್ದ. ತನ್ನ ಪೀತಾಂಬರದಲ್ಲಿ ಹಾಕಿ ಹುರುಳಿ ತಿನ್ನಿಸುತ್ತಿದ್ದ. ದಾರಿಯಲ್ಲಿ ಹಳ್ಳ, ತಿಟ್ಟೆ, ಕೆಸರು ಅಡ್ಡಬಂದರೆ

ಸೈಕಲು ದಾಟಲಾರದು. ಕುದುರೆಯೋ ನೆಗೆಯುತ್ತ ಹೋಗುತ್ತದೆ. ಸುಂದರ ಪ್ರೇಮಲ ಕುದುರೆಯೆಂದರೆ ಪರಮೇಶ್ವರನ ಮೂರ್ತಿಯೇ.

ಇನ್ನು ಸಿಂಹ! ನಾನು ಬಡೋದೆಯಲ್ಲಿದ್ದಾಗ ಬೆಳಗಿನ ಜಾವ ಅದರ ಗರ್ಜನೆಯ ಗಂಭೀರ ಧ್ವನಿ ಕಿವಿ ಸೇರುತ್ತಿತ್ತು. ದೇವಾಲಯದ ಗರ್ಭಗುಡಿಯಲ್ಲಿ ಗುಂಯಿಗೊಡುವ ದನಿಯಂತೆ ಅದರ ಹೃದಯಗರ್ಭದ ಆಳದಿಂದ ಬಂದ ದನಿ. ತತ್‌ಕ್ಷಣ ಹೃದಯ ಕಲಕುತ್ತಿತ್ತು. ಸಿಂಹದ ಆ ಧೀರೋದಾತ್ತ ಗಂಭೀರ ಮುದ್ರೆ! ಅದರ ಆ ರಾಜಠೀವಿ, ರಾಜವೈಭವ! ವನರಾಜನ ಮೇಲೆ ಚವರಿ ಬೀಸಿದಹಾಗಿರುವ ಆ ಭವ್ಯ ಸುಂದರ ಕೇಸರ! ಬಡೋದೆಯ ಉಪವನದಲ್ಲಿ ಆ ಸಿಂಹ ಇತ್ತು. ಮುಕ್ತವಾಗಿರಲಿಲ್ಲ. ಪಂಜರದಲ್ಲಿಯೆ ಓಡಿಯಾಡುತ್ತಿತ್ತು, ಅದರ ಕಣ್ಣುಗಳಲ್ಲಿ ಕ್ರೌರ್ಯದ ಕಳೆ ಕೊಂಚವೂ ಇರಲಿಲ್ಲ. ಆ ಮುಖಮುದ್ರೆಯಲ್ಲಿ, ದೃಷ್ಟಿಯಲ್ಲಿ, ಕಾರುಣ್ಯ ತುಂಬಿರುತ್ತಿತ್ತು, ಲೋಕದ ಪರಿವೆಯೆ ಅದಕ್ಕಿದ್ದಹಾಗಿರಲಿಲ್ಲ. ಯಾವಾಗಲೂ ತನ್ನ ಧ್ಯಾನದಲ್ಲೇ. ಪರಮೇಶ್ವರನ ಪಾವನಮೂರ್ತಿ ಅದು – ಎಂದು ನನಗನಿಸುತ್ತದೆ. ಆಂಡ್ರೋಕ್ಲೀಸ್ ಮತ್ತು ಸಿಂಹದ ಕತೆಯನ್ನು ಬಾಲ್ಯದಲ್ಲಿ ನಾನೋದಿದೆ. ಆ ಕತೆ ಎಷ್ಟು ಸುಂದರ! ಹಸಿದಾಗಲೂ ಸಹ ಆ ಸಿಂಹ ಆಂಡ್ರೋಕ್ಲೀಸನ ಉಪಕಾರವನ್ನು ನೆನೆದು ಅವನ ಗೆಳೆಯನಾಗುತ್ತದೆ. ಅವನ ಕಾಲು ನೆಕ್ಕತೊಡಗುತ್ತದೆ. ಇದರ ಅರ್ಥವೇನು? ಸಿಂಹದಲ್ಲಿನ ಪರಮಾತ್ಮನನ್ನು ಆಂಡ್ರೋಕ್ಲೀಸ್ ಕಂಡಿದ್ದ. ಶಂಕರನ ಹತ್ತಿರ ಸಿಂಹ ಯಾವಾಗಲೂ ಇರುತ್ತದೆ. ಭಗವಂತನ ದಿವ್ಯ ವಿಭೂತಿ ಸಿಂಹ.

ಹುಲಿಯ ಚಮತ್ಕಾರವೇನು ಅಲ್ಪವೆ? ಅದರಲ್ಲಿ ಸಹ ಈಶ್ವರನ ತೇಜಸ್ಸು ಪ್ರಕಟವಾಗಿದೆ. ಅದರೊಂದಿಗೆ ಗೆಳೆತನ ಮಾಡುವುದು ಅಶಕ್ಯವಲ್ಲ. ಭಗವಾನ್ ಪಾಣಿನಿ ಕಾಡಿನಲ್ಲಿ ಶಿಷ್ಯರಿಗೆ ಪಾಠ ಹೇಳುತ್ತಿದ್ದಾಗ ಹುಲಿ ಬಂತು. ಮಕ್ಕಳಿಗೆ ಗಾಬರಿಯಾಗಿ, 'ವ್ಯಾಘ್ರಃ ವ್ಯಾಘ್ರಃ' ಎಂದು ಕೂಗಿಕೊಂಡರು. ಪಾಣಿನಿ 'ಹೌದು ವ್ಯಾಘ್ರ ಅಂದರೇನು? ವ್ಯಾಜಿಘ್ರತೀತಿ ವ್ಯಾಘ್ರಃ. ಯಾವುದಕ್ಕೆ ಘ್ರಾಣೇಂದ್ರಿಯ ತೀಕ್ಷ್ಣವೋ ಅದು ವ್ಯಾಘ್ರ' ಎಂದರು. ಹುಲಿಯನ್ನು ಕಂಡು ಮಕ್ಕಳಿಗೆ ಹೆದರಿಕೆ. ಭಗವಾನ್ ಪಾಣಿನಿಗೆ ಮಾತ್ರ ಹುಲಿ ನಿರುಪದ್ರವಿಯೂ ಆನಂದಮಯವೂ

ಆದ ಶಬ್ದವಾಗಿತ್ತು. ವ್ಯಾಘ್ರವನ್ನು ವಿವರಿಸತೊಡಗಿದರು. ಹುಲಿ ಅವರನ್ನೆ ತಿಂದುಹಾಕಿತು. ಆದರೇನಂತೆ? ಅದಕ್ಕೆ ಅವರ ದೇಹದ ವಾಸನೆ ಸವಿಯೆನಿಸಿತು. ಸರಿ. ತಿಂದುಬಿಟ್ಟಿತು. ಪಾಣಿನಿ ಮಾತ್ರ ಪಲಾಯನ ಮಾಡಲಿಲ್ಲ. ಶಬ್ದಬ್ರಹ್ಮದ ಉಪಾಸಕರು ಅವರು. ಅವರಿಗೆಲ್ಲವೂ ಅದ್ವೈತವೇ. ಹುಲಿಯಲ್ಲೂ ಕೂಡ ಅವರು ಶಬ್ದಬ್ರಹ್ಮದ ಅನುಭವ ಪಡೆದರು. ಅವರ ಈ ಮಹಾತ್ಮೆಯಿಂದಾಗಿಯೆ ಭಾಷ್ಯಗಳಲ್ಲಿ ಪಾಣಿನಿಯ ಹೆಸರು ಬಂದಾಗಲೆಲ್ಲ 'ಭಗವಾನ್ ಪಾಣಿನಿ' ಎಂಬ ಪೂಜ್ಯಭಾವದಿಂದ ಸಂಬೋಧಿಸಲಾಗಿದೆ. ಪಾಣಿನಿಯ ಉಪಕಾರ ದೊಡ್ಡದು ಎಂದಿದ್ದಾರೆ.

ಅಜ್ಞಾನಾಂಧಸ್ಯ ಲೋಕಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಪಾಣಿನಯೇ ನಮಃ ॥

ಹೀಗೆ ಭಗವಾನ್ ಪಾಣಿನಿ ಹುಲಿಯಲ್ಲಿ ಪರಮಾತ್ಮನನ್ನು ಕಂಡರು. ಜ್ಞಾನೇಶ್ವರರು ಹೇಳಿದಾರೆ:

'ಘುರಾ ಯೇವೋ ಪಾಂಸ್ವರ್ಗ । ಕಾ ಪರಿಪಡೋ ವ್ಯಾಘ್ರು ।
ಪರೀ ಆತ್ಮ ಬುದ್ಧೀಸೀ ಭಂಗ । ಕದಾ ನೋಹೇ ॥'

ಮಹರ್ಷಿ ಪಾಣಿನಿಯ ಸ್ಥಿತಿ ಹೀಗಿತ್ತು. ಹುಲಿ ದೈವೀ ವಿಭೂತಿಯೆಂಬುದು ಅವರಿಗೆ ತಿಳಿದಿತ್ತು.

ಹಾಗೇ ಆ ಹಾವು. ಅದನ್ನು ಕಂಡರೆ ಹೆದರುತ್ತಾರೆ. ಆದರೆ ಹಾವು ಕಟ್ಟಾ ನೈಷ್ಠಿಕ ಬ್ರಾಹ್ಮಣ. ಎಷ್ಟು ಸ್ವಚ್ಛ, ಎಷ್ಟು ಸುಂದರ! ಸ್ವಲ್ಪ ಕೊಳೆಯಿದ್ದರೂ ಅದಕ್ಕಾಗದು. ಕೊಳಕು ಬ್ರಾಹ್ಮಣರೆಷ್ಟೋ ಜನ. ಕೊಳಕು ಹಾವೋ? ಛೆ! ಏಕಾಂತವಾಸಿ ಋಷಿಯಂಥ ಪ್ರಾಣಿ ಇದು. ನಿರ್ಮಲ, ಸತೇಜ, ಮನೋಹರ, ಹಾರದಂತಿರುವ ಈ ಹಾವಿಗೇಕೆ ಹೆದರಬೇಕು? ಅದನ್ನು ಪೂಜಿಸಬೇಕೆಂದು ನಮ್ಮ ಪೂರ್ವಜರು ಹೇಳಿದಾರೆ. ಹಿಂದೂ ಧರ್ಮದಲ್ಲಿ ಎಂಥೆಂಥ ಹುಚ್ಚು ರೀತಿ ಇವು—ಎಂದು ನೀವೆನ್ನಬಹುದು. ನಾಗಪೂಜೆ ಮಾಡಬೇಕೆಂದು ಹೇಳಿದುದು ನಿಜ. ಬಾಲ್ಯದಲ್ಲಿ ನಾನು ಗಂಧದ ಹಾವು ಮಾಡಿ ತಾಯಿಗೆ ಕೊಡುತ್ತಿದ್ದೆ. 'ಪೇಟೆಯಲ್ಲಿ ಇನ್ನೂ ಚಲೋದು ಸಿಕ್ಕುತ್ತದಲ್ಲ' ಎನ್ನುತ್ತಿದ್ದೆ. ತಾಯಿ 'ಅದು ಉಪಯೋಗ ವಿಲ್ಲದುದು. ಬೇಡ. ಮಗನ ಕೈಯದೇ ಒಳ್ಳೆಯದು' ಎನ್ನುತ್ತಿದ್ದರು.

ಅನಂತರ ಆ ಹಾವಿನ ಪೂಜೆ. ಇದೇನು ಹುಚ್ಚು? ಕೊಂಚ ವಿಚಾರಮಾಡಿ ನೋಡಿ. ಶ್ರಾವಣಮಾಸದಲ್ಲಿ ಆ ಹಾವು ಅತಿಥಿಯಾಗಿ ನಮ್ಮ ಮನೆಗೆ ಬರುತ್ತದೆ. ಮಳೆಯ ನೀರಿನಿಂದ ಆ ಬಡಪಾಯಿಯ ಮನೆ ತುಂಬಿ ಹೋಗುತ್ತದೆ. ಇನ್ನೇನು ಮಾಡಬೇಕು ಅದು? ದೂರ ಏಕಾಂತದಲ್ಲಿರುವ ಆ ಋಷಿ ನಿಮಗೆ ಸುಮ್ಮನೆ ಹೆಚ್ಚು ತೊಂದರೆಕೊಡಬಾರದೆಂದು ಕಟ್ಟಿಗೆಗಳ ಮಧ್ಯೆ ಬಿದ್ದುಕೊಂಡಿರುತ್ತದೆ. ಸಾಧ್ಯವಿದ್ದಷ್ಟು ಕಡಮೆ ಸ್ಥಳವನ್ನೇ ವ್ಯಾಪಿಸಿಕೊಳ್ಳುತ್ತದೆ. ಆದರೂ ನಾವು ದೊಣ್ಣೆ ಎತ್ತಿಕೊಂಡು ಧಾವಿಸುತ್ತೇವೆ. ಸಂಕಟಕ್ಕೊಳಗಾದ ಅತಿಥಿ ಮನೆಗೆ ಬಂದಾಗ ಅವನನ್ನು ಹೊಡೆಯಬೇಕೇ ನಾವು? ಸೆಯಿಂಟ್ ಫ್ರಾನ್ಸಿಸ್ ಬಗ್ಗೆ ಒಂದು ಕತೆಯಿದೆ. ಕಾಡಿನಲ್ಲಿ ಹಾವು ಗಳನ್ನು ನೋಡುತ್ತಲೂ ಆತ 'ತಮ್ಮ, ಬನ್ನಿ' ಎಂದು ಪ್ರೀತಿಯಿಂದ ಕರೆಯುತ್ತಿದ್ದ. ಆ ಹಾವು ಬಂದು ಅವನ ತೊಡೆಯ ಮೇಲೆ ಆಡುತ್ತಿದ್ದವು. ಮೈಮೇಲೆ ಏರಿ ನಲಿದಾಡುತ್ತಿದ್ದವು. ಇದು ಸುಳ್ಳು ಎನ್ನಬೇಡಿ. ಪ್ರೀತಿಯಲ್ಲಿ ಅಂಥ ಶಕ್ತಿಯುಂಟು. ಹಾವಿನಲ್ಲಿ ವಿಷವಿದೆ. ಮನುಷ್ಯನಲ್ಲಿ ವಿಷವಿಲ್ಲವೆ? ಹಾವು ಕಚ್ಚಿದರೂ ಕ್ವಚಿತ್ತಾಗಿ. ಬೇಕೆಂತಲೇ ಅದು ಕಚ್ಚುವುದಿಲ್ಲ. ನೂರರಲ್ಲಿ ತೊಂಬತ್ತು ಹಾವುಗಳಿಗೆ ವಿಷವಿಲ್ಲ. ನಿಮ್ಮ ಹೊಲವನ್ನು ಅದು ಕಾಯುತ್ತದೆ. ಬೆಳೆಯನ್ನು ನಾಶಗೊಳಿಸುವ ಅಸಂಖ್ಯ ಹುಳು ಹುಪ್ಪಡಿಗಳನ್ನು ತಿಂದು ಅದು ಬದುಕುತ್ತದೆ. ಹಾವಿಲ್ಲದಿದ್ದಲ್ಲಿ ಬೆಳೆಯ ರಕ್ಷಣೆ ಅಸಾಧ್ಯ. ಪರೋಪಕಾರಿ, ಶುದ್ಧ, ತೇಜಸ್ವಿ, ಏಕಾಂತಪ್ರಿಯ ಆದ ಈ ಹಾವು ಭಗವತ್ ಸ್ವರೂಪಿ. ನಮ್ಮ ದೇವತೆಗಳಲ್ಲೆಲ್ಲ ಒಂದಿಲ್ಲೊಂದು ಕಡೆ ಹಾವು ಇದ್ದೇ ಇದೆ. ಗಣಪತಿಯ ಸೊಂಟಕ್ಕೆ ಹಾವು. ಶಂಕರನ ಕೊರಳಿಗೆ ಹಾವು. ಭಗವಾನ್ ವಿಷ್ಣುವಿಗಂತೂ ಹಾವೇ ಹಾಸುಗೆ. ಹಾವಿನಲ್ಲಿ ಭಗವಂತನ ಮೂರ್ತಿ ಪ್ರಕಟವಾಗಿರುವುದೇ ಈ ಎಲ್ಲದರ ಭಾವಾರ್ಥ. ಹಾವಿನಲ್ಲಿ ಆ ಪರಮೇಶ್ವರನ ಪರಿಚಯ ಮಾಡಿಕೊಳ್ಳಿ.

**೫೩. ಸೃಷ್ಟಿಯೊಳಗಿನ ಪರಮೇಶ್ವರ : ಇನ್ನೂ ಕೆಲವು ಉದಾಹರಣೆ**

ಇಂಥ ಉದಾಹರಣೆ ಎಷ್ಟು ಹೇಳಲಿ? ನಾನು ಕೊಟ್ಟಿರುವುದು ಬರೀ ಕಲ್ಪನೆ. ರಾಮಾಯಣದ ಸಾರಸರ್ವಸ್ವ ಈ ಬಗೆಯ ರಮಣೀಯ ಕಲ್ಪನೆಗಳಲ್ಲಿದೆಯೆಂದು ನನ್ನ ಅಭಿಪ್ರಾಯ. ಅಲ್ಲಿ ತಂದೆ ಮಕ್ಕಳ ಪ್ರೀತಿ,

ತಾಯಿ ಮಕ್ಕಳ ಪ್ರೀತಿ, ಅಣ್ಣ ತಮ್ಮಂದಿರ ಪ್ರೀತಿ, ಪತಿಪತ್ನಿಯರ ಪ್ರೀತಿ — ಎಲ್ಲಾ ಇದೆ. ಇದಕ್ಕಾಗಿ ರಾಮಾಯಣ ನನಗೆ ಪ್ರಿಯವೆನಿಸದು. ರಾಮನಿಗೂ ವಾನರರಿಗೂ ಸಖ್ಯ ಬೆಳೆಯಿತಲ್ಲ. ಅದಕ್ಕಾಗಿ ರಾಮಾಯಣ ಎಂದರೆ ನನಗೆ ಪ್ರೀತಿ. ವಾನರರು ನಾಗಜನ ಎಂದು ಈಚೆಗೆ ಹೇಳುತ್ತಾರೆ. ಹಳೆಯದನ್ನು ತೋಡುವುದು ಇತಿಹಾಸಜ್ಞರ ಕೆಲಸ. ಆ ಬಗ್ಗೆ ನಾನು ದೂರಲಾರೆ. ಆದರೆ ನಿಜಕ್ಕೂ ರಾಮ ವಾನರರೊಂದಿಗೆ ಸಖ್ಯಬೆಳೆಸಿದುದರಲ್ಲಿ ಅಶಕ್ಯವೇನಿದೆ? ರಾಮ ವಾನರರಲ್ಲಿ ಸ್ನೇಹ ಬೆಳೆಸಿದುದರಲ್ಲೇ ರಾಮನ ರಾಮತ್ವ, ರಮಣೀಯತ್ವ. ಹಾಗೇ ಹಸುಗಳೊಂದಿಗೆ ಕೃಷ್ಣನ ಸಂಬಂಧ. ಕೃಷ್ಣಪೂಜೆಯೆಲ್ಲ ಅದೇ ಆಧಾರದ ಮೇಲೆ ನಿಂತಿದೆ. ಶ್ರೀಕೃಷ್ಣನ ಚಿತ್ರ ಎಂದರೆ ಅವನ ಸುತ್ತಮುತ್ತ ಹಸುಗಳಿದ್ದೇ ತೀರಬೇಕು. ಗೋಪಾಲಕೃಷ್ಣ! ಗೋಪಾಲಕೃಷ್ಣ! ಕೃಷ್ಣನಿಂದ ಹಸುಗಳನ್ನು ಬೇರ್ಪಡಿಸಿದರೆ ಅವನಲ್ಲಿ ಉಳಿಯುವುದೇನು? ರಾಮನಿಂದ ವಾನರರನ್ನು ದೂರಮಾಡಿದರೆ ರಾಮನೇನು ಉಳಿದ? ವಾನರರಲ್ಲಿ ಸಹ ರಾಮ ಪರಮಾತ್ಮನನ್ನು ಕಂಡ. ಅವರೊಂದಿಗೆ ಪ್ರೀತಿಯ, ಆತ್ಮೀಯತೆಯ ಸಂಬಂಧ ಬೆಳೆಸಿದ. ರಾಮಾಯಣದ ಬೀಗದ ಕೈ ಇದು. ಇದಿಲ್ಲವಾದರೆ ಸವಿಯೇ ಇಲ್ಲ. ತಂದೆ ಮಗನ, ತಾಯಿ ಮಕ್ಕಳ ಸಂಬಂಧ ಬೇರೆಡೆಗೂ ಸಿಕ್ಕೀತು. ಆದರೆ ನರವಾನರರ ಮಧುರ ಮೈತ್ರಿಯನ್ನು ರಾಮಾಯಣ ತೋರಿಸಿತು. ಬೇರೆಲ್ಲೂ ಇಲ್ಲ. ವಾನರರೊಳಗಿನ ದೇವರನ್ನು ಅರಗಿಸಿಕೊಂಡಿತು. ವಾನರರನ್ನು ಕಂಡು ಋಷಿಗಳಿಗೆ ಕೌತುಕವಾಗುತ್ತಿತ್ತು. ನೆಲದಮೇಲೆ ಕಾಲಿಡದೆ ಗಿಡಗಳ ಮೇಲೆ ಹಾರುತ್ತ ತಿರುಗುವ ಆ ಕೋತಿಗಳನ್ನು ಕಂಡು ಋಷಿಗಳಿಗೆ ಕಾವ್ಯಸ್ಫೂರ್ತಿಯುಂಟಾಗುತ್ತಿತ್ತು. ಬ್ರಹ್ಮನ ಕಣ್ಣು ಕೋತಿಯ ಕಣ್ಣಿನಂತೆ ಇರುವುದೆಂದು ಉಪನಿಷತ್ತಿನಲ್ಲಿ ಹೇಳಿದೆ. ವಾನರರ ನೇತ್ರ ಚಂಚಲ. ನಾಲ್ಕೂಕಡೆಗೂ ಅದರ ದೃಷ್ಟಿ. ಬ್ರಹ್ಮನಿಗೂ ಅಂಥ ಕಣ್ಣೇ ಬೇಕು. ಈಶ್ವರನ ಕಣ್ಣು ಸ್ಥಿರವಾಗಿದ್ದು ಪ್ರಯೋಜನವಿಲ್ಲ. ನಾವು ನೀವು ಧ್ಯಾನಸ್ಥರಾಗಿ ಕೂಡಬಹುದು. ಈಶ್ವರ ಧ್ಯಾನಸ್ಥನಾದರೆ ಸೃಷ್ಟಿಯ ಗತಿಯೇನು? ಎಲ್ಲರ ಯೋಗಕ್ಷೇಮವನ್ನೂ ನೋಡುವ ಬ್ರಹ್ಮನ ಕಣ್ಣು ವಾನರರಲ್ಲಿ ಕಾಣಿಸಿದವು ಋಷಿಗಳಿಗೆ. ಕೋತಿಗಳಲ್ಲೂ ದೇವರನ್ನು ಕಾಣಲು ಕಲಿಯಿರಿ.

ಇನ್ನು ಆ ನವಿಲು? ಇಲ್ಲಿ ನವಿಲು ಹೆಚ್ಚಾಗಿಲ್ಲ. ಗುಜರಾತಿನಲ್ಲಿ ಹೆಚ್ಚು. ನಾನು ಗುಜರಾತಿನಲ್ಲಿದ್ದೆ. ನಿತ್ಯವೂ ಹತ್ತು ಹನ್ನೆರಡು ಮೈಲು ಅಲೆಯುವ ಚಟ ನನ್ನದು. ಹೀಗೆ ಅಲೆಯುವಾಗ ಆಗಾಗ ನವಿಲನ್ನು ನೋಡುತ್ತಿದ್ದೆ. ಆಕಾಶದಲ್ಲಿ ಮೋಡ ಕವಿದಿರಬೇಕು, ಮಳೆ ಬೀಳುವ ಹಾಗಿರಬೇಕು, ಮುಗಿಲಿಗೆ ಗಾಢವಾದ ಕಪ್ಪು ಬಣ್ಣ ಏರಿರಬೇಕು, ಆಗ ನವಿಲು ದನಿಯೆತ್ತುತ್ತದೆ. ಹೃದಯ ಕಲಮಲಗೊಂಡು ಎದ್ದ ಆ ಕೇಕೆ ಯನ್ನು ಕೇಳಿ; ತಿಳಿದೀತು. ನವಿಲಿನ ಆ ಸ್ವರವೆಂದರೆ 'ಷಡ್‌ಜಂ ರೌತಿ' ಈ ಮೊದಲನೆ ಷಡ್ಜ ಹೇಳಿದುದು ನವಿಲು. ಅನಂತರ ಹೆಚ್ಚು ಕಡಮೆ ಪ್ರಮಾಣದಲ್ಲಿ ನಾವು ಇತರ ಸ್ವರಗಳನ್ನು ಹೊಂದಿಸಿದೆವು. ಮೋಡಗಳ ಕಡೆಗಿರುವ ಅದರ ದೃಷ್ಟಿ, ಆಳವಾದ ಆ ಸ್ವರ, ಗಡ ಗಡ ಧಿಮಿ ಧಿಮಿ ಎಂದು ಮೇಘಗರ್ಜನೆ ಮೊದಲಾಗುತ್ತಲೂ ಎದ್ದು ನಿಲ್ಲುವ ಅದರ ಚವರಿ! ಎಲೆಲಾ! ಆ ಚವರಿಯ ಮುಂದೆ ಮಾನವನ ರೀವಿಯೆಲ್ಲವೂ ಕಳಾಹೀನ. ಬಾದಷಹ ಸಿಂಗರಿಸಿಕೊಳ್ಳುತ್ತಾನೆ. ಆ ಚವರಿಯ ಮುಂದೆ ಅವನ ಅಲಂಕಾರವೇ? ಎಂಥ ಭವ್ಯ ಪಿಂಛ, ಆ ಸಾವಿರ ಕಣ್ಣು, ಆ ಬಗೆಬಗೆಯ ಬಣ್ಣ, ಆ ಅನಂತ ಛಾಯೆ, ಅದ್ಭುತ ಸುಂದರ ಮೃದು ರಮಣೀಯ ರಚನೆ— ನೋಡಿ. ಆ ಚವರಿಯನ್ನು ನೋಡಿ. ಅಲ್ಲಿರುವ ಪರಮಾತ್ಮನನ್ನು ಗುರುತಿಸಿ. ಈ ಎಲ್ಲ ಸೃಷ್ಟಿಯೂ ಹೀಗೆ ಅಲಂಕೃತವಾಗಿದೆ. ಎಲ್ಲೆಲ್ಲೂ ಪರಮಾತ್ಮ ದರ್ಶನ ಕೊಡುತ್ತ ನಿಂತಿದಾನೆ. ನೋಡಲಾರದ ನಿರ್ಭಾಗ್ಯರು ನಾವು. ತುಕಾರಾಮ್ ಹೇಳಿದಾರೆ—

ಶರಣರಿಗೆ ಸರ್ವತ್ರ ಸುಭಿಕ್ಷ।
ನಿರಭಾಗ್ಯ ಗೆಲ್ಲೆಡೆಯು ದುರ್ಭಿಕ್ಷ॥ *

ಶರಣರಿಗೆ ಎಲ್ಲೆಲ್ಲೂ ಸುಫಲ. ನಿರ್ಭಾಗ್ಯರಿಗೆ ನಮಗೆ ಮಾತ್ರ ಎಲ್ಲೆಲ್ಲೂ ಬರಗಾಲ.

ವೇದದಲ್ಲಿ ಅಗ್ನಿಯ ಉಪಾಸನೆಯ ವಿಚಾರವಿದೆ. ಅಗ್ನಿಯೂ ನಾರಾಯಣ. ಎಂಥ ದೇದೀಪ್ಯಮಾನ ಮೂರ್ತಿ ಅದು! ಎರಡು ಕಟ್ಟಿಗೆ

---

* ದೇವಾ ಹೇ ಸುಕಾಳ ದೇಶೀಂ। ಅಭಾಗ್ಯಾಸೀ ದುರ್ಭಿಕ್ಷ॥

ಉಜ್ಜಿದರೆ ತತ್‌ಕ್ಷಣ ಪ್ರಕಟವಾಗುತ್ತಾನೆ. ಅದಕ್ಕೆ ಮೊದಲು ಎಲ್ಲಿ ಅವಿತುಕೊಂಡಿದ್ದನೋ ಯಾರು ಬಲ್ಲರು? ಎಷ್ಟು ಬಿಸಿ, ಎಷ್ಟು ತೇಜಸ್ಸು! ವೇದಗಳ ಮೊದಲನೆ ದನಿ ಹೊರಟುದು ಅಗ್ನಿಯ ಉಪಾಸನೆಯಿಂದ.

ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ ।
ಹೋತಾರಂ ರತ್ನಧಾತಮಂ ॥

ಯಾವ ಅಗ್ನಿಯ ಉಪಾಸನೆಯಿಂದ ವೇದಗಳು ಮೊದಲಾದುವೋ, ಆ ಅಗ್ನಿಯ ಕಡೆ ನೋಡಿ. ಆತನ ಆ ಜ್ವಾಲೆಗಳನ್ನು ನೋಡಿದಾಗ ನನಗೆ ಜೀವಾತ್ಮನ ಖಟಿಪಿಟಿ ನೆನಪಾಗುತ್ತದೆ. ಆ ಜ್ವಾಲೆ ಮನೆಯಲ್ಲಿನ ಒಲೆಯದಾದರೂ ಸರಿ. ಕಾಡಿನಲ್ಲಿ ಕಾಳ್ಗಿಚ್ಚಿನದಾದರೂ ಸರಿ. ಬೈರಾಗಿಗೆಲ್ಲಿಯ ಮನೆ ಮಾರು? ಆ ಜ್ವಾಲೆ ಎಲ್ಲಿ ಇದ್ದರೆ ಅಲ್ಲಿ ಅದರ ಹಾರಾಟ ಮೊದಲು. ನಿರಂತರ ತಳಮಳ. ಮೇಲಕ್ಕೆ ಹೋಗಬೇಕೆಂದು ಅದಕ್ಕೆ ಆತುರ. ಹವೆಯ ಒತ್ತಡದಿಂದ ಆ ಜ್ವಾಲೆ ಅಲುಗಾಡುತ್ತದೆ ಎಂದೀರಿ ನೀವು. ನನ್ನ ಅರ್ಥವಂತೂ ಹೀಗೆ. ಮೇಲಿರುವ ಆ ಪರಮಾತ್ಮನನ್ನು, ಆ ತೇಜಃ ಸಮುದ್ರ ಸೂರ್ಯನಾರಾಯಣನನ್ನು ಕಾಣುವುದಕ್ಕಾಗಿ ಅದು ಸದಾ ನೆಗೆಯುತ್ತಿರುತ್ತದೆ. ಹುಟ್ಟಿದಂದಿನಿಂದ ಸಾಯುವವರೆಗೆ ನಿರಂತರ ಹಾರಾಟ ಅದರದು. ಸೂರ್ಯ ಅಂಶಿ; ಜ್ವಾಲೆ ಅಂಶ. ಅಂಶಿಯ ಕಡೆ ಹೋಗಲು ಅಂಶದ ಚಡಪಡ. ಆ ಜ್ವಾಲೆ ಆರಿದಾಗ ಮಾತ್ರ ಆ ಖಟಿಪಿಟಿ ನಿಂತೀತು. ಅದುವರೆಗೂ ಇಲ್ಲ. ಸೂರ್ಯನಿಗೂ ತಮಗೂ ತುಂಬ ಅಂತರವಿದೆಯೆಂಬ ವಿಚಾರವೇ ಅದಕ್ಕಿಲ್ಲ. ತನ್ನ ಶಕ್ತಿಯಿದ್ದಷ್ಟು ಈ ಭೂಮಿಯಿಂದ ಹಾರುವುದೊಂದು ಮಾತ್ರ ಅದಕ್ಕೆ ಗೊತ್ತು. ಇಂಥ ಈ ಅಗ್ನಿಯ ರೂಪದಲ್ಲಿ, ಧಗಧಗಿಸುವ ವೈರಾಗ್ಯವೇ ಪ್ರಕಟವಾಗಿದೆ. ಎಂತಲೇ 'ಅಗ್ನಿಮೀಳೇ' ಎಂದು ವೇದಗಳ ಮೊದಲ ಸೊಲ್ಲು ಹೊರಟದ್ದು.

ಆ ಕೋಗಿಲೆ! ಅದನ್ನು ಹೇಗೆ ತಾನೆ ಮರೆಯಲಿ? ಯಾರನ್ನು ಕರೆಯುತ್ತದೋ ಅದು? ಬೇಸಗೆಯಲ್ಲಿ ಹೊಳೆ ಕೆರೆ ಬತ್ತಿದವು. ಗಿಡಗಳು ಮಾತ್ರ ಚಿಗಿತವು. ಯಾರು ಈ ವೈಭವವನ್ನು ಕೊಟ್ಟರು? ಎಲ್ಲಿದಾನೆ ಆ ವೈಭವದಾತ ಎಂದು ಕೇಳುತ್ತದೆಯೇನು ಆ ಕೋಗಿಲೆ? ಎಂಥ ಉತ್ಕಟ ಮಧುರ ಸ್ವರ! ಹಿಂದೂ ಧರ್ಮದಲ್ಲಿ ಕೋಗಿಲೆಯ ವ್ರತವಿದೆ. ಕೋಗಿಲೆಯ

ದನಿ ಕೇಳಿದಲ್ಲದೆ ಊಟ ಮಾಡುವುದಿಲ್ಲವೆಂದು ಮಹಿಳೆಯರು ವ್ರತ ತೊಡುತ್ತಾರೆ. ಕೋಗಿಲೆಯ ರೂಪದಲ್ಲಿ ಪ್ರಕಟವಾಗುವ ಪರಮಾತ್ಮನನ್ನು ನೋಡಲು ಕಲಿಸುವ ವ್ರತ ಇದು. ಎಂಥ ಸುಂದರ ದನಿ ಅದರದು. ಉಪನಿಷತ್ತಿನ ಗಾಯನವಿದ್ದಂತೆ! ಅದರ ದನಿಯೇನೋ ಕಿವಿಗೆ ಬೀಳುತ್ತದೆ. ಕೋಗಿಲೆ ಮಾತ್ರ ಕಾಣಿಸದು. ಆ ಆಂಗ್ಲ ಕವಿ ವರ್ಡ್ಸ್‌ವರ್ತ್ ಅದಕ್ಕಾಗಿ ಹುಚ್ಚನಾಗುತ್ತಾನೆ ಅದನ್ನು ಹುಡುಕುತ್ತ ಕಾಡು ಬೆಟ್ಟ ಅಲೆಯುತ್ತಾನೆ. ಇಂಗ್ಲೆಂಡಿನ ಮಹಾಕವಿ ಕೋಗಿಲೆಯನ್ನು ಶೋಧಿಸಿದರೆ, ಭಾರತದ ಸ್ತ್ರೀಯರು ಅದನ್ನು ನೋಡದೆ ಊಟವನ್ನು ಮಾಡುವುದಿಲ್ಲ. ಕೋಗಿಲೆಯ ವ್ರತದಿಂದಾಗಿ ನಮ್ಮ ಸ್ತ್ರೀಯರು ಕವಿಯ ಪದವಿ ಪಡೆದಿದ್ದಾರೆ. ಪರಮಾನಂದದ ಮಧುರ ಧ್ವನಿ ಬೀರುವ ಕೋಗಿಲೆಯ ರೂಪದಲ್ಲಿ ಪರಮಾತ್ಮನೇ ಪ್ರಕಟವಾಗುತ್ತಾನೆ.

ಕೋಗಿಲೆಯೇನೋ ಚೆಂದ. ಆ ಕಾಗೆ ಮಾತ್ರ ಕುರೂಪಿಯೆ? ಸರಲ ಪರಮಾತ್ಮನನ್ನು ಕಂಡಿರಿ. ಇನ್ನು ಸಂಮಿಶ್ರ ಪರಮಾತ್ಮನನ್ನು ನೋಡಿ. ಕಾಗೆಯನ್ನು ಕಂಡು ಬೆರಗಾಗಿ. ನಾನಂತೂ ಅದನ್ನು ತುಂಬಾ ಮೆಚ್ಚುತ್ತೇನೆ. ಅದರ ನುಣ್ಣನೆಯ ಕರ್ರಗಿನ ಕಪ್ಪು ಬಣ್ಣ. ಆ ತೀವ್ರ ಧ್ವನಿ! ಆ ದನಿಯೇನು ಕೆಟ್ಟದೇ? ಅದರಲ್ಲೂ ಮಾಧುರ್ಯವುಂಟು. ರೆಕ್ಕೆಗಳನ್ನು ಪಟ ಪಟ ಬಡಿಯುತ್ತ ಬರುವಾಗ ಎಷ್ಟು ಚೆಂದ ಕಾಣುತ್ತದೆ ಆ ಕಾಗೆ! ಮಕ್ಕಳ ಲಕ್ಷ್ಯವನ್ನೆಳೆದುಕೊಳ್ಳುತ್ತದೆ. ಮುಚ್ಚಿದ ಬಾಗಿಲಿನೊಳಗಡೆಗೆ ಕುಳಿತು ಚಿಕ್ಕ ಮಗು ಊಟಮಾಡಲೊಪ್ಪದು. ಹೊರಗಡೆ ಅಂಗಳದಲ್ಲಿ ಒಯ್ದು 'ಕಾವ್ ಕಾವ್' ಎನ್ನುತ್ತ ಅದಕ್ಕೆ ತಿನಿಸಬೇಕಾಗುತ್ತದೆ. ಕಾಗೆಯನ್ನು ಕಂಡರೆ ಆ ಮಗುವಿಗೆ ಪ್ರೀತಿ. ಅದೇನು ಹುಚ್ಚೇ? ಅಲ್ಲ. ಅಪಾರ ಜ್ಞಾನ ಅದಕ್ಕಿದೆ. ಕಾಗೆಯ ರೂಪದಿಂದ ಪ್ರಕಟವಾದ ಪರಮಾತ್ಮನೊಂದಿಗೆ ಅದು ತಟ್ಟನೆ ಸಮರಸವಾಗುತ್ತದೆ. ತಾಯಿ ಅನ್ನಕ್ಕೆ ಮೊಸರು ನೀಡಲಿ, ತುಪ್ಪ ನೀಡಲಿ, ಸಕ್ಕರೆ ಹಾಕಲಿ, ಆ ಕಡೆ ಮಗುವಿಗೆ ಗಮನವಿಲ್ಲ. ಕಾಗೆಯ ಪಟಪಟ ದನಿ, ಅದರ ಕೂಗಾಟಗಳನ್ನು ನಿರೀಕ್ಷಿಸುವುದರಲ್ಲೇ ಅದಕ್ಕೆ ಸಂತೋಷ. ಸೃಷ್ಟಿಯ ಬಗೆಗೆ ಮಗುವಿಗಿರುವ ಈ ಕೌತುಕದ ಆಧಾರದ ಮೇಲೆಯೆ 'ಇಸೋಪ ನೀತಿ' ಯೆಲ್ಲವೂ ನಿಂತಿದೆ.

ಎಲ್ಲ ಕಡೆಗಳಲ್ಲೂ ಇಸೋಪನಿಗೆ ದೇವರು ಕಾಣಿಸುತ್ತಿದ್ದ. ನನ್ನ ಮೆಚ್ಚುಗೆಯ ಗ್ರಂಥಗಳ ಪಟ್ಟಿಯಲ್ಲಿ ಇಸೋಪ ನೀತಿಗೆ ಮೊದಲನೆ ಸ್ಥಾನ ಕೊಟ್ಟೇನು, ಮರೆಯಲಾರೆ. ಇಸೋಪನ ರಾಜ್ಯದಲ್ಲಿ ಎರಡು ಕೈ, ಎರಡು ಕಾಲಿನ ಈ ಮಾನವ ಪ್ರಾಣಿ ಮಾತ್ರವಲ್ಲ; ನಾಯಿ–ನರಿ, ಮೊಲ-ತೋಳ, ಕಾಗೆ – ಗುಬ್ಬಿ ಎಲ್ಲವೂ ಉಂಟು. ಅವೆಲ್ಲವೂ ಮಾತನಾಡುತ್ತವೆ. ನಗುತ್ತವೆ. ಅದೊಂದು ಪ್ರಚಂಡ ಸಮ್ಮೇಳನ. ಚರಾಚರ ಸೃಷ್ಟಿಯೆಲ್ಲ ಇಸೋಪ ನೊಂದಿಗೆ ಮಾತನಾಡುತ್ತದೆ. ಅವನಿಗೆ ದಿವ್ಯ ದರ್ಶನವಾಗಿದೆ. ರಾಮಾಯಣ ರಚಿತವಾದುದೂ ಇದೇ ದೃಷ್ಟಿಯಿಂದ. ಇದೇ ತತ್ವದಿಂದ. ರಾಮನ ಬಾಲ್ಯವನ್ನು ತುಲಸೀದಾಸರು ವರ್ಣಿಸಿದಾರೆ. ಅಂಗಳದಲ್ಲಿ ರಾಮ ಆಡುತ್ತಿದಾನೆ. ಹತ್ತಿರ ಕಾಗೆ ಇದೆ. ರಾಮ ಮೆಲ್ಲನೆ ಅದನ್ನು ಹಿಡಿಯಲು ಯತ್ನಿಸುತ್ತಾನೆ. ಅದು ದೂರ ಹೋಗುತ್ತದೆ. ಕೊನೆಗೆ ಅವನಿಗೆ ದಣಿವಾಗುತ್ತದೆ. ಒಂದು ಉಪಾಯ ಮಾಡುತ್ತಾನೆ. ಕೈಯಲ್ಲಿ ಮಿಠಾಯಿ ಹಿಡಿದುಕೊಂಡು ಅದರ ಮುಂದೆ ಹಿಡಿಯುತ್ತಾನೆ. ಕಾಗೆ ಸ್ವಲ್ಪ ಹತ್ತಿರ ಬರುತ್ತದೆ. ಈ ವರ್ಣನೆಯಿಂದ ತುಲಸೀದಾಸರು ಪುಟ ಪುಟ ತುಂಬಿದಾರೆ. ಅದಕ್ಕೆ ಕಾರಣ ಆ ಕಾಗೆ ಪರಮೇಶ್ವರ. ರಾಮನ ಮೂರ್ತಿಯಲ್ಲಿನ ಅಂಶವೇ ಅದರಲ್ಲೂ ಇದೆ. ರಾಮನ ಮತ್ತು ಕಾಗೆಯ ಆ ಪರಿಚಯ, ಪರಮಾತ್ಮ– ಪರಮಾತ್ಮ ಪರಿಚಯ.

## ೫೪. ದುರ್ಜನರಲ್ಲೂ ಪರಮಾತ್ಮ ದರ್ಶನ

ಸಾರಾಂಶ—ಈ ರೀತಿ ಸೃಷ್ಟಿಯಲ್ಲಿ ನಾನಾ ರೂಪಗಳಿಂದ – ಪವಿತ್ರ ನದಿ, ವಿಶಾಲ ಪರ್ವತ, ಗಂಭೀರ ಸಮುದ್ರ, ವತ್ಸಲ ಹಸು, ಉತ್ಸಾಹಿ ಕುದುರೆ, ಗಂಭೀರ ಸಿಂಹ, ಮಧುರ ಕೋಗಿಲೆ, ಸುಂದರ ನವಿಲು, ಸ್ವಚ್ಛ ಮತ್ತು ಏಕಾಂತಪ್ರಿಯ ಸರ್ಪ, ರೆಕ್ಕೆ ಬೀಸುತ್ತ ಹಾರುವ ಕಾಗೆ, ಧಡಪಡಿಸುವ ಜ್ವಾಲೆ, ಪ್ರಶಾಂತ ತಾರೆಗಳ ಈ ರೂಪಗಳಿಂದ ಪರಮಾತ್ಮ ಎಲ್ಲೆಲ್ಲೂ ತುಂಬಿಕೊಂಡಿದಾನೆ. ಕಣ್ಣುಗಳಿಗೆ ನೋಡುವ ರೂಢಿಯಾಗ ಬೇಕು. ಮೊದಲು ಸ್ಪಷ್ಟ ಸರಲ ಅಕ್ಷರ, ಅನಂತರ ಚಿಕ್ಕ ಚಿಕ್ಕ ಸಂಯುಕ್ತಾಕ್ಷರ ಕಲಿಯಬೇಕು. ಸಂಯುಕ್ತಾಕ್ಷರ ಕಲಿತ ಹೊರತು ಓದಿನಲ್ಲಿ ಪ್ರಗತಿಯಿಲ್ಲ.

## ೫೫. ಅರ್ಜುನನಿಗೆ ವಿಶ್ವರೂಪ ದರ್ಶನದ ಬಯಕೆ

ಈ ವಿಶ್ವದಲ್ಲಿನ ಅನಂತ ವಸ್ತುಗಳಲ್ಲಿ ತುಂಬಿರುವ ಪರಮಾತ್ಮನನ್ನು ಹೇಗೆ ನೋಡಬೇಕು, ಕಣ್ಣಿಗೆ ಕಾಣಿಸುವ ಈ ವಿರಾಟ್ ಪ್ರದರ್ಶನವನ್ನು ಹೇಗೆ ಜೀರ್ಣಿಸಿಕೊಳ್ಳಬೇಕು ಎಂಬುದನ್ನು ಕಳೆದ ಅಧ್ಯಾಯದಲ್ಲಿ ಕಲಿತೆವು. ಮೊದಲು ಸ್ಪಷ್ಟ, ಆಮೇಲೆ ಸೂಕ್ಷ್ಮ; ಮೊದಲು ಸರಲ, ಆಮೇಲೆ ಮಿಶ್ರ. ಹೀಗೆ ಎಲ್ಲ ವಸ್ತುಗಳಲ್ಲಿನ ಪರಮಾತ್ಮನನ್ನು ಕಾಣಬೇಕು, ಅವನ ಸಾಕ್ಷಾತ್ಕಾರ ಪಡೆಯಬೇಕು, ನತತಾಭ್ಯಾಸದಿಂದ ವಿಶ್ವವನ್ನೆಲ್ಲ ಆತ್ಮರೂಪ ವಾಗಿ ನೋಡಲು ಕಲಿಯಬೇಕು ಎಂಬುದನ್ನು ಕಳೆದ ಸಲ ತಿಳಿದುಕೊಂಡೆವು.

ಇವೊತ್ತು ಹನ್ನೊಂದನೆ ಅಧ್ಯಾಯ. ಭಗವಂತ ತನ್ನ ಪ್ರತ್ಯಕ್ಷ ರೂಪವನ್ನು ತೋರಿಸಿ ಅರ್ಜುನನ ಮೇಲೆ ಪರಮ ಕೃಪೆ ಮಾಡಿದ ಅಧ್ಯಾಯ ಇದು. 'ದೇವಾ, ನಿನ್ನ ಪೂರ್ಣರೂಪವನ್ನು ನೋಡಬೇಕೆಂಬ ಆಸೆ ನನಗೆ. ನಿನ್ನ ಮಹಾಪ್ರಭಾವವೆಲ್ಲ ಪ್ರಕಟವಾದಂಥ ರೂಪವನ್ನು ನಾನು ಕಣ್ಣಾರೆ ಕಾಣಬೇಕು' ಎಂದು ಅರ್ಜುನ ಬಿನ್ನವಿಸಿದ. ವಿಶ್ವರೂಪ ದರ್ಶನಕ್ಕಾಗಿ ಆತ ಮಂಡಿಸಿದ ಬೇಡಿಕೆ ಇದು.

ವಿಶ್ವ, ಜಗತ್ತು ಎಂಬ ಶಬ್ದಗಳನ್ನು ನಾವು ಉಪಯೋಗಿಸುತ್ತೇವೆ. ಈ ಜಗತ್ತು ವಿಶ್ವದ ಒಂದು ಚಿಕ್ಕ ಭಾಗ. ನಮಗೆ ಈ ಪುಟ್ಟ ತುಣುಕಿನ ಸ್ವರೂಪವೂ ಸಹ ಸರಿಯಾಗಿ ತಿಳಿಯದು. ನಮಗೆ ವಿಶಾಲವಾಗಿ ತೋರುವ ಈ ಜಗತ್ತೂ ವಿಶ್ವದೆದುರಿಗೆ ಅತಿ ತುಚ್ಛ ವಸ್ತು. ರಾತ್ರಿ ಆಕಾಶದ ಕಡೆ ನೋಡಿದರೆ ಅನಂತ ಗೋಳಗಳು ಕಾಣುತ್ತವೆ. ಆಕಾಶದ ಅಂಗಳದಲ್ಲಿನ ಆ ರಂಗವಲ್ಲಿ, ಆ ಸಣ್ಣಸಣ್ಣ ಸುಂದರ ಹೂಗಳು, ಲಕಲಕಿಸುವ ಆ ಲಕ್ಷ ಲಕ್ಷ ತಾರೆಗಳು – ಇವುಗಳ ಸ್ವರೂಪ ಗೊತ್ತಿದೆಯೇ ನಿಮಗೆ? ಚಿಕ್ಕದಾಗಿ ತೋರುವ ಆ ತಾರೆಗಳೆಲ್ಲ ಪ್ರಚಂಡವಾದವುಗಳು. ತೇಜೋಮಯ ಜ್ವಲಂತ ಧಾತುವಿನ ಗುಂಡುಗಳು. ಈ ಅನಂತ ಗುಂಡುಗಳ ಲೆಕ್ಕ ಮಾಡಲಾದೀತೆ? ಅವಕ್ಕೆ ಆದಿಯಿಲ್ಲ, ಅಂತ್ಯವಿಲ್ಲ. ಬರಿಗಣ್ಣಿಗೆ ನಾವಿರಾರು ಗುಂಡು ಕಾಣಿಸಿದರೆ, ದುರ್ಬೀನಿಗೆ ಕೋಟ್ಯಾವಧಿ. ಇನ್ನೂ ದೊಡ್ಡ ದುರ್ಬೀನು

ತಂದರೆ ಅಬ್ಜಾವಧಿ ಕಂಡಾವು. ಕೊನೆಗೆ ಅದಕ್ಕೆ ಅಂತ್ಯವೆಲ್ಲಿ, ಹೇಗೆ, ಎನ್ನುವುದೇ ತಿಳಿಯಲಾರದು. ಮೇಲೆ, ಕೆಳಗೆ, ಎಲ್ಲೆಲ್ಲೂ ಪಸರಿಸಿ ಕೊಂಡಿರುವ ಈ ಅನಂತ ಸೃಷ್ಟಿಯಲ್ಲಿ ಒಂದು ಚಿಕ್ಕ ತುಂಡು ಈ ಜಗತ್ತು. ಅದೂ ಕೂಡ ಎಷ್ಟು ವಿಶಾಲವಾಗಿ ತೋರುತ್ತದೆಯೋ !

ಪರಮಾತ್ಮನ ಸ್ವರೂಪದ ಒಂದು ಅಂಗವಾಯಿತು ಈ ವಿಶಾಲ ಸೃಷ್ಟಿ. ಇನ್ನೂ ಒಂದು ಅಂಗವುಂಟು. ಅದು ಕಾಲದ್ದು. ಹಿಂದಿನ ಕಾಲವನ್ನು ಗಮನಿಸಿದರೆ ಇತಿಹಾಸದ ಗರ್ಭದಲ್ಲಿ ಹತ್ತುಸಾವಿರ ವರ್ಷಗಳವರೆಗೂ ಹಿಂದೆ ಹೋಗಬಹುದು. ಮುಂದಿನ ಕಾಲವಂತೂ ಊಹಾತೀತ. ಇತಿಹಾಸದ ಕಾಲ ಹತ್ತುಸಾವಿರ ವರ್ಷ. ನಮ್ಮ ಸ್ವಂತ ಬದುಕಿನ ಕಾಲವಾದರೋ ನೂರು ವರ್ಷ. ಕಾಲದ ವಿಸ್ತಾರ ಅನಾದಿ, ಅನಂತ, ಎಷ್ಟು ಕಾಲ ಕಳೆಯಿತೋ ಲೆಕ್ಕವಿಲ್ಲ. ಮುಂದೆ ಎಷ್ಟಿದೆಯೋ ಕಲ್ಪನೆಯಿಲ್ಲ. ವಿಶ್ವದ ಎದುರಿಗೆ ಇತಿಹಾಸದ ಈ ಹತ್ತುಸಾವಿರ ವರ್ಷ ಏನೂ ಅಲ್ಲ. ಭೂತಕಾಲ ಅನಾದಿ. ಭವಿಷ್ಯಕಾಲ ಅನಂತ. ಅಲ್ಪವಾದ ವರ್ತಮಾನ ಕಾಲ ಎಲ್ಲಿದೆ ನಿಜವಾಗಿ ? ತೋರಿಸಲು ಹೋಗುವುದರೊಳಗಾಗಿ ಭೂತಕಾಲಕ್ಕೇ ಸೇರುತ್ತಿದೆ. ಇಂಥ ಅತಿ ಚವಲ ವರ್ತಮಾನ ಕಾಲ ಮಾತ್ರ ನಮ್ಮದು. ಈಗ ನಾ ಮಾತನಾಡುತ್ತಿದ್ದೇನೆ. ಬಾಯಿಂದ ಶಬ್ದ ಹೊರಬೀಳುವುದ ರೊಳಗಾಗಿ ಅದು ಭೂತಕಾಲದಲ್ಲಿ ಮುಳುಗಿಹೋಗುತ್ತದೆ. ಇಂಥ ಈ ಮಹಾ ಕಾಲನದಿ ಸತತವಾಗಿ ಹರಿಯುತ್ತಿದೆ. ಅದರ ಉಗಮ ತಿಳಿಯದು. ಅಂತ್ಯ ತಿಳಿಯದು. ಮಧ್ಯದಲ್ಲಿನ ಸ್ವಲ್ಪ ಪ್ರವಾಹವಷ್ಟೇ ನಮ್ಮ ದೃಷ್ಟಿಗೆ ಬೀಳುತ್ತದೆ.

ಹೀಗೆ, ಒಂದು ಕಡೆಗೆ ಸ್ಥಳದ ಪ್ರಚಂಡ ವಿಸ್ತಾರ, ಇನ್ನೊಂದು ಕಡೆಗೆ ಕಾಲದ ಪ್ರಚಂಡ ಓಘ, ಈ ಎರಡು ದೃಷ್ಟಿಗಳಿಂದ ಸೃಷ್ಟಿಯನ್ನು ನಿರೀಕ್ಷಿಸ ತೊಡಗಿದರೆ, ಕಲ್ಪನೆಯನ್ನು ಎಷ್ಟು ಓಡಿಸಿದರೂ ಅದರ ಅಂತ ತಿಳಿಯ ಲಾರದೆಂದು ಗೊತ್ತಾಗುತ್ತದೆ. ಮೂರು ಕಾಲಗಳಲ್ಲಿ, ಮೂರು ಸ್ಥಳಗಳಲ್ಲಿ— ಭೂತ, ಭವಿಷ್ಯ, ವರ್ತಮಾನಗಳಲ್ಲಿ ; ಮೇಲೆ, ಕೆಳಗೆ, ಇಲ್ಲಿ—ಎಲ್ಲೆಲ್ಲೂ ತುಂಬಿಕೊಂಡಿರುವ ಆ ವಿರಾಟ್ ಪರಮಾತ್ಮ ಒಮ್ಮೆಲೆ, ಒಂದೇ ಕಾಲಕ್ಕೆ, ಕಾಣಿಸಬೇಕೆಂಬುದು ಅರ್ಜುನನ ಅಪೇಕ್ಷೆ. ಆ ಅಪೇಕ್ಷೆಯಿಂದಾಗಿ ಈ ಹನ್ನೊಂದನೆ ಅಧ್ಯಾಯ ಪ್ರಕಟವಾಗಿದೆ.

ಭಗವಂತನಿಗೆ ಅತ್ಯಂತ ಪ್ರಿಯನಾಗಿದ್ದವನು ಅರ್ಜುನ. ಎಷ್ಟು ಪ್ರಿಯ? ಎಂತಲೇ ಹತ್ತನೆಯ ಅಧ್ಯಾಯದಲ್ಲಿ ಇಂಥಿಂಥ ಸ್ವರೂಪಗಳಲ್ಲಿ ನನ್ನ ಚಿಂತನೆ ಮಾಡು ಎಂದು ಹೇಳುವಾಗ ಪರಮಾತ್ಮ ಪಾಂಡವರೊಳಗಿನ ಅರ್ಜುನನಲ್ಲಿ ನನ್ನನ್ನು ಕಾಣು ಎಂದು ಹೇಳಿದಾನೆ. 'ಪಾಂಡವಾನಾಂ ಧನಂಜಯಃ' ಎಂದು ಶ್ರೀಕೃಷ್ಣ ಹೇಳುತ್ತಾನೆ. ಪ್ರೀತಿಯ ಹುಚ್ಚು ಇದಕ್ಕೂ ಹೆಚ್ಚು ಉಂಟೇ? ಭಗವಂತನಿಗೆ ಅರ್ಜುನನ ಬಗ್ಗೆ ಅಪಾರ ಪ್ರೀತಿ. ಆ ಪ್ರೀತಿಯ ಪ್ರಸಾದರೂಪ ಈ ಹನ್ನೊಂದನೆಯ ಅಧ್ಯಾಯ. ಅರ್ಜುನನಿಗೆ ದಿವ್ಯದೃಷ್ಟಿ ಕೊಟ್ಟು, ದಿವ್ಯರೂಪ ದರ್ಶನದ ಅವನ ಅಪೇಕ್ಷೆಯನ್ನು ಭಗವಂತ ನಡೆಯಿಸಿಕೊಟ್ಟ. ಅರ್ಜುನನಿಗೆ ಪ್ರೇಮದ ಪ್ರಸಾದ ಕೊಟ್ಟ.

## ೫೬. ಚಿಕ್ಕ ಮೂರ್ತಿಯಲ್ಲೂ ಪೂರ್ಣದರ್ಶನ ಸಾಧ್ಯ

ಆ ದಿವ್ಯರೂಪದ ಸುಂದರ ವರ್ಣನೆ, ಭವ್ಯವರ್ಣನೆ ಈ ಅಧ್ಯಾಯದಲ್ಲಿದೆ. ಅದೇನೊ ನಿಜವೆ. ಆದರೂ ಈ ವಿಶ್ವರೂಪದ ಬಗ್ಗೆ ನಾನು ವಿಶೇಷ ಮೋಹ ತೋರಿಸಲಾರೆ. ನನಗೆ ಚಿಕ್ಕ ರೂಪದಿಂದಲೇ ತೃಪ್ತಿ. ನನಗೆ ಕಾಣಿಸುವ ಚಿಕ್ಕಪುಟ್ಟ ರೂಪದ ಸವಿಯನ್ನು ಅನುಭವಿಸಲು ಕಲಿತಿದೇನೆ. ಪರಮೇಶ್ವರ ತುಂಡುತುಂಡಾಗಿಲ್ಲ. ನಮಗೆ ಕಾಣಿಸುವ ಆತನ ರೂಪು ಒಂದು ತುಂಡು, ಇನ್ನುಳಿದ ಪರಮೇಶ್ವರ ಎಲ್ಲೋ ಇದಾನೆ ಎಂದು ನನಗನಿಸುವುದಿಲ್ಲ. ವಿರಾಟ್ ವಿಶ್ವದಲ್ಲಿ ತುಂಬಿಕೊಂಡ ಪರಮಾತ್ಮನೇ ಸಂಪೂರ್ಣ ರೂಪದಲ್ಲಿ – ಚಿಕ್ಕ ಮೂರ್ತಿಯಲ್ಲೂ, ಒಂದು ಮಣ್ಣಿನ ಕಣದಲ್ಲೂ ಇದಾನೆ. ಅಮೃತದ ಸಿಂಧುವಿನಲ್ಲಿರುವ ಸವಿಯೇ ಅದರದೊಂದು ಬಿಂದುವಿನಲ್ಲಿ. ನನಗೆ ದೊರೆತ ಅಮೃತದ ಚಿಕ್ಕ ಬಿಂದುವಿನ ಸವಿಯನ್ನುಣ್ಣಬೇಕೆಂದು ನನಗನಿಸುತ್ತದೆ. ಬೇಕೆಂತಲೇ ನಾನಿಲ್ಲಿ ಅಮೃತದ ದೃಷ್ಟಾಂತವನ್ನೆತ್ತಿಕೊಂಡಿದೇನೆ. ನೀರಿನ ಇಲ್ಲವೆ ಹಾಲಿನ ವಿಚಾರ ಎತ್ತಲಿಲ್ಲ. ಚಿಕ್ಕ ಲೋಟದಲ್ಲಿರುವ ಹಾಲಿನ ಸವಿಯೇ ದೊಡ್ಡ ಲೋಟದ ಹಾಲಿನಲ್ಲೂ ಇರುತ್ತದೆ ಸವಿ ಒಂದೇ ಆದರೂ ದೊರೆಯುವ ಪುಷ್ಟಿ ಅಷ್ಟೇ ಅಲ್ಲ. ಒಂದು ಹನಿ ಹಾಲಿಗಿಂತ ಲೋಟ ಹಾಲಿನಲ್ಲಿ ಹೆಚ್ಚು ಪುಷ್ಟಿಯುಂಟು. ಅಮೃತದ ದೃಷ್ಟಾಂತದಲ್ಲಿ ಮಾತ್ರ ಹಾಗಲ್ಲ. ಅಮೃತದ ಸಮುದ್ರದಲ್ಲಿರುವ

ಸವಿ ಅದರ ಒಂದು ಹನಿಯಲ್ಲಿಯೂ ಇದೆ. ಅಷ್ಟೇ ಪುಷ್ಟಿಯೂ ಇದೆ. ಒಂದು ಹನಿ ಅಮೃತ ಕತ್ತಿನಲ್ಲಿಳಿದರೂ ಅಮೃತತ್ವ ಪ್ರಾಪ್ತಿಯೇ!

ಹಾಗೇ ಪರಮಾತ್ಮನ ವಿರಾಟ್ ಸ್ವರೂಪದಲ್ಲಿರುವ ದಿವ್ಯತೆ, ಪಾವಿತ್ರ್ಯ ಚಿಕ್ಕ ಮೂರ್ತಿಯಲ್ಲೂ ಉಂಟು. ಮಾದರಿಗಾಗಿ ಒಂದು ಮುಷ್ಟಿ ಗೋಧಿಯನ್ನು ಒಬ್ಬರು ಕೊಟ್ಟರು. ಅಷ್ಟರಿಂದ ನಾನದನ್ನು ಪರೀಕ್ಷಿಸದಿದ್ದಲ್ಲಿ ಗೋಧಿಯ ಚೀಲವನ್ನೇ ತಂದು ನನ್ನ ಮುಂದಿಟ್ಟರೂ ಪ್ರಯೋಜನವಿಲ್ಲ. ಈಶ್ವರನ ಚಿಕ್ಕ ಮಾದರಿ ಕಣ್ಣೆದುರಿಗಿರುವಾಗ ಅವನ ಗುರುತು ತಿಳಿಯದಿದ್ದರೆ ವಿರಾಟ್-ಮೂರ್ತಿಯನ್ನು ಕಂಡಾಗತಾನೆ ಹೇಗೆ ತಿಳಿದೀತು? ಸಣ್ಣದು ದೊಡ್ಡದು ಎನ್ನುವುದರಲ್ಲಿ ಅರ್ಥವೇನು? ಸಣ್ಣ ರೂಪದ ಗುರುತು ತಿಳಿದರೆ ದೊಡ್ಡದರದು ತಿಳಿದೀತು. ಎಂತಲೇ ದೇವರು ತನ್ನ ದೊಡ್ಡ ರೂಪು ತೋರಿಸಲಿ ಎಂಬ ಬಯಕೆ ನನಗಿಲ್ಲ. ಅರ್ಜುನನಂತೆ ವಿಶ್ವರೂಪ ದರ್ಶನಕ್ಕಾಗಿ ಬೇಡುವಷ್ಟು ಯೋಗ್ಯತೆಯೂ ನನಗಿಲ್ಲ. ಅಲ್ಲದೆ, ನನಗೆ ಕಾಣಿಸುತ್ತಿರುವುದು ವಿಶ್ವರೂಪದ ತುಣುಕು ಅಲ್ಲ. ಒಡೆದುಹೋದ ಚಿತ್ರದ ತುಣುಕನ್ನು ನೋಡಿದರೆ ಪೂರ್ಣ ಚಿತ್ರದ ಕಲ್ಪನೆ ಬರಲಾರದು. ಆದರೆ ಪರಮಾತ್ಮನೇನೂ ಇಂಥ ತುಣುಕುಗಳಿಂದ ಹುಟ್ಟಿದವನಲ್ಲ. ಆತ ಕತ್ತರಿಗೆ ಸಿಕ್ಕಿಬಿದ್ದು ತುಂಡುತುಂಡಾಗಿಲ್ಲ. ಖಂಡಖಂಡನಾಗಿಲ್ಲ. ಸಣ್ಣ ಸ್ವರೂಪದಲ್ಲಿ ಆ ಅನಂತ ಪರಮೇಶ್ವರ ಪೂರ್ಣವಾಗಿ ತುಂಬಿಕೊಂಡಿದಾನೆ. ಚಿಕ್ಕ ಫೋಟೋ ದೊಡ್ಡ ಫೋಟೋಗಳಲ್ಲಿ ಅಂತರವೇನು? ದೊಡ್ಡದರಲ್ಲಿರುವುದೇ ಪೂರ್ಣವಾಗಿ ಚಿಕ್ಕದರಲ್ಲಿ ಕಾಣುತ್ತದೆ. ದೊಡ್ಡ ಫೋಟೋವಿನ ತುಂಡಲ್ಲ ಚಿಕ್ಕ ಫೋಟೋ. ಚಿಕ್ಕ ಟೈಪಿನಲ್ಲಿ ಅಕ್ಷರವಿದ್ದರೂ ಅರ್ಥ ಒಂದೇ. ದೊಡ್ಡ ಟೈಪುಗಳಲ್ಲಿ ದೊಡ್ಡ ಅರ್ಥ, ಚಿಕ್ಕ ಟೈಪುಗಳಲ್ಲಿ ಚಿಕ್ಕ ಅರ್ಥ—ಎಂದೇನೂ ಇಲ್ಲ.

ಮೂರ್ತಿಪೂಜೆಗೂ ಈ ವಿಚಾರಪದ್ಧತಿಯೇ ಆಧಾರ. ಮೂರ್ತಿಪೂಜೆಯ ಮೇಲೆ ಧಾಳಿ ಮಾಡಿದಾರೆ ಹೊರಗಿನವರೂ, ನಮ್ಮವರೂ. ಕೆಲವರು ವಿಚಾರಕರೂ ಅದನ್ನು ಹಳಿದರು. ಆದರೆ ನಾನು ವಿಚಾರಮಾಡಿದ ಹಾಗೆಲ್ಲ ಮೂರ್ತಿಪೂಜೆಯ ದಿವ್ಯತೆ ಹೆಚ್ಚುಹೆಚ್ಚು ಸ್ಪಷ್ಟವಾಗುತ್ತದೆ. ಮೂರ್ತಿಪೂಜೆ ಎಂದರೇನು? ಒಂದು ಚಿಕ್ಕ ವಸ್ತುವಿನಲ್ಲಿ ವಿಶ್ವವನ್ನೆಲ್ಲ

ಅನುಭವಿಸಲು ಕಲಿಯುವುದೇ ಮೂರ್ತಿಪೂಜೆ. ಚಿಕ್ಕಹಳ್ಳಿಯಲ್ಲಿ ಬ್ರಹ್ಮಾಂಡವನ್ನು ಕಾಣಲು ಕಲಿಯುವುದು. ಇದರಲ್ಲಿ ಅಸತ್ಯವೇನು ಬಂತು? ಇದು ಬರೀ ಕಲ್ಪನೆಯಲ್ಲ; ಅನುಭವದ ಮಾತು. ವಿರಾಟ್ ಸ್ವರೂಪ ದಲ್ಲಿದ್ದುದೇ ಚಿಕ್ಕ ಮೂರ್ತಿಯಲ್ಲೂ ಇರುತ್ತದೆ. ಮಣ್ಣಿನ ಕಣದಲ್ಲೂ ಇರುತ್ತದೆ. ಆ ಮಣ್ಣಿನ ಕಣದಲ್ಲಿ ಮಾವು, ಬಾಳೆ, ಗೋಧಿ, ಚಿನ್ನ, ತಾಮ್ರ, ಬೆಳ್ಳಿ ಎಲ್ಲವೂ ಇವೆ. ಸೃಷ್ಟಿಯೆಲ್ಲವೂ ಉಂಟು. ಸಣ್ಣ ನಾಟಕ ಮಂಡಲಿಯಲ್ಲಿ ಕೆಲವು ಪಾತ್ರಗಳೇ ಬೇರೆ ಬೇರೆ ವೇಷ ಧರಿಸಿ ರಂಗಭೂಮಿಗೆ ಬರುವಹಾಗೆ ಪರಮಾತ್ಮನೂ ಬೇರೆಬೇರೆ ರೂಪಗಳಲ್ಲಿ ಕಾಣಿಸುತ್ತಾನೆ. ನಾಟಕಕಾರನೊಬ್ಬ, ತಾನೇ ನಾಟಕ ರಚಿಸಿ ಅದರಲ್ಲಿ ಪಾತ್ರವನ್ನೂ ವಹಿಸುವ ಹಾಗೆ ಪರಮಾತ್ಮ ಅನಂತ ನಾಟಕ ರಚಿಸಿ, ತಾನೇ ಅನಂತ ಪಾತ್ರವಹಿಸಿ ನಟಿಸುತ್ತಾನೆ. ಈ ಅನಂತ ನಾಟಕದಲ್ಲಿನ ಒಂದು ಪಾತ್ರವನ್ನು ಗುರುತಿಸಿಕೊಂಡರೆ ಎಲ್ಲವನ್ನೂ ಗುರುತಿಸಿದ ಹಾಗೆ.

ಕಾವ್ಯದಲ್ಲಿ ಉಪಮೆ ದೃಷ್ಟಾಂತಗಳಿಗೆ ಆಧಾರವಾಗಿರುವುದೇ ಮೂರ್ತಿಪೂಜೆಗೂ ಆಧಾರ. ದುಂಡಗಿನ ವಸ್ತುವೊಂದನ್ನು ಕಂಡರೆ ಆನಂದ ವುಂಟಾಗುತ್ತದೆ. ಅದಕ್ಕೆ ಕಾರಣ ಅಲ್ಲಿರುವ ಸುವ್ಯವಸ್ಥೆ. ಅದೂ ಈಶ್ವರನ ಸ್ವರೂಪ. ಆತನ ಸೃಷ್ಟಿ ಸರ್ವಾಂಗ ಸುಂದರ. ಅಲ್ಲಿ ಒಳ್ಳೆಯ ವ್ಯವಸ್ಥೆಯುಂಟು. ಆ ದುಂಡನೆಯ ವಸ್ತು ವ್ಯವಸ್ಥಿತ ಈಶ್ವರನ ಮೂರ್ತಿ. ಕಾಡಿನಲ್ಲಿ ಬೆಳೆದ ಡೊಂಕುಗಿಡವೋ? ಅದೂ ಈಶ್ವರನ ಮೂರ್ತಿಯೆ. ಅಲ್ಲಿ ಆತನ ಸ್ವಚ್ಛಂದತನವಿದೆ. ಆ ಗಿಡಕ್ಕೆ ಬಂಧನವಿಲ್ಲ. ಈಶ್ವರನಿಗೆ ಬಂಧನ ವಿಧಿಸುವವರಾರು? ಆ ಬಂಧನಾತೀತ ಪರಮಾತ್ಮ ಆ ಡೊಂಕು ಗಿಡದಲ್ಲಿದಾನೆ. ಸರಳವಾದ ಕಂಭವೊಂದನ್ನು ಕಂಡಾಗ ಅಲ್ಲಿ ಈಶ್ವರನ ಸಮತೆ ಕಾಣುತ್ತದೆ. ಹೆಣಿಗೆಯ ಕಂಭದಲ್ಲಿ, ಆಕಾಶದಲ್ಲಿ ನಕ್ಷತ್ರಗಳ ರಂಗವಲ್ಲಿ ಬರೆಯುವ ಪರಮಾತ್ಮ ಕಾಣುತ್ತಾನೆ. ಕಡಿದು ಕತ್ತರಿಸಿ ತಯಾರಿಸಿದ ಉಪವನದಲ್ಲಿ ಈಶ್ವರನ ಸಂಯಮಿ ಸ್ವರೂಪ ಕಾಣಿಸಿದರೆ, ವಿಶಾಲವಾದ ಅರಣ್ಯದಲ್ಲಿ ಆತನ ಭವ್ಯತೆಯೂ ಸ್ವತಂತ್ರತೆಯೂ ಕಾಣಿಸು ತ್ತವೆ. ಅರಣ್ಯದಲ್ಲಿ ಆನಂದ. ಹಾಗಾದರೆ ನಾವು ಹುಚ್ಚರೇ? ಅಲ್ಲ. ಎರಡರಿಂದಲೂ ಆನಂದವಾಗುತ್ತದೆ. ಈಶ್ವರನ ಗುಣ ಎಲ್ಲೆಲ್ಲೂ ಪ್ರಕಟ

ವಾಗಿರುವುದೇ ಅದಕ್ಕೆ ಕಾರಣ. ನುಣ್ಣನೆಯ ಸಾಲಗ್ರಾಮದಲ್ಲಿರುವ ತೇಜಸ್ಸೇ ಒರಟು ಒರಟಾದ ನರ್ಮದಾ ಗಣಪತಿಯಲ್ಲೂ ಇದೆ. ಆ ವಿರಾಟ್ ರೂಪ ನನಗೆ ಬೇರೆಯಾಗಿ ಕಾಣಿಸದಿದ್ದರೂ ಅಡ್ಡಿಯಿಲ್ಲ.

ಪರಮಾತ್ಮ ಎಲ್ಲ ಕಡೆಗಳಲ್ಲೂ, ಎಲ್ಲ ವಸ್ತುಗಳಲ್ಲೂ ಬೇರೆಬೇರೆ ರೂಪಿನಿಂದ ಪ್ರಕಟವಾಗಿದಾನೆ. ಎಂತಲೇ ನಮಗೆ ಆನಂದ. ಆ ವಸ್ತುಗಳ ಬಗ್ಗೆ ಆತ್ಮೀಯತೆಯುಂಟಾಗುತ್ತದೆ. ಆನಂದವಾಗುವುದೇಕೆ? ಯಾವ ಸಂಬಂಧವೋ ಏನೋ ಅಂತೂ ಆನಂದವಾಗುತ್ತದೆ. ಮಗುವನ್ನು ನೋಡುತ್ತಲೂ ತಾಯಿಗೆ ಆನಂದದ ಸಂಬಂಧ ಹೊಳೆಯುತ್ತದೆ. ಪ್ರತಿಯೊಂದು ವಸ್ತುವಿಗೂ ಪರಮಾತ್ಮನ ಸಂಬಂಧ ಕಲ್ಪಿಸಿ. ನನ್ನೊಳಗಿರುವ ಪರಮಾತ್ಮನೇ ಆ ವಸ್ತುಗಳಲ್ಲೂ ಇದಾನೆ. ಆನಂದವನ್ನು ಹೆಚ್ಚಿಸಬೇಕಾದರೆ ಈ ತರಹ ಸಂಬಂಧ ಹೆಚ್ಚಿಸಬೇಕು. ಆನಂದಕ್ಕೆ ಬೇರೆ ಉಪಪತ್ತಿಯಿಲ್ಲ. ಎಲ್ಲ ಕಡೆಯಲ್ಲೂ ಪ್ರೀತಿಯ ಸಂಬಂಧ ಬೆಳೆಸಿ. ಅನಂತರ ಸ್ವಾರಸ್ಯ ನೋಡಿ. ಅನಂತ ಸೃಷ್ಟಿಯಲ್ಲಿನ ಪರಮಾತ್ಮ ಆಗ ಅಣುರೇಣುಗಳಲ್ಲೂ ಕಾಣಿಸಿಕೊಂಡಾನು. ಒಮ್ಮೆ ಈ ದೃಷ್ಟಿ ಬಂದರೆ ಆ ಮೇಲೆ ಏನಾಗಲಿಕ್ಕಿಲ್ಲ? ಇಂದ್ರಿಯಗಳಿಗೆ ಹತೋಟಿ ಕಲಿಸಬೇಕು. ಭೋಗವಾಸನೆ ತೊಲಗಿ ಪ್ರೀತಿಯ ಪವಿತ್ರದೃಷ್ಟಿ ಬಂದಲ್ಲಿ ಪ್ರತಿಯೊಂದು ವಸ್ತುವಿನಲ್ಲೂ ದೇವರು ಪ್ರಕಟವಾದಾನು. ಆತ್ಮದ ಬಣ್ಣವೆಂಥದು ಎಂಬ ಬಗ್ಗೆ ಉಪನಿಷತ್ತಿನಲ್ಲಿ ಸುಂದರ ವರ್ಣನೆಯಿದೆ. ಆತ್ಮಕ್ಕೆ ಯಾವ ಬಣ್ಣ? ಋಷಿಗಳು ಪ್ರೀತಿಯಿಂದ ಹೇಳುತ್ತಾರೆ :

"ಯಥಾ ಅಯಂ ಇಂದ್ರಗೋಪಃ"

ಕೆಂಪು ರೇಶಿಮೆಯಂಥ ನುಣ್ಣನೆಯ ಮೃಗದ ಕೀಟದ ಹಾಗೆ ಆತ್ಮದ ರೂಪ. ಆ ಕೀಟವನ್ನು ಕಂಡಾಗ ಎಂಥ ಆನಂದವಾಗುತ್ತದೆ! ಏಕೆ ಆನಂದ? ನನ್ನಲ್ಲಿರುವ ಆನಂದವೇ ಆ ಇಂದ್ರಗೋಪದಲ್ಲಿ ಉಂಟು. ಅದಕ್ಕೂ ನನಗೂ ಸಂಬಂಧವಿರದಿದ್ದರೆ ನನಗೆ ಆನಂದ ಆಗುತ್ತಿರಲಿಲ್ಲ. ನನ್ನಲ್ಲಿರುವ ಸುಂದರ ಆತ್ಮವೇ ಆ ಇಂದ್ರಗೋಪದಲ್ಲೂ ಇದೆ. ಎಂತಲೇ ಅದರ ಉಪಮೆ ಕೊಟ್ಟೆ. ಉಪಮೆ ಕೊಡುವುದೇಕೆ? ಅದರಿಂದ ಆನಂದವಾಗುವುದೇಕೆ? ಆ ಎರಡು ವಸ್ತುಗಳಲ್ಲೂ ಹೋಲಿಕೆಯುಂಟೆಂದು ಉಪಮೆ ಕೊಡುತ್ತೇವೆ.

ಉಪಮೇಯ, ಉಪಮಾನಗಳು ತೀರ ಭಿನ್ನ ವಸ್ತುಗಳಾಗಿದ್ದರೆ ಆನಂದ ವಾಗದು. ಯಾರಾದರೂ 'ಉಪ್ಪು ಕಾರವಿದ್ದಂತೆ' ಎಂದರೆ ಅವರಿಗೆ ತಲೆ ನೆಟ್ಟಗಿಲ್ಲ ಎನ್ನುತ್ತೇವೆ. 'ತಾರೆಗಳು ಹೂಗಳ ಹಾಗಿವೆ' ಎಂದು ಯಾರಾದರೂ ಹೇಳಿದರೆ ಹೋಲಿಕೆ ಸರಿಯಾಗಿ ಆನಂದವಾಗುತ್ತದೆ. ಉಪ್ಪು ಕಾರದಂತಿದೆಯೆಂದು ಹೇಳುವಾಗ ಸಾದೃಶ್ಯ ಅನುಭವವಾಗದು. ಆದರೆ ಯಾರಾದರೊಬ್ಬರ ದೃಷ್ಟಿ ವಿಶಾಲವಾಗಿದ್ದರೆ, ಉಪ್ಪಿನಲ್ಲಿರುವ ಪರಮಾತ್ಮನೇ ಕಾರದಲ್ಲಿ ಇರುವನೆಂಬ ದರ್ಶನವಾಗಿದ್ದರೆ, ಉಪ್ಪು ಕಾರದಹಾಗಿದೆ ಎಂಬ ಹೇಳಿಕೆಯಿಂದಲೂ ಅಂಥವರಿಗೆ ಆನಂದವಾದೀತು. ಸಾರಾಂಶ: ಪ್ರತಿಯೊಂದು ವಸ್ತುವಿನಲ್ಲೂ ಈಶ್ವರೀ ರೂಪ ತುಂಬಿದೆ. ಆದಕ್ಕಾಗಿ ವಿರಾಟ್ ದರ್ಶನದ ಅವಶ್ಯಕತೆಯಿಲ್ಲ.

## ೫೭. ವಿರಾಟ್ – ವಿಶ್ವರೂಪ ಜೀರ್ಣವಾಗದು

ಅಲ್ಲದೆ, ಆ ವಿರಾಟ್ ದರ್ಶನ ನನಗೆ ಸಹಿಸೀತಾದರೂ ಹೇಗೆ? ಚಿಕ್ಕ ಸಗುಣ ಸುಂದರರೂಪದ ಬಗ್ಗೆ ನನಗಿರುವ ಪ್ರೀತಿ, ಆತ್ಮೀಯತೆ, ಸವಿ, ವಿಶ್ವರೂಪದಲ್ಲಿ ಅನುಭವಕ್ಕೆ ಬಂದೀತೋ ಇಲ್ಲವೋ! ಅರ್ಜುನನ ಸ್ಥಿತಿಯೂ ಹೀಗೇ ಆಗಿತ್ತು. ಕಡೆಗೆ ಆತ ಥರಥರ ನಡುಗುತ್ತಾ, "ದೇವಾ, ನಿನ್ನ ಆ ಮೊದಲಿನ ಸವಿರೂಪು ತೋರಿಸು" ಎಂದು ಬೇಡುತ್ತಾನೆ. ವಿರಾಟ್ ಸ್ವರೂಪದರ್ಶನಕ್ಕಾಗಿ ಆಶಿಸಬೇಡಿ ಎಂದು ಅರ್ಜುನ ಸ್ವಾನುಭವ ದಿಂದ ಹೇಳುತ್ತಿದಾನೆ. ಪರಮಾತ್ಮ ತ್ರಿಕಾಲದಲ್ಲಿ, ತ್ರಿಸ್ಥಳದಲ್ಲಿ ವ್ಯಾಪಿಸಿ ದಾನೆ. ಸಾಕು. ಅದೆಲ್ಲ ಒಟ್ಟುಗೂಡಿ ನಿಗಿನಿಗಿ ಕೆಂಡವಾಗಿ ನನ್ನೆದುರಿಗೆ ಬಂದು ನಿಂತರೆ ನನ್ನ ಸ್ಥಿತಿಯೇನಾದೀತು? ತಾರೆಗಳೆಷ್ಟು ಶಾಂತವಾಗಿ ಕಾಣುತ್ತವೆ. ದೂರದಿಂದ ನನ್ನೊಂದಿಗೆ ಮಾತನಾಡಿದ ಹಾಗೇ ತೋರುತ್ತದೆ. ದೃಷ್ಟಿಯನ್ನು ಶಾಂತಗೊಳಿಸುವ ಆ ತಾರೆ ಹತ್ತಿರ ಬಂದರೆ ಧಗಧಗಿಸುವ ಬೆಂಕಿ! ನಾನು ಸುಟ್ಟೇಹೋಗಬಹುದು. ಈಶ್ವರನ ಈ ಅನಂತ ಬ್ರಹ್ಮಾಂಡಗಳು ಇದ್ದ ಕಡೆಗಳಲ್ಲೇ ಇರಲಿ. ಅವೆಲ್ಲವನ್ನೂ ತಂದು ಒಂದೇ ಕೊಠಡಿಯಲ್ಲಿಡುವುದರಲ್ಲಿ ಏನು ಸ್ವಾರಸ್ಯ? ಮುಂಬಯಿಯ ಆ ಕಪೋತ ಗೃಹದಲ್ಲಿ ಸಾವಿರಾರು ಪಾರಿವಾಳಗಳಿವೆ. ಅಲ್ಲಿ ಸ್ವಾತಂತ್ರ್ಯವುಂಟೆ?

ಆ ದೃಶ್ಯವೇನೊ ಚಮತ್ಕಾರವೇ. ಕೆಳಗೆ, ಮೇಲೆ, ಇಲ್ಲಿ, ಮೂರೂ ಕಡೆಗಳಲ್ಲಿ ಸೃಷ್ಟಿ ವಿಭಾಗಿಸಲ್ಪಟ್ಟಿದೆ. ಇದೇ ಸ್ವಾರಸ್ಯ. ಸ್ಥಲಾತ್ಮಕ ಸೃಷ್ಟಿಯದು ಹೇಗೋ ಹಾಗೇ ಕಾಲಾತ್ಮಕ ಸೃಷ್ಟಿಯದು. ನಮಗೆ ಭೂತಕಾಲದ ನೆನಪು ಆಗದು. ಮುಂದಿನದು ತಿಳಿಯದು. ಅದೂ ನಿಮ್ಮ ಕಲ್ಯಾಣಕ್ಕೆ ಕಾರಣ. ಎಂದೂ ಮನುಷ್ಯ ಪ್ರಾಣಿಯ ಅಧಿಕಾರಕ್ಕೊಳಪಡದೆ, ಪರಮಾತ್ಮನ ವಿಶೇಷ ಅಧಿಕಾರಕ್ಕೊಳಪಟ್ಟ ವಸ್ತುಗಳನ್ನು ಕುರಾನಿನಲ್ಲಿ ಹೇಳಿದೆ. 'ಭವಿಷ್ಯ ಕಾಲದ ಜ್ಞಾನ' ಅವುಗಳಲ್ಲೊಂದು. ನಾವು ಅಂದಾಜು ಮಾಡುತ್ತೇವೆ. ಆ ಅಂದಾಜು ಎಂದರೇನೂ ಜ್ಞಾನವಲ್ಲ. ಭೂತಕಾಲ ತಿಳಿಯದಿರುವುದೂ ಒಳ್ಳೆಯದೇ. ದುರ್ಜನನಾಗಿದ್ದವನೊಬ್ಬ ಒಳ್ಳೆಯವನಾಗಿ ನನ್ನೆದುರಿಗೆ ಬಂದರೆ, ಆತನ ಭೂತಕಾಲವನ್ನು ಸ್ಮರಿಸಿಕೊಂಡಾಗ ಅವನ ಬಗ್ಗೆ ನನಗೆ ಆದರವೆನಿಸದು. ಅವನೆಷ್ಟು ಹೇಳಿಕೊಂಡರೂ ಅವನ ಆ ಪೂರ್ವದ ಪಾಪ ಗಳನ್ನು ಮರೆಯಲಾಗುವುದಿಲ್ಲ. ಆತ ಸತ್ತು, ರೂಪ ಬದಲಾಯಿಸಿಕೊಂಡು ಮರಳಿದಾಗಲೇ ಜಗತ್ತಿಗೆ ಅವನ ಪಾಪಗಳ ವಿಸ್ಮೃತಿಯಾದೀತು.

ಹಿಂದಿನ ಸ್ಮರಣೆಯಿಂದ ವಿಕಾರ ಬೆಳೆಯುತ್ತದೆ. ಹಿಂದಿನ ಈ ಎಲ್ಲ ಜ್ಞಾನವೂ ನಾಶವಾದಲ್ಲಿ ಎಲ್ಲವೂ ಮುಗಿದಂತೆಯೆ. ಪಾಪ ಪುಣ್ಯಗಳ ವಿಸ್ಮೃತಿಯಾಗಲು ಒಂದು ಉಪಾಯ ಅಗತ್ಯ. ಆ ಉಪಾಯವೇ ಸಾವು. ಎಂದರೆ ಪೂರ್ವಜನ್ಮದ ವಿಸ್ಮೃತಿ. ಈ ಜನ್ಮದ ವೇದನೆಗಳೇ ಅಸಹ್ಯವಾಗಿ ಇರುವಾಗ ಹಿಂದಿನ ಜನ್ಮದ ಕೊಳಚೆಯನ್ನೇಕೆ ಕೆದರಬೇಕು? ಈ ಜನ್ಮದ ಕೊಳಡಿಯಲ್ಲೇನು ಕಡಿಮೆಯೆ ಕೊಳೆ? ಬಾಲ್ಯಕಾಲವನ್ನು ಸಹ ನಾವು ತುಂಬಾ ಮರೆಯುತ್ತೇವೆ. ವಿಸ್ಮೃತಿ ಒಳ್ಳೆಯದು. ಹಿಂದೂ ಮುಸ್ಲಿಂ ಐಕ್ಯಕ್ಕೆ ಭೂತಕಾಲದ ವಿಸ್ಮರಣೆ ಉತ್ತಮೋಪಾಯ. ಔರಂಗಜೇಬ್ ಜುಲುಮೆ ನಡೆಸಿದ. ಇನ್ನೂ ಎಷ್ಟು ದಿನ ಅದನ್ನೇ ನೆನೆಯುತ್ತಿರುವುದು? ಗುಜರಾತಿನಲ್ಲಿ ರತನಬಾಯಿಯದು ಗರ್ಬಾಗೀತೆಯುಂಟು. ಅದರ ಕೊನೆಯಲ್ಲಿ 'ಜಗತ್ತಿನಲ್ಲಿ ಕೊನೆಗೆ ಎಲ್ಲರದೂ ಕೀರ್ತಿ ಉಳಿದೀತು. ಪಾಪ ಮರೆತುಹೋದೀತು' ಎಂದು ಹೇಳಿದೆ. ಕಾಲ ಜಾಡು ಹಿಡಿದಿದ್ದು ಇತಿಹಾಸದಲ್ಲಿ ಒಳ್ಳೆಯದನ್ನು ಆರಿಸಿಕೊಳ್ಳಬೇಕು. ಪಾಪವನ್ನು ಬಿಸುಡ ಬೇಕು. ಕೆಟ್ಟುದನ್ನು ಬಿಟ್ಟು ಒಳ್ಳೆಯದನ್ನೇ ನೆನಪಿನಲ್ಲಿಟ್ಟುಕೊಂಡರೆ

ಮನುಷ್ಯ ಬಂಗಾರವಾದಾನು. ಹಾಗಾಗುವುದಿಲ್ಲ. ಎಂತಲೇ ವಿಸ್ಮರಣೆ ಅಗತ್ಯ. ಅದಕ್ಕಾಗಿಯೇ ಭಗವಂತ ಸಾವನ್ನು ನಿರ್ಮಿಸಿದಾನೆ.

ಸಾರಾಂಶ: ಜಗತ್ತು ಹೇಗಿದೆಯೊ ಅದೇ ಮಂಗಲ. ಕಾಲಸ್ಥಲಾತ್ಮಕ ಜಗತ್ತನ್ನು ಒಂದೇ ಎಡೆ ತರುವ ಕಾರಣವಿಲ್ಲ. ಅತಿ ಪರಿಚಯದಲ್ಲಿ ಸ್ವಾರಸ್ಯ ವಿಲ್ಲ. ಕೆಲವು ವಸ್ತುಗಳೊಂದಿಗೆ ಸಲುಗೆ ಬೇಕು. ಕೆಲವಕ್ಕೆ ದೂರವಾಗಿರ ಬೇಕು. ಗುರು ಎದುರಿಗಿದ್ದಾಗ ನಮ್ರತೆಯಿಂದ ದೂರ ಕೂಡುತ್ತೇವೆ. ತಾಯಿಯ ತೊಡೆಯನ್ನೇ ಏರಿ ಕೂಡುತ್ತೇವೆ. ಯಾವ ಮೂರ್ತಿಯ ಬಳಿ ಹೇಗೆ ವರ್ತಿಸಬೇಕೋ ಹಾಗೇ ವರ್ತಿಸಬೇಕು. ಹೂವನ್ನು ಕೈಗೆತ್ತಿಕೊಳ್ಳ ಬಹುದು. ಬೆಂಕಿಯನ್ನು ಹಿಡಿತದಲ್ಲಿಡಬೇಕು. ದೂರದಿಂದ ತಾರೆ ಸುಂದರ. ಸೃಷ್ಟಿಯೂ ಹಾಗೆಯೇ. ಅತಿ ದೂರದಲ್ಲಿರುವ ಆ ಸೃಷ್ಟಿಯನ್ನು ತೀರ ಹತ್ತಿರ ತರುವಲ್ಲಿ ಸ್ವಾರಸ್ಯವೇನೂ ಇಲ್ಲ. ಯಾವ ವಸ್ತು ಎಲ್ಲಿದೆಯೋ ಅಲ್ಲೇ ಇರಲಿ. ಅದರಲ್ಲಿಯೇ ಸ್ವಾರಸ್ಯವುಂಟು. ದೂರದಿಂದ ಕಾಣುವ ವಸ್ತು ಹತ್ತಿರ ಬಂದರೆ ಸುಖಾವಹವಾದೀತು ಎಂದೇನಿಲ್ಲ. ಅದನ್ನು ಹಾಗೆಯೇ ದೂರ ವಾಗಿಟ್ಟು ಅದರ ರಸವನ್ನು ಸವಿ. ಉದ್ದಂಡನಾಗಿ ಹೆಚ್ಚು ಸಲುಗೆ ಬೆಳಸಿ ಅತಿ ಪರಿಚಯ ಮಾಡಿಕೊಳ್ಳುವುದರಲ್ಲಿ ಅರ್ಥವೇನೂ ಇಲ್ಲ.

ತ್ರಿಕಾಲಗಳೂ ನಮ್ಮೆದುರು ನಿಂತಿಲ್ಲ. ಅದೂ ಒಳ್ಳೆಯದೇ. ತ್ರಿಕಾಲ ಜ್ಞಾನದಲ್ಲಿ ಆನಂದ, ಕಲ್ಯಾಣ ಉಂಟೆಂದು ಹೇಳಲಾಗುವುದಿಲ್ಲ. ಅರ್ಜುನ ಪ್ರೀತಿಯಿಂದ ಬೇಡಿದ, ಹಟ ಹಿಡಿದ, ಪ್ರಾರ್ಥನೆ ಮಾಡಿದ, ದೇವರು ಅದನ್ನು ನೆರವೇರಿಸಿದ. ತನ್ನ ವಿರಾಟ್ ಸ್ವರೂಪವನ್ನು ತೆರೆದು ತೋರಿಸಿದ. ನನಗೆ ಮಾತ್ರ ಪರಮಾತ್ಮನ ಚಿಕ್ಕ ರೂಪವೇ ಸಾಕು. ಆ ಚಿಕ್ಕ ರೂಪ ವೇನೂ ಪರಮಾತ್ಮನ ತುಣುಕಲ್ಲ. ಒಂದುವೇಳೆ ಅದು ಆತನದೊಂದು ತುಣುಕೆಂದು ತಿಳಿದುಕೊಂಡರೂ ಆ ವಿಶಾಲ ಮೂರ್ತಿಯದೊಂದು ಕಾಲೋ ಕೈಯೋ ಬೆರಳೋ ಕಾಣಿಸಿದರೂ ಅದೇ ನನ್ನ ಭಾಗ್ಯವೆಂದೇನು. ಇದು ನನ್ನ ಅನುಭವದ ಮಾತು. ವಾರ್ಧಾದಲ್ಲಿ ಹರಿಜನರಿಗಾಗಿ ಜಮನಾಲಾಲಜಿ ಲಕ್ಷ್ಮೀನಾರಾಯಣ ಮಂದಿರವನ್ನು ತೆರೆದಾಗ ದರ್ಶನಕ್ಕಾಗಿ ನಾನು ಹೋಗಿದ್ದೆ. ಹದಿನೈದು ಇಪ್ಪತ್ತು ನಿಮಿಷ ಆ ರೂಪವನ್ನು ನೋಡುತ್ತಿದ್ದೆ. ಸಮಾಧಿ ಹತ್ತಿದಹಾಗಾಯಿತು ನನಗೆ. ಪರಮಾತ್ಮನ ಆ ಮುಖ, ಆ ಎದೆ,

ಆ ಕೈ ನೋಡುತ್ತ, ನನ್ನ ದೃಷ್ಟಿ ಕಾಲಿನ ಬಳಿ ಬಂದು ಚರಣಗಳ ಮೇಲೆ ಸ್ಥಿರವಾಯಿತು. ' ಎಷ್ಟು ಚೆಂದ ನಿನ್ನ ಪಾದ ಸೇವೆ! ' ಎಂಬ ಭಾವನೆಯೇ ಕೊನೆಗೆ ಸ್ಥಿರವಾಯಿತು. ಚಿಕ್ಕ ರೂಪಿನಲ್ಲಿ ಆ ಮಹಾಪುರುಷ ಹಿಡಿಸಲಾಗದಿದ್ದರೆ ಆತನ ಚರಣ ಸಿಕ್ಕಿದರೂ ಸಾಕು. ದೇವರನ್ನು ಅರ್ಜುನ ಪ್ರಾರ್ಥಿಸಿದ. ಅವನ ಅಧಿಕಾರ ದೊಡ್ಡದು. ಅವನ ಸಲುಗೆಯೆಷ್ಟು, ಪ್ರೇಮವೆಷ್ಟು, ಸ್ನೇಹಭಾವವೆಷ್ಟು! ನನ್ನ ಯೋಗ್ಯತೆ ಏನು? ಚರಣಗಳೇ ಸಾಕು ನನಗೆ. ಅಷ್ಟೇ ನನ್ನ ಅಧಿಕಾರ.

## ೫೮. ಸರ್ವಾರ್ಥ ಸಾರ

ಪರಮಾತ್ಮನ ಆ ದಿವ್ಯರೂಪದ ವರ್ಣನೆಯಲ್ಲಿ ನನ್ನ ಬುದ್ಧಿಯನ್ನು ಓಡಿಸುವ ಇಷ್ಟ ನನಗಿಲ್ಲ ಅಲ್ಲಿ ಬುದ್ಧಿಯನ್ನೋಡಿಸುವುದು ಪಾಪವಾದೀತು. ಆ ವಿಶ್ವರೂಪದ ವರ್ಣನೆಯ ಪವಿತ್ರಶ್ಲೋಕ ಓದಬೇಕು, ಪವಿತ್ರವಾಗಬೇಕು. ಬುದ್ಧಿಯನ್ನುಪಯೋಗಿಸಿ ಪರಮಾತ್ಮನ ಆ ರೂಪವನ್ನು ತುಂಡು ತುಂಡು ಮಾಡಬೇಕೆಂದು ನನಗನಿಸುವುದಿಲ್ಲ. ಅದು ಅಘೋರ ಉಪಾಸನೆ. ಸ್ಮಶಾನಕ್ಕೆ ಹೋಗಿ ಹೆಣ ಹರಿದು, ತಂತ್ರೋಪಾಸನೆ ಮಾಡುವ ಅಘೋರ ಪಂಥೀಯ ಕರ್ಮದಂತಾದೀತು. ಪರಮಾತ್ಮನ ಆ ದಿವ್ಯ ರೂಪ.

ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ |
ವಿಶ್ವತೋ ಬಾಹುರುತ ವಿಶ್ವತಸ್ಪಾತ್ ||

ಆದ ಆ ವಿಶಾಲ ಅನಂತ ರೂಪ. ಅದರ ವರ್ಣನೆಯ ಶ್ಲೋಕಗಳನ್ನು ಓದಬೇಕು. ಮನಸ್ಸನ್ನು ನಿರ್ಮಲಗೊಳಿಸಬೇಕು.

ಪರಮೇಶ್ವರನ ಈ ವರ್ಣನೆಯನ್ನೋದುವಾಗ ಒಂದೇ ಒಂದು ಕಡೆ ಬುದ್ಧಿಗೆ ಯೋಚನೆಗಿಟ್ಟುಕೊಳ್ಳುತ್ತದೆ. ' ಅರ್ಜುನಾ, ಇವರೆಲ್ಲ ನಾಯುವವರು. ನೀನು ನಿಮಿತ್ತಮಾತ್ರನಾಗು. ಎಲ್ಲಾ ಮಾಡುವವನೂ ನಾನೇ ' ಎಂದು ಪರಮಾತ್ಮ ಹೇಳುತ್ತಾನೆ. ' ನಿಮಿತ್ತ ಮಾತ್ರಂ ಭವ ಸವ್ಯಸಾಚಿನ್ ' ಎಂಬ ವಾಕ್ಯವೊಂದೇ ಮನಸ್ಸಿನಲ್ಲಿ ದುಮುದುಮಿಸುತ್ತದೆ. ಈಶ್ವರನ ಕೈಯಲ್ಲಿ ನಾವು ಆಯುಧವಾಗಬೇಕು. ಬುದ್ಧಿ ಯೋಚಿಸತೊಡಗುತ್ತದೆ. ಆಯುಧವಾಗುವುದೇ? ಹೇಗೆ? ದೇವರ ಕೈಯಲ್ಲಿನ ಕೊಳಲಾಗಬೇಕೋ

ನಾನು? ನನ್ನನ್ನು ಆತ ತುಟಿಗಳಿಗಿಟ್ಟುಕೊಂಡು ನನ್ನಿಂದ ಮಧುರ ಸ್ವರ ಹೊರಡಿಸುತ್ತಾನೋ? ನನ್ನನ್ನು ಬಾರಿಸುತ್ತಾನೋ? ಅದು ಹೇಗೆ? ಕೊಳಲಾಗಬೇಕಾದರೆ ನನ್ನ ಒಳಗು ಬರಿಯದಾಗಬೇಕು. ನಾನೋ ವಿಕಾರಗಳಿಂದ ತುಂಬಿದೇನೆ. ನನ್ನಿಂದ ಮಧುರ ಸ್ವರ ಹೇಗೆ ತಾನೇ ಹೊರಟೀತು? ನನ್ನ ಧ್ವನಿ ಒರಟು. ನಾನು ಘನವಸ್ತು; ಅಹಂಕಾರ ಪೂರ್ಣ. ನಾನು ಅಹಂಕಾರವನ್ನು ಬಿಡಬೇಕು. ಪೂರ್ಣವಾಗಿ ನಾನು ಮುಕ್ತನಾದಾಗ, ಬರಿದಾದಾಗ ಪರಮಾತ್ಮ ನನ್ನನ್ನು ಬಾರಿಸಬಹುದು. ಆತನ ಕೈಯಲ್ಲಿ ಮುರಲಿಯಾಗುವುದು ಸಾಹಸವೇ. ಅವನ ಪಾದರಕ್ಷೆ ಯಾಗೆಂದರೂ ಸುಲಭವಲ್ಲ. ಪರಮಾತ್ಮನ ಪಾದಗಳಿಗೆ ನೋವನ್ನುಂಟು ಮಾಡದಂಥ ಮೃದು ರಕ್ಷೆಯಾಗಬೇಕು. ಪರಮೇಶ್ವರನ ಪಾದಗಳಿಗೂ ಮುಳ್ಳುಗಳಿಗೂ ನಡುವೆ ನಾನು ಬಿದ್ದುಕೊಂಡಿರಬೇಕು. ನನ್ನನ್ನು ನಾನೇ ಹದ ಮಾಡಬೇಕು. ನನ್ನ ಚರ್ಮವನ್ನು ಸುಲಿದು ಅದನ್ನು ಹದಗೊಳಿಸ ಬೇಕು. ಮೃದುಗೊಳಿಸಬೇಕು. ಎಂತಲೇ ಪರಮಾತ್ಮನ ಪಾದರಕ್ಷೆ ಯಾಗುವುದೂ ಸುಲಭವಲ್ಲ. ಪರಮಾತ್ಮನ ಕೈಯ ಆಯುಧವಾಗಲು ಹತ್ತು ಸೇರು ಭಾರದ ಕಬ್ಬಿಣದ ಗುಂಡಾಗಿ ಪ್ರಯೋಜನವಿಲ್ಲ. ತಪಸ್ಸಿನ ಸಾಣೆಗೆ ಸಿಕ್ಕಿ ನನ್ನನ್ನು ನಾ ಹರಿತಮಾಡಿಕೊಳ್ಳಬೇಕು. ನನ್ನ ಬದುಕಿನ ಕತ್ತಿ ಈಶ್ವರನ ಕೈಯಲ್ಲಿ ಝಳಪಿಸಬೇಕು. ನನ್ನ ಬುದ್ಧಿಯಿಂದ ಈ ದನಿ ಯಾವಾಗಲೂ ಹೊರಡುತ್ತದೆ. ದೇವರ ಕೈಯ ಆಯುಧವಾಗಬೇಕೆಂಬ ವಿಚಾರದಲ್ಲೇ ಮನಸ್ಸು ತೊಡಗಿಕೊಳ್ಳುತ್ತದೆ. ಅದು ಆಗುವುದು ಹೇಗೆ. ಅದನ್ನು ಸಾಧಿಸುವುದು ಹೇಗೆ ಎಂಬುದನ್ನು ಕೊನೆಯ ಶ್ಲೋಕದಲ್ಲಿ ಭಗವಂತನೇ ಹೇಳಿದಾನೆ. ತಮ್ಮ ಭಾಷ್ಯದಲ್ಲಿ ಶಂಕರಾಚಾರ್ಯರು ಈ ಶ್ಲೋಕ 'ಸರ್ವಾರ್ಥ ಸಾರ', ಗೀತೆಯ ಸರ್ವಸಾರ ಎಂದು ಹೇಳಿದಾರೆ. ಯಾವ ಶ್ಲೋಕ ಅದು?

"ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥"

ಲೋಕದಲ್ಲಿ ಯಾರೊಂದಿಗೂ ವೈರವಿಲ್ಲದವ, ತಟಸ್ಥನಾಗಿದ್ದುಕೊಂಡು ನಿರಪೇಕ್ಷ ಬುದ್ಧಿಯಿಂದ ಜಗತ್ತಿನ ಸೇವೆ ಮಾಡುವವ, ಮಾಡಿದುದನ್ನೆಲ್ಲ

ಅರ್ಪಿಸುವವ, ನನ್ನ ಭಕ್ತಿಯಿಂದ ತುಂಬಿದವ, ಕ್ಷಮಾವಂತ, ನಿಃಸಂಗ, ವಿರಕ್ತ, ಪ್ರೇಮಲ ಭಕ್ತ – ಇಂಥವನು ಪರಮಾತ್ಮನ ಕೈಯಲ್ಲಿನ ಆಯುಧ ವಾಗುತ್ತಾನೆ. ಇದೇ ಆ ಸಾರಸರ್ವಸ್ವ.

ಭಾನುವಾರ,
೧–೫–೧೯೩೨.

## ೫೫. ಆರರಿಂದ ಹನ್ನೊಂದು ಅಧ್ಯಾಯದವರೆಗೆ ಸಮಗ್ರತೆ

ಗಂಗಾ ಪ್ರವಾಹ ಎಲ್ಲೆಡೆಗೂ ಪಾವನ, ಪವಿತ್ರ. ಅದರಲ್ಲಿ ಹರಿದ್ವಾರ, ಕಾಶಿ, ಪ್ರಯಾಗಗಳು ಇನ್ನೂ ಪವಿತ್ರ. ಲೋಕವನ್ನೆಲ್ಲ ಅವು ಪಾವನ ಗೊಳಿಸಿವೆ. ಭಗವದ್ಗೀತೆಯೂ ಹಾಗೇ. ಮೊದಲಿನಿಂದ ಕೊನೆಯವರೆಗೆ ಗೀತೆಯೆಲ್ಲವೂ ಪಾವನ, ಪವಿತ್ರ. ಆದರೆ ನಡುವೆ ಕೆಲವು ಅಧ್ಯಾಯಗಳು ತೀರ್ಥಕ್ಷೇತ್ರಗಳಂತಿವೆ. ಇಂದು ನಾ ಮಾತನಾಡಬೇಕಾದ ಅಧ್ಯಾಯ ಅತ್ಯಂತ ಪವಿತ್ರ ತೀರ್ಥ. ಪ್ರತ್ಯಕ್ಷ ಭಗವಂತನೇ ಈ ಅಧ್ಯಾಯವನ್ನು 'ಅಮೃತ ಧಾರೆ' ಎಂದು ಕರೆದಿದಾನೆ. "ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ." ಇಪ್ಪತ್ತು ಶ್ಲೋಕಗಳ ಚಿಕ್ಕ ಅಧ್ಯಾಯ ಇದು. ಆದರೂ ಅಮೃತದ ಧಾರೆ. ಅಮೃತದಂತೆ ಮಧುರ ಶಾಂತ. ಭಗವಂತನ ಮುಖದಿಂದ ಈ ಅಧ್ಯಾಯದಲ್ಲಿ ಭಕ್ತಿರಸದ ಮಹಿಮೆಯ ತತ್ವ ಹೊರಹೊರಟಿವೆ.

ವಾಸ್ತವವಾಗಿ ಆರನೆ ಅಧ್ಯಾಯದಿಂದ ಭಕ್ತಿತತ್ವಕ್ಕೆ ಮೊದಲಾಯಿತು. ಐದನೆ ಅಧ್ಯಾಯದ ಕೊನೆಯವರೆಗೆ ಬಾಳಿನ ಶಾಸ್ತ್ರ ಬಂತು. ಸ್ವಧರ್ಮಾ ಚರಣೆಯ ಕರ್ಮ, ಅದಕ್ಕೆ ಸಹಾಯಕವಾದ ಮಾನಸಿಕ ಸಾಧನಸ್ವರೂಪಿ ವಿಕರ್ಮ, ಇವೆರಡರ ಸಹಾಯದಿಂದ ಕರ್ಮವನ್ನು ಸಂಪೂರ್ಣ ಭಸ್ಮ ಮಾಡುವ ಅಂತಿಮ ಅಕರ್ಮ, ಇವುಗಳ ನಿಲವುಗಳನ್ನು ಕುರಿತು ಐದು ಅಧ್ಯಾಯಗಳಲ್ಲಿ ಚರ್ಚೆ ನಡೆಯಿತು. ಬಾಳಿನ ಶಾಸ್ತ್ರ ಅಲ್ಲಿಗೆ ಮುಗಿಯಿತು. ಮುಂದೆ ಆರನೆ ಅಧ್ಯಾಯದಿಂದ ಹನ್ನೊಂದನೆ ಅಧ್ಯಾಯದ ಕೊನೆಯವರೆಗೆ ಒಂದು ಅರ್ಥದಲ್ಲಿ ಭಕ್ತಿತತ್ವದ್ದೇ ವಿಚಾರ. ಏಕಾಗ್ರತೆಯಿಂದ ವಿಚಾರ ಮೊದಲಾಯಿತು. ಚಿತ್ತದ ಏಕಾಗ್ರತೆಯಾಗುವುದು ಹೇಗೆ, ಅದಕ್ಕೆ ಸಾಧನೆಗಳೇನು, ಚಿತ್ತದ ಏಕಾಗ್ರತೆಯ ಅಗತ್ಯ ಎಷ್ಟು ಎಂಬುದು ಆರನೆ ಅಧ್ಯಾಯದಲ್ಲಿ. ಹನ್ನೊಂದನೆ ಅಧ್ಯಾಯದಲ್ಲಿ ಸಮಗ್ರತೆಯ ವಿಚಾರ ಬಂತು. ಇಷ್ಟು ದೂರ ನಾವು ಹೇಗೆ ಹೆಜ್ಜೆಯಿಟ್ಟೆವೆಂಬುದನ್ನು ನೋಡೋಣ.

ಚಿತ್ತದ ಏಕಾಗ್ರತೆಯಿಂದ ಆರಂಭವಾಯಿತು. ಈ ಏಕಾಗ್ರತೆ ಬಂದಲ್ಲಿ ಮನುಷ್ಯ ಯಾವ ವಿಷಯವನ್ನಾದರೂ ಯೋಚಿಸಬಲ್ಲ. ಚಿತ್ತದ ಏಕಾಗ್ರತೆಯಿಂದ— ನನ್ನ ಮೆಚ್ಚುಗೆಯ ವಿಷಯವನ್ನೆತ್ತಿಕೊಂಡರೆ, ಗಣಿತದ ಅಭ್ಯಾಸಕ್ಕೆ ತುಂಬಾ ಉಪಯೋಗವಾದೀತು. ಖಂಡಿತವಾಗಿಯೂ ಫಲ ದೊರೆತೀತು. ಆದರೂ ಚಿತ್ತದ ಏಕಾಗ್ರತೆಯ ಸರ್ವೋತ್ತಮ ಸಾಧ್ಯವಲ್ಲ ಇದು. ಗಣಿತದ ಅಭ್ಯಾಸದಿಂದ ಏಕಾಗ್ರತೆಯನ್ನು ಪೂರ್ಣವಾಗಿ ಒರೆಗೆ ಹಚ್ಚಲಾಗದು. ಗಣಿತದಲ್ಲೋ, ಇಲ್ಲವೆ ಇನ್ನೊಂದು ಜ್ಞಾನಕ್ಷೇತ್ರದಲ್ಲೋ ಚಿತ್ತದ ಏಕಾಗ್ರತೆಯಿಂದ ಯಶಸ್ಸು ದೊರೆತೀತು. ಆದರೂ ಅದೇ ನಿಜವಾದ ಪರೀಕ್ಷೆಯಲ್ಲ. ಎಂತಲೇ ಏಳನೆ ಅಧ್ಯಾಯದಲ್ಲಿ ಈ ಏಕಾಗ್ರತೆ ದೇವರ ಚರಣಗಳಲ್ಲಿ ಇರಬೇಕೆಂದು ಹೇಳಲಾಯಿತು. ಯಾವಾಗಲೂ ಪರಮಾತ್ಮನ ಚರಣಗಳಲ್ಲಿ ಏಕಾಗ್ರತೆಯಿರಲು, ಕಿವಿ, ಕಣ್ಣು, ವಾಣಿ ಎಲ್ಲವೂ ಅವನಲ್ಲಿಯೆ ತನ್ಮಯವಾಗಿರಲು ಸತತವಾಗಿ ಆಮರಣಪರ್ಯಂತವೂ ಪ್ರಯತ್ನ ಪಡಬೇಕೆಂದು ಎಂಟನೆಯ ಅಧ್ಯಾಯದಲ್ಲಿ ಹೇಳಲಾಯಿತು.

ಇಂದ್ರಿಯಗಳ್ಗಾಯಿತಭ್ಯಾಸ ।
ಇನ್ನಿಲ್ಲ ಬೇರಾವ ಧ್ಯಾಸ ॥ *

ನಮ್ಮ ಇಂದ್ರಿಯಗಳಿಗೆ ಈ ಅಭ್ಯಾಸವಾಗಬೇಕು. ಎಲ್ಲಾ ಇಂದ್ರಿಯಗಳಿಗೂ ಭಗವಂತನ ಗೀಳು ಹಿಡಿಯಬೇಕು. ಹತ್ತಿರ ಯಾರೇ ಅಳುತ್ತಿರಲಿ, ಭಜನೆ ಮಾಡುತ್ತಿರಲಿ, ವಾಸನೆಯ ಬಲೆ ಹೆಣೆದಿರಲಿ, ವಿರಕ್ತ ಸಜ್ಜನರ-ಸಾಧುಗಳ ಸಮಾಗಮವೇ ಇರಲಿ, ಬೆಳಕಿರಲಿ, ಕತ್ತಲೆಯಿರಲಿ, ಏನಿದ್ದರೂ ಹೇಗಿದ್ದರೂ, ಮರಣಕಾಲದಲ್ಲಿ ಪರಮೇಶ್ವರ ಚಿತ್ತದೆದುರಿಗೆ ನಿಂತುಕೊಳ್ಳುವ ಹಾಗೆ, ಬದುಕಿನುದ್ದಕ್ಕೂ ಇಂದ್ರಿಯಗಳನ್ನು ನಡೆಸಿಕೊಂಡುಹೋಗುವ ಸಾತತ್ಯದ ಶಿಕ್ಷಣ ಎಂಟನೆ ಅಧ್ಯಾಯದಲ್ಲಿ ದೊರೆಯಿತು. ಆರನೆ ಅಧ್ಯಾಯದಲ್ಲಿ ಏಕಾಗ್ರತೆ, ಏಳನೆಯದರಲ್ಲಿ ಈಶ್ವರಾಭಿಮುಖ ಏಕಾಗ್ರತೆ ಎಂದರೆ 'ಪ್ರಪತ್ತಿ', ಎಂಟನೆಯದರಲ್ಲಿ ಸಾತತ್ಯಯೋಗ, ಒಂಬತ್ತನೆಯದರಲ್ಲಿ ಸಮರ್ಪಣತೆಯ ಪರಿಚಯ. ಹತ್ತನೆ ಅಧ್ಯಾಯದಲ್ಲಿ ಕ್ರಮಿಕತೆ

* ಪಡಿಲೇ ವಳಣ ಇಂದ್ರಿಯಾ ಸಕಳಾಂ । ಭಾವ ತೋ ನಿರಾಳಾ ನಾಹಿಂದುಜಾ ॥

ಬಂತು. ಮೆಟ್ಟಿಲು ಮೆಟ್ಟಿಲಾಗಿ ಈಶ್ವರನ ರೂಪನ್ನು ಹೇಗೆ ಕಾಣಬೇಕ್ಕೋ, ಇರುವೆಯಿಂದ ಬ್ರಹ್ಮದೇವನ ತನಕ ತುಂಬಿಕೊಂಡಿರುವ ಪರಮಾತ್ಮನನ್ನು ಹೇಗೆ ಮೆಲ್ಲಮೆಲ್ಲನೆ ನೋಡಬೇಕೋ ವಿವರಿಸಲಾಯಿತು. ಹನ್ನೊಂದನೆ ಅಧ್ಯಾಯದಲ್ಲಿ ಸಮಗ್ರತೆಯ ವಿಚಾರ. ವಿಶ್ವರೂಪ ದರ್ಶನವನ್ನೇ ನಾನು ಸಮಗ್ರತಾಯೋಗ ಎನ್ನುತ್ತೇನೆ. ಧೂಳಿನ ಕಣವೊಂದರಲ್ಲಿ ಸಹ ಪೂರ್ಣ ವಿಶ್ವ ತುಂಬಿದೆಯೆಂಬುದನ್ನನುಭವಿಸುವುದೇ ವಿಶ್ವರೂಪ ದರ್ಶನ. ಇದೇ ವಿರಾಟ್ ದರ್ಶನ. ಈ ರೀತಿಯಾಗಿ ಆರನೆ ಅಧ್ಯಾಯದಿಂದ ಹನ್ನೊಂದನೆ ಅಧ್ಯಾಯದ ತನಕ ಭಕ್ತಿರಸದ ನಾನಾ ರೀತಿಯ ವಿವೇಚನೆ ನಡೆಯಿತು.

## ೬೦. ಸಗುಣ ಉಪಾಸಕ–ನಿರ್ಗುಣ ಉಪಾಸಕ : ತಾಯಿಯ ಇಬ್ಬರು ಮಕ್ಕಳು

ಹನ್ನೆರಡನೆ ಅಧ್ಯಾಯದಲ್ಲಿ ಭಕ್ತಿತತ್ವ ಕೊನೆಯಾಗಬೇಕು. ಅರ್ಜುನ ಸಮಾಪ್ತಿಯ ಪ್ರಶ್ನೆ ಕೇಳಿದ. ಐದನೆ ಅಧ್ಯಾಯದಲ್ಲಿ ಬಾಳಿನ ಶಾಸ್ತ್ರದ ವಿಚಾರ ಮುಗಿದಾಗ ಕೇಳಿದಂಥ ಪ್ರಶ್ನೆಯನ್ನೇ ಆತ ಇಲ್ಲಿ ಕೇಳಿದ. 'ಸಗುಣವನ್ನು ಭಜಿಸುವವರು ಕೆಲವರು. ನಿರ್ಗುಣವನ್ನು ಭಜಿಸುವವರು ಕೆಲವರು. ಇವರಲ್ಲಿ ಯಾರು ನಿನಗೆ ಪ್ರಿಯರು, ದೇವಾ ?' ಇದು ಆತನ ಪ್ರಶ್ನೆ.

ಭಗವಂತ ಏನು ಉತ್ತರ ಕೊಟ್ಟ ? ಒಬ್ಬ ತಾಯಿ. ಆಕೆಯ ಇಬ್ಬರು ಮಕ್ಕಳನ್ನು ಕುರಿತು ಪ್ರಶ್ನೆ ಕೇಳಿದ ಹಾಗೆ ಇದು. ಒಬ್ಬ ಮಗ ಇನ್ನೂ ಚಿಕ್ಕವನು, ಆಕೆಯ ಬಗ್ಗೆ ತುಂಬಾ ಪ್ರೀತಿಯುಳ್ಳವನು. ಆಕೆಯನ್ನು ನೋಡುತ್ತಲೂ ವಿಪರೀತ ಆನಂದಿತನಾಗುವವನು. ಆಕೆ ಕೊಂಚ ಕಣ್ಣು ಮರೆಯಾಗುತ್ತಲೂ ಬಾಯಿ ಬಾಯಿ ಬಿಡುವವನು. ತಾಯಿಯನ್ನು ಬಿಟ್ಟು ದೂರ ಹೋಗಲಾರ. ಆಕೆಯನ್ನು ಬಿಟ್ಟಿರಲಾರ. ಆಕೆಯ ವಿಯೋಗವನ್ನು ಸಹಿಸಲಾರ. ತಾಯಿಯಿಲ್ಲದ ಸಂಸಾರ ಅವನ ಪಾಲಿಗೆ ಶೂನ್ಯ. ಅಂಥ ಚಿಕ್ಕ ಹಸುಳೆ ಆತ. ಇನ್ನೊಬ್ಬ ಮಗ ದೊಡ್ಡವನಾಗಿದಾನೆ. ತಾಯಿಯ ಬಗ್ಗೆ ಅವನಿಗೂ ತುಂಬಾ ಪ್ರೀತಿ. ಆದರೂ ತಿಳಿವಳಿಕೆ ಬಂದಿದೆ. ತಾಯಿಯಿಂದ ಆತ ದೂರದಲ್ಲಿರಬಲ್ಲ. ಐದಾರು ತಿಂಗಳು ಕಾಲ ಆಕೆ

ಕಾಣದಿದ್ದರೂ ತಡೆದುಕೊಳ್ಳಬಲ್ಲ. ಆತ ತಾಯಿಯ ಸೇವೆ ಮಾಡುವವನು. ಎಲ್ಲ ಭಾರವನ್ನು ಹೊತ್ತು ಕೆಲಸ ಮಾಡುತ್ತಿದ್ದಾನೆ. ಪ್ರೌಢ. ಕೆಲಸದಲ್ಲಿ ತೊಡಗಿರುವುದರಿಂದ ತಾಯಿಯ ವಿಯೋಗವನ್ನು ಸಹಿಸಿಕೊಳ್ಳಬಲ್ಲ. ಜನಗಳಲ್ಲಿ ಆತ ಮಾನ್ಯ. ಎಲ್ಲೆಲ್ಲೂ ಅವನ ಪ್ರಸಿದ್ಧಿಯನ್ನು ಕೇಳಿ ತಾಯಿಗೆ ಸಂತೋಷವಾಗುತ್ತದೆ. ಇಂಥ ಇನ್ನೊಬ್ಬ ಮಗನೀತ. ಈ ಇಬ್ಬರು ಮಕ್ಕಳ ತಾಯಿಯನ್ನು ನೀವು ಕೇಳಿ: ' ತಾಯಿ, ಈ ಇಬ್ಬರಲ್ಲಿ ಒಬ್ಬನನ್ನು ಮಾತ್ರ ನಿನಗೆ ಕೊಡುತ್ತೇವೆ. ತೆಗೆದುಕೊ ' ಎಂದು ಆಕೆಗೆ ಹೇಳಿ. ತಾಯಿ ಎಂಥ ಉತ್ತರ ಕೊಟ್ಟಾಳು? ಯಾವ ಮಗುವನ್ನು ಆರಿಸಿಕೊಂಡಾಳು? ಅವರಿಬ್ಬರನ್ನೂ ತಕ್ಕಡಿಯಲ್ಲಿಟ್ಟು ತೂಗುತ್ತ ಕುಳಿತಾಳೇ? ತಾಯಿಯ ಭೂಮಿಕೆಯನ್ನು ಲಕ್ಷ್ಯದಲ್ಲಿಟ್ಟುಕೊಳ್ಳಿ. ಸ್ವಾಭಾವಿಕವಾಗಿ ಆಕೆ ಎಂಥ ಉತ್ತರ ಕೊಟ್ಟಾಳು? "ವಿಯೋಗ ಆಗುವುದೇ ಖಂಡಿತವಾದರೆ ದೊಡ್ಡವನದಾದರೆ ಸಹಿಸಬಲ್ಲೆ" ಎಂದು ಆ ಬಡಪಾಯಿ ನುಡಿದಾಳು. ಚಿಕ್ಕ ಹಸುಳೆ ಅವಳ ಎದೆಗೂಸು. ಅದನ್ನಾಕೆ ದೂರಗೊಳಿಸಲಾರಳು. ಆದರೆ ಆಕೆಗೆ ಹೆಚ್ಚು ಪ್ರಿಯರಾರೆಂಬ ಪ್ರಶ್ನೆಗೆ ಉತ್ತರವಲ್ಲ ಅದು. ಏನನ್ನಾದರೂ ಹೇಳಲೇಬೇಕಾದುದರಿಂದ ಆಕೆ ಹಾಗೆ ಏನೋ ಹೇಳಿದಳು ಅಷ್ಟೇ. ಅವಳ ಮಾತನ್ನು ವಿಂಗಡಿಸಿ ಅರ್ಥಮಾಡುವುದು ಯೋಗ್ಯವಲ್ಲ.

ಉತ್ತರ ಕೊಡುವಾಗ ಆ ತಾಯಿಯ ಮನಸ್ಸಿನಲ್ಲಿ ತಲೆದೋರಿದ ಗೊಂದಲವೇ ಭಗವಂತನ ಮನಸ್ಸಿನಲ್ಲೂ ತಲೆದೋರಿದೆ. ಅರ್ಜುನ ಭಗವಂತನನ್ನು ಕೇಳುತ್ತಾನೆ. "ದೇವಾ, ನಿನ್ನನ್ನು ತುಂಬಾ ಪ್ರೀತಿಸುವ, ಯಾವಾಗಲೂ ನಿನ್ನ ಧ್ಯಾನಮಾಡುವ, ಭಕ್ತನಿದ್ದಾನೆ. ಅವನ ಕಣ್ಣಿಗೆ ನಿನ್ನನ್ನು ಕಾಣುವ ಹಸಿವು, ಕಿವಿಗಳಿಂದ ನಿನ್ನನ್ನು ಈಂಟುವ ದಾಹ. ಇನ್ನೊಬ್ಬ ಸ್ವಾವಲಂಬಿ, ಇಂದ್ರಿಯನಿಗ್ರಹ ಮಾಡಬಲ್ಲವ, ಸರ್ವಭೂತ ಹಿತದಲ್ಲಿ ಮಗ್ನ; ಹಗಲಿರುಳೂ ಸಮಾಜ ಸೇವೆ ಮಾಡುತ್ತಿರುವ ಅವನಿಗೆ ಪರಮಾತ್ಮನಾದ ನಿನ್ನ ನೆನಪು ಬರುವುದಿಲ್ಲ. ಅದ್ವೈತಮಯನಾದ ಭಕ್ತನೀತ. ಇವರಿಬ್ಬರಲ್ಲಿ ಯಾರು ನಿನಗೆ ಹೆಚ್ಚು ಪ್ರಿಯರು ಹೇಳು?" ಭಗವಂತನನ್ನು ಅರ್ಜುನ ಕೇಳಿದ ಪ್ರಶ್ನೆ ಇದು. ಆ ತಾಯಿ ಕೊಟ್ಟ ಧಾಟಿಯಲ್ಲೇ ಭಗವಂತ ಇದಕ್ಕೆ ಉತ್ತರ ಕೊಟ್ಟಿದ್ದಾನೆ: ' ಆ ಸಗುಣ ಭಕ್ತ

ನನಗೆ ಪ್ರಿಯ. ಇನ್ನೊಬ್ಬನೂ ನನ್ನವನೇ.' ದೇವರಿಗೆ ಗೊಂದಲಕ್ಕಿಟ್ಟು ಕೊಂಡಿದೆ. ಉತ್ತರ ಕೊಡಬೇಕಾಯಿತೆಂದು ಕೊಟ್ಟದ್ದು—ಅಷ್ಟೆ.

ವಸ್ತುಸ್ಥಿತಿಯಿರುವುದೂ ಹಾಗೆಯೇ. ಅಕ್ಷರಶಃ ಇಬ್ಬರು ಭಕ್ತರದೂ ಏಕರೂಪ. ಇಬ್ಬರೂ ಒಂದೇ ಯೋಗ್ಯತೆಯವರು. ಅವರ ತುಲನೆ ಮಾಡುವುದೆಂದರೆ ಮರ್ಯಾದೆ ಮೀರಿದ ಹಾಗೆ. ಐದನೆ ಅಧ್ಯಾಯದಲ್ಲಿ ಕರ್ಮದ ಬಗ್ಗೆ ಕೇಳಿದಂಥ ಪ್ರಶ್ನೆಯನ್ನೇ ಅರ್ಜುನ ಭಕ್ತಿಯ ಬಗೆಗೂ ಕೇಳಿದಾನೆ. ಐದನೆ ಅಧ್ಯಾಯದಲ್ಲಿ ಕರ್ಮ ವಿಕರ್ಮಗಳ ಸಹಾಯದಿಂದ ಮನುಷ್ಯ ಅಕರ್ಮಕ್ಕೆ ಬರುತ್ತಾನೆ. ಈ ಅಕರ್ಮಸ್ಥಿತಿ ಪ್ರಕಟವಾಗುವುದು ಎರಡು ರೂಪಗಳಲ್ಲಿ. ಹಗಲೂ ರಾತ್ರಿಯೂ ಕೆಲಸ ನಡೆಸಿದ್ದರೂ ಸಹ ಕೊಂಚವೂ ಕರ್ಮ ನಡೆಸದಿರುವುದೊಂದು ಬಗೆ; ಇಪ್ಪತ್ತುನಾಲ್ಕು ಗಂಟೆಗಳ ಕಾಲ ಕೊಂಚವೂ ಕರ್ಮ ನಡೆಸದೆ ಜಗತ್ತಿನ ಚರ್ಯೆಯನ್ನೆಲ್ಲ ಮಾಡುವುದು ಇನ್ನೊಂದು ಬಗೆ. ಇವುಗಳ ತುಲನೆ ಹೇಗಾಗಬೇಕು? ರೂಪಾಯಿಯ ಒಂದು ಬದಿಯನ್ನು ಇನ್ನೊಂದು ಬದಿಗೆ ಹೋಲಿಸಿ. ಒಂದೇ ನಾಣ್ಯ, ಎರಡು ಬದಿ. ಇಲ್ಲಿ ತುಲನೆ ಹೇಗಾದೀತು? ಎರಡು ಪಕ್ಕಗಳಿಗೂ ಸಮನಾದ ಯೋಗ್ಯತೆ. ಎರಡರದೂ ಒಂದೇ ರೂಪ. ಅಕರ್ಮ ಭೂಮಿಕೆಯ ವಿವೇಚನೆಯಲ್ಲಿ ಭಗವಂತ ಒಂದನ್ನು ಸನ್ಯಾಸ, ಇನ್ನೊಂದನ್ನು ಯೋಗ ಎಂದಿದಾನೆ. ಎರಡು ಶಬ್ದಗಳಿದ್ದರೂ ಅಲ್ಲಿ ಅರ್ಥ ಒಂದೇ. ಸನ್ಯಾಸ, ಯೋಗಗಳಲ್ಲಿ ಯಾವುದು ಸುಲಭ ಎಂಬಲ್ಲಿ ಪ್ರಶ್ನೆ ಬಗೆಹರಿಯಿತು. ಸಗುಣ—ನಿರ್ಗುಣ ಪ್ರಶ್ನೆಯೂ ಹಾಗೇ. ಸಗುಣಭಕ್ತ ಇಂದ್ರಿಯಗಳ ಮೂಲಕ ಪರಮಾತ್ಮನ ಸೇವೆ ಮಾಡುತ್ತಾನೆ. ನಿರ್ಗುಣ ಭಕ್ತ ಮನಸ್ಸಿನ ಮೂಲಕ ವಿಶ್ವಹಿತಚಿಂತನೆ ಮಾಡುತ್ತಾನೆ. ಮೊದಲನೆ ಯವನ ಬಾಹ್ಯಸೇವೆ ಸತತವಾಗಿ ನಾಗಿದೆ, ಅಂತರಂಗದಲ್ಲಿ ಚಿಂತನೆ ನಡೆದಿದೆ. ಎರಡನೆಯವನು ಪ್ರತ್ಯಕ್ಷವಾಗಿ ಸೇವೆ ಮಾಡುವುದಿಲ್ಲ. ಅವನ ಅಂತರಂಗದಲ್ಲಿ ಮಾತ್ರ ಮಹಾಸೇವೆ ನಡೆದೇ ಇದೆ. ಈ ಬಗೆಯ ಇಬ್ಬರು ಭಕ್ತರಲ್ಲಿ ಶ್ರೇಷ್ಠರು ಯಾರು? ಹಗಲೂ ರಾತ್ರಿ ಕೆಲಸ ಮಾಡಿಯೂ ಕೊಂಚವೂ ಕರ್ಮ ಮಾಡದಂಥ ಸಗುಣಭಕ್ತ ಆತ. ಅಂತರಂಗದಲ್ಲಿ ಎಲ್ಲರಿಗೂ ಹಿತ ಕೋರುವ ನಿರ್ಗುಣಭಕ್ತ ಈತ. ಅಂತರಂಗದಲ್ಲಿ ಇಬ್ಬರೂ

ಏಕರೂಪಿಗಳು. ಹೊರಗಡೆ ಬೇರೆ ಬೇರೆಯಾಗಿ ತೋರಬಹುದು. ಆದರೂ ಇಬ್ಬರೂ ಒಂದೇ. ಇಬ್ಬರೂ ಪರಮಾತ್ಮನಿಗೆ ಪ್ರಿಯರೇ. ಆದರೆ ಸಗುಣ ಭಕ್ತಿ ಹೆಚ್ಚು ಸುಲಭ. ಐದನೆ ಅಧ್ಯಾಯದಲ್ಲಿ ದೊರೆತ ಉತ್ತರವೇ ಇಲ್ಲೂ ದೊರೆಯುತ್ತದೆ.

## ೬೧. ಸಗುಣ ಸುಲಭ, ಸುರಕ್ಷಿತ

ಸಗುಣ – ಭಕ್ತಿ ಯೋಗದಲ್ಲಿ ಇಂದ್ರಿಯಗಳನ್ನು ಪ್ರತ್ಯಕ್ಷ ದುಡಿಸಿ ಕೊಳ್ಳಲು ಸಾಧ್ಯ. ಸಾಧನವಾಗಲೂಬಹುದು, ಇಂದ್ರಿಯಗಳು – ವಿಘ್ನ ವಾಗಲೂಬಹುದು. ಎರಡೂ ಆಗಬಹುದು. ಅವು ಕೊಲ್ಲುವವೊ ಕಾಯುವವೊ ಎಂಬುದು ನೋಡುವವನ ದೃಷ್ಟಿಯನ್ನವಲಂಬಿಸಿದೆ. ಒಬ್ಬನ ತಾಯಿ ಮರಣಶಯ್ಯೆಯ ಮೇಲೊರಗಿದಾಳೆ. ಆತ ಆಕೆಯನ್ನು ನೋಡಬೇಕಾಗಿದೆ. ಮಧ್ಯೆ ಹದಿನೈದು ಮೈಲು ಅಂತರ. ಮೋಟಾರು ಹೋಗುವಂಥ ದಾರಿಯಲ್ಲ ಅದು. ಅಡ್ಡ ತಿಡ್ಡಾ ಕಾಲು ದಾರಿ. ಈ ಸಂದರ್ಭದಲ್ಲಿ ಈ ದಾರಿ ಸಾಧನವೊ, ವಿಘ್ನವೊ? ಈ ಅಭದ್ರ ದಾರಿ ಯೇಕೆ ನಡುವೆ ಬಂತೋ, ಇದು ಇರದಿದ್ದರೆ ಕೂಡಲೆ ತಾಯಿಯನ್ನು ನೋಡಬಹುದಾಗಿತ್ತು ಎಂದು ಯಾರಾದರೂ ಹೇಳಬಹುದು. ಇಂಥವರಿಗೆ ಆ ದಾರಿ ವೈರಿ. ದಾರಿ ತುಳಿಯತ್ತ ತುಳಿಯುತ್ತ ಆತ ಹೋಗುತ್ತಾನೆ. ದಾರಿಯ ಮೇಲೆ ಸಿಟ್ಟುಬರುತ್ತದೆ. ಹೇಗಾದರೂ ತಾಯಿಯನ್ನು ಕಾಣಲು ಸರ ಸರ ಹೋಗಲೇಬೇಕು. ದಾರಿ ವೈರಿಯೆಂದು ತಿಳಿದು ಅಲ್ಲೇ ಆತ ಕುಳಿತರೆ ವೈರಿಯಂತೆ ತೋರುವ ಆ ದಾರಿ ಅವನನ್ನು ಸೋಲಿಸೀತು. ಬೇಗ ಬೇಗ ನಡೆಯುತ್ತ ಹೋದರೆ ಮಾತ್ರ ಆತ ಆ ವೈರಿಯನ್ನು ಗೆದ್ದಾನು. ಇನ್ನೊಬ್ಬ 'ಇದೇನೋ ಕಾಡು ದಾರಿ. ಆದರೂ ನಡೆದು ಹೋಗಲು ಇಷ್ಟಾದರೂ ಇದೆಯಲ್ಲ. ಈ ದಾರಿಯಿರದಿದ್ದರೆ ಈ ಕಾಡಿನಲ್ಲಿ ನಾ ಹೇಗೆ ಹೋಗುತ್ತಿದ್ದೆ' ಎಂದುಕೊಂಡು ಆ ಕಾಲುದಾರಿಯನ್ನು ಸಾಧನವನ್ನಾಗಿ ತಿಳಿದು ಬೇಗಬೇಗ ಹೆಜ್ಜೆ ಹಾಕುತ್ತಾ ಹೋಗುತ್ತಿದ್ದ. ಆ ದಾರಿಯ ಬಗ್ಗೆ ಅವನಿಗೆ ಪ್ರೀತಿ, ಮಿತ್ರತ್ವ. ದಾರಿಯನ್ನು ವೈರಿಯೆನ್ನಿ, ಗೆಳೆಯ ಎನ್ನಿ, ಅಂತರ ಹೆಚ್ಚಿಸುವಂಥದೆನ್ನಿ, ಅಂತರ ಕಡಿಮೆ ಮಾಡುವಂಥದೆನ್ನಿ;

ಹೇಗಿದ್ದರೂ ಬೇಗ ಬೇಗ ಹೆಜ್ಜೆ ಹಾಕುವ ಕೆಲಸವನ್ನಂತೂ ಮಾಡಲೇಬೇಕು. ಮನುಷ್ಯನ ಚಿತ್ತವೃತ್ತಿಯ ಮೇಲೆ, ದೃಷ್ಟಿಯ ಮೇಲೆ, ದಾರಿ ವಿಘ್ನ ರೂಪವೊ ಸಾಧನರೂಪವೊ ಎಂಬುದರ ಅವಲಂಬನ. ಇಂದ್ರಿಯಗಳದೂ ಹೀಗೇ. ಅವು ವಿಘ್ನರೂಪವೊ ಸಾಧನರೂಪವೊ ಎಂಬುದು ನಿಮ್ಮ ದೃಷ್ಟಿಯನ್ನವಲಂಬಿಸಿದೆ.

ಸಗುಣ ಉಪಾಸಕನಿಗೆ ಇಂದ್ರಿಯಗಳು ಸಾಧನರೂಪ. ಅವು ಹೂವಿದ್ದ ಹಾಗೆ. ಪರಮಾತ್ಮನಿಗೆ ಅವನ್ನರ್ಪಿಸಬೇಕಾಗಿದೆ. ಕಣ್ಣಿನಿಂದ ಹರಿ ರೂಪ ನೋಡಬೇಕು, ಕಿವಿಯಿಂದ ಹರಿಕಥೆ ಕೇಳಬೇಕು, ನಾಲಿಗೆ ಯಿಂದ ಹರಿ ನಾಮೋಚ್ಚಾರಣೆ ಮಾಡಬೇಕು. ಕಾಲಿನಿಂದ ತೀರ್ಥಯಾತ್ರೆ ಮಾಡಬೇಕು. ಕೈಯಿಂದ ಸೇವೆ ಮಾಡಬೇಕು. ಈ ಭಾವನೆಯಿಂದ ಆತ ಇಂದ್ರಿಯಗಳೆಲ್ಲವನ್ನೂ ಪರಮಾತ್ಮನಿಗರ್ಪಿಸುತ್ತಾನೆ. ತನ್ನ ಭೋಗಕ್ಕಾಗಿ ಅವು ಅಲ್ಲ. ಹೂ ದೇವರಿಗರ್ಪಿಸುವುದಕ್ಕಾಗಿ. ಹಾರಮಾಡಿ ನಮ್ಮ ಕತ್ತಿನಲ್ಲಿ ಹಾಕಿಕೊಳ್ಳುವುದಕ್ಕಲ್ಲ. ಅಂತೆಯೆ ಇಂದ್ರಿಯಗಳನ್ನು ದೇವರ ಸೇವೆಗಾಗಿ ಉಪಯೋಗಿಸಬೇಕು. ಇದು ಸಗುಣೋಪಾಸಕನ ದೃಷ್ಟಿ. ನಿರ್ಗುಣೋಪಾಸಕನಿಗಾದರೋ ಇಂದ್ರಿಯಗಳು ವಿಘ್ನರೂಪವಾಗಿ ತೋರುತ್ತವೆ. ಅವುಗಳನ್ನಾತ ಸಂಯಮದಲ್ಲಿರಿಸುತ್ತಾನೆ, ಬಂಧಿಸುತ್ತಾನೆ. ಅವುಗಳ ಆಹಾರವನ್ನು ಕಡಮೆ ಮಾಡುತ್ತಾನೆ. ಅವುಗಳ ಮೇಲೆ ಕಾವಲಿಟ್ಟಿರುತ್ತಾನೆ. ಸಗುಣೋಪಾಸಕ ಇಷ್ಟೆಲ್ಲ ಮಾಡಬೇಕಾಗಿಲ್ಲ. ತನ್ನೆಲ್ಲ ಇಂದ್ರಿಯಗಳನ್ನು ಆತ ಹರಿ ಚರಣದಲ್ಲಿ ಅರ್ಪಿಸಿಬಿಡುತ್ತಾನೆ. ಈ ಎರಡೂ ಇಂದ್ರಿಯನಿಗ್ರಹದ ಬಗೆಗಳೇ. ಇಂದ್ರಿಯದ ಮನದ ಎರಡು ಪ್ರಕಾರಗಳು ಹೇಗಾದರೂ ಸರಿಯೇ, ಅಂತೂ ಇಂದ್ರಿಯಗಳನ್ನು ಹಿಡಿತ ದಲ್ಲಿಟ್ಟುಕೊಳ್ಳಿ. ಧ್ಯೇಯವೊಂದೇ. ಅವುಗಳನ್ನು ವಿಷಯದಲ್ಲಿ ಹರಿಯ ಬಿಡುವ ಹಾಗಿಲ್ಲ. ಒಂದು ರೀತಿ ಸುಲಭವಾದರೆ, ಇನ್ನೊಂದು ಕಠಿನ.

ನಿರ್ಗುಣ ಉಪಾಸಕ ಸರ್ವಭೂತಹಿತರತ. ಸಾಮಾನ್ಯ ವಿಷಯವಲ್ಲ ಇದು. ಇಡೀ ವಿಶ್ವದ ಕಲ್ಯಾಣಮಾಡುವ ವಿಚಾರ, ಮಾತಾಡಲು ಸುಲಭವಾದರೂ ಕೃತಿಯಲ್ಲಿ ತರುವುದು ತುಂಬಾ ಕಷ್ಟ. ವಿಶ್ವಹಿತದ ಚಿಂತೆಯುಳ್ಳವನಿಗೆ ಅದರ ಯೋಚನೆಯನ್ನುಳಿದು ಇನ್ನೇನೂ ಮಾಡ

ಲಾಗುವುದಿಲ್ಲ. ಅಂತೆಯೆ ನಿರ್ಗುಣ. ಉಪಾಸನೆ ಬಹಳ ಕಠಿನ. ಬಗೆ ಬಗೆಯ ರೀತಿಯಲ್ಲಿ ಸಗುಣ ಉಪಾಸನೆಯನ್ನು ನಮ್ಮ ಶಕ್ತಿಗನುಸಾರವಾಗಿ ಮಾಡಬಹುದು. ನಾವು ಹುಟ್ಟಿದ ಹಳ್ಳಿಯ ಸೇವೆ, ನಮ್ಮ ತಂದೆ ತಾಯಿಗಳ ಸೇವೆಗಳೂ ಸಗುಣ ಪೂಜೆಯೆ. ಜಗದ ಹಿತಕ್ಕೆ ನಿಮ್ಮ ಆ ಸೇವೆ ವಿರುದ್ಧ ವಾಗಿರದಿದ್ದರೆ ಸಾಕು. ನೀವು ಎಷ್ಟೇ ಅಲ್ಪಪ್ರಮಾಣದಲ್ಲಿ ಮಾಡಿದರೂ ಸರಿ, ಅದು ಇತರರ ಹಿತಗಳಿಗೆ ಅಡ್ಡ ಬಾರದಿದ್ದಲ್ಲಿ ಭಕ್ತಿಯ ದರ್ಜೆಗೇರುವುದು ನಿಶ್ಚಿತ. ಇಲ್ಲವಾದರೆ ಆ ಸೇವೆ ಆಸಕ್ತಿ ಆದೀತು. ತಾಯಿ ತಂದೆ, ನಿಮ್ಮ ಗೆಳೆಯರು, ದುಃಖಿತರಾದ ಬಂಧುಗಳು, ಸಾಧು ಶರಣರು ದೇವರೆಂದು ತಿಳಿದು ಸೇವೆ ಮಾಡಬೇಕು. ಅವರಲ್ಲಿ ಪರಮಾತ್ಮನನ್ನು ಕಲ್ಪಿಸಿಕೊಳ್ಳಬೇಕು. ಸಂತೋಷಪಡಬೇಕು. ಸುಗಣ ಪೂಜೆ ಸುಲಭ, ನಿರ್ಗುಣ ಪೂಜೆ ಕಠಿನ. ಉಳಿದದ್ದೆಲ್ಲ ಎರಡರದೂ ಒಂದೇ ಅರ್ಥ. ಸೌಲಭ್ಯದ ದೃಷ್ಟಿಯಿಂದ ಸಗುಣ ಶ್ರೇಯಸ್ಕರವಾದುದು, ಅಷ್ಟೆ.

ಸುಲಭತೆಯ ಅಂಶವಾಯಿತು. ಹಾಗೇ ಇನ್ನೊಂದು ಅಂಶವುಂಟು. ನಿರ್ಗುಣದಲ್ಲಿ ಭಯವುಂಟು. ಅದು ಜ್ಞಾನಮಯ. ಸಗುಣ ಪ್ರೇಮ ಮಯ, ಭಾವನಾಮಯ. ಸಗುಣದಲ್ಲಿ ಸಾರಳ್ಯವುಂಟು. ಇಲ್ಲಿ ಭಕ್ತ ಹೆಚ್ಚು ಸುರಕ್ಷಿತನಾಗಿರುತ್ತಾನೆ. ನಿರ್ಗುಣದಲ್ಲಿ ಕೊಂಚ ಗಂಡಾಂತರವಿದೆ. ಜ್ಞಾನದ ಮೇಲೆ ನಾನು ಹೆಚ್ಚಾಗಿ ಶ್ರದ್ಧೆಯಿಟ್ಟಿದ್ದ ಕಾಲವೊಂದಿತ್ತು. ಆದರೆ ಜ್ಞಾನವೊಂದರಿಂದಲೇ ನನ್ನ ಕಾರ್ಯವಾಗಲಾರದೆಂಬ ಅನುಭವ ನನಗೆ ಬಂದಿದೆ. ಮನಸ್ಸಿನ ಸ್ಥೂಲ ಮಲ ಜ್ಞಾನದಿಂದ ಸುಟ್ಟು ಬೂದಿ ಯಾಗುತ್ತದೆ. ಸೂಕ್ಷ್ಮಮಲವನ್ನು ತೊಳೆದು ಬಿಸುಡುವ ಸಾಮರ್ಥ್ಯ ಜ್ಞಾನಕ್ಕಿಲ್ಲ. ಸ್ವಾವಲಂಬನ, ವಿಚಾರ, ವಿವೇಕ, ಅಭ್ಯಾಸ, ವೈರಾಗ್ಯ ಈ ಎಲ್ಲ ಸಾಧನೆಗಳನ್ನು ಕೈಗೊಂಡರೂ ಸಹ ಮನಸ್ಸಿನ ಸೂಕ್ಷ್ಮಮಲವನ್ನು ತೊಳೆದುಹಾಕಲಾಗುವುದಿಲ್ಲ. ಭಕ್ತಿಯ ನೀರಿಲ್ಲದೆ ಈ ಮಲವನ್ನು ತೊಳೆಯುವಂತಿಲ್ಲ. ಭಕ್ತಿಯ ನೀರಿನಲ್ಲಿ ಅಂಥ ಶಕ್ತಿಯಿದೆ. ಇದನ್ನು ನೀವು ಪರಾವಲಂಬನವೆಂದೀರಿ. ಆದರೆ 'ಪರ' ಎಂದರೆ 'ಬೇರೆಯವರು' ಎಂದರ್ಥವಲ್ಲ: ಆ ಶ್ರೇಷ್ಠ ಪರಮಾತ್ಮ, ಆತನ ಅವಲಂಬನ ಎಂದು ಅರ್ಥ. ಪರಮಾತ್ಮನ ಆಧಾರ ಪಡೆಯದೆ ಚಿತ್ತದ ಮಲ ಮಾಯವಾಗದು.

'ಜ್ಞಾನ ಎಂಬ ಶಬ್ದದ ಅರ್ಥವನ್ನಿಲ್ಲಿ ಸಂಕುಚಿತಗೊಳಿಸಿದೆ. ಮನಸ್ಸಿನ ಕೊಳೆಯನ್ನು ಜ್ಞಾನದಿಂದ ತೊಳೆಯಲಾಗದು ಎಂದಾಗ ಜ್ಞಾನ ಕಡಮೆ ದರ್ಜೆಯದಾಯಿತು' ಎಂದು ಕೆಲವರು ಹೇಳಬಹುದು. ಈ ಆಕ್ಷೇಪಣೆಯನ್ನು ನಾ ಒಪ್ಪುತ್ತೇನೆ. ಈ ಮಣ್ಣಿನ ಪುತ್ಥಳಿಗೆ ಶುದ್ಧವಾದ ಜ್ಞಾನ ಲಭಿಸಲು ಸಾಧ್ಯವಿಲ್ಲವೆಂದು ನನ್ನ ಅಭಿಮತ. ಈ ದೇಹದಲ್ಲಿ ಹುಟ್ಟಿದ ಜ್ಞಾನ ಎಷ್ಟೇ ಶುದ್ಧವಾಗಿದ್ದರೂ ಸಹ ಕೊಂಚ ವಿಕೃತವಾಗಿರುವುದು ಅನಿವಾರ್ಯ. ಇಲ್ಲಿ ಹುಟ್ಟುವ ಜ್ಞಾನದ ಶಕ್ತಿ ಮರ್ಯಾದಿತ. ಶುದ್ಧ ಜ್ಞಾನ ಹುಟ್ಟಿದಲ್ಲಿ ಅದರಿಂದ ಎಲ್ಲ ಕೊಳೆಯೂ ಸುಟ್ಟು ಬೂದಿಯಾಗುವುದೆಂಬ ವಿಚಾರದಲ್ಲಿ ನನಗೆ ಸಂದೇಹವಿಲ್ಲ. ಚಿತ್ತದ ಸಮೇತ ಎಲ್ಲ ಕೊಳೆಯನ್ನೂ ಸುಟ್ಟುಹಾಕಬಲ್ಲ ಸಾಮರ್ಥ್ಯ ಜ್ಞಾನದಲ್ಲಿದೆ. ಆದರೆ ಈ ವಿಕಾರಮಯ ದೇಹದಲ್ಲಿ ಜ್ಞಾನದ ಬಲ ಅಲ್ಪ. ಅಂತೆಯೇ ಸೂಕ್ಷ್ಮ ಕೊಳೆ ತೊಳೆದುಹೋಗುವುದಿಲ್ಲ. ಭಕ್ತಿಯನ್ನಾಶ್ರಯಿಸದೆ ಸೂಕ್ಷ್ಮ ಕೊಳೆಯನ್ನು ಒರೆಸಿ ತೆಗೆಯಲು ಸಾಧ್ಯವಾಗದು. ಎಂತಲೇ ಭಕ್ತಿಯ ನಡುವೆ ಮನುಷ್ಯ ಹೆಚ್ಚು ಕ್ಷೇಮದಿಂದಿರುತ್ತಾನೆ. 'ಹೆಚ್ಚು' ಎಂಬ ಶಬ್ದ ನಾನು ಸೇರಿಸಿದುದು ಎಂದಿಟ್ಟುಕೊಳ್ಳಿ. ಸಗುಣಭಕ್ತಿ ಸುಲಭ. ಇಲ್ಲಿ ಈಶ್ವರನೇ ಆಧಾರ. ನಿರ್ಗುಣದಲ್ಲಿ ಸ್ವಾವಲಂಬನ. ಇಲ್ಲಿನ 'ಸ್ವ' ದ ಅರ್ಥವೇನು ? ಸ್ವಾವಲಂಬನ ಎಂದರೆ ಸ್ವಂತದ ಅಂತಃಕರಣದಲ್ಲಿನ ಪರಮಾತ್ಮನ ಆಧಾರ. ಇಲ್ಲೂ ಅದೇ ಅರ್ಥ. ಕೇವಲ ಬುದ್ಧಿಯ ಆಧಾರದಿಂದಲೇ ಶುದ್ಧರಾದವರಾರೂ ಇಲ್ಲ. ಸ್ವಾವಲಂಬನದಿಂದ ಎಂದರೆ ಅಂತಃಕರಣದಲ್ಲಿನ ಆತ್ಮಜ್ಞಾನದಿಂದ ಶುದ್ಧ ಜ್ಞಾನ ದೊರೆತೀತು. ಸಾರಾಂಶ, ನಿರ್ಗುಣ ಭಕ್ತಿಯ ಸ್ವಾವಲಂಬನದಲ್ಲೂ ಆತ್ಮದ್ದೇ ಆಧಾರ.

## ೬೨. ನಿರ್ಗುಣದ ಅಭಾವದಿಂದ ಸಗುಣ – ಸದೋಷ

ಸಗುಣ ಉಪಾಸನೆಯ ಪಕ್ಷಕ್ಕೆ ನಾನು ಸುಲಭತೆ ಸುರಕ್ಷಿತತೆಗಳ ತೂಕ ಹಾಕಿದೆ. ಹಾಗೇ ನಿರ್ಗುಣದ ಪಕ್ಷಕ್ಕೂ ಹಾಕಬಹುದು. ನಿರ್ಗುಣದಲ್ಲಿ ಮರ್ಯಾದೆಯುಂಟು. ಬೇರೆಬೇರೆ ಕೆಲಸಗಳಿಗಾಗಿ ಸೇವೆಗಾಗಿ ನಾವು ಸಂಸ್ಥೆಯನ್ನು ಸ್ಥಾಪಿಸುತ್ತೇವೆ. ಅದು ಪ್ರಾರಂಭ

ವಾಗುವುದು ಮೊದಲು ವ್ಯಕ್ತಿಯ ಮೂಲಕ. ಆ ವ್ಯಕ್ತಿಯೇ ಅದಕ್ಕೆ ಮುಖ್ಯ ಆಧಾರ. ಸಂಸ್ಥೆ ಮೊದಲಿಗೆ ವ್ಯಕ್ತಿನಿಷ್ಠವಾಗಿದ್ದರೂ ಮುಂದೆ ವಿಕಾಸವಾದಂತೆ ತತ್ವನಿಷ್ಠವಾಗಬೇಕು. ಹಾಗಾಗದಿದ್ದಲ್ಲಿ, ಸ್ಫೂರ್ತಿ ಕೊಡುವ ಆ ವ್ಯಕ್ತಿ ಇಲ್ಲದಾಗುತ್ತಲೂ ಸಂಸ್ಥೆಯಲ್ಲಿ ಅವ್ಯವಸ್ಥೆ ತಲೆದೋರೀತು. ನನ್ನ ಮೆಚ್ಚುಗೆಯ ದೃಷ್ಟಾಂತ ಕೊಡಲೆ? ಚರಖದ ಮಾಳ ಹರಿಯುತ್ತಲೂ ನೂಲು ತೆಗೆಯುವುದು ಹಾಗಿರಲಿ, ತೆಗೆದ ನೂಲನ್ನು ಸುತ್ತುವುದೂ ಸಾಧ್ಯವಾಗುವುದಿಲ್ಲ. ಅದೇ ಮೇರೆಗೆ ಆ ವ್ಯಕ್ತಿಯ ಆಧಾರ ತಪ್ಪುತ್ತಲೂ ಸಂಸ್ಥೆಗೆ ದುರ್ದಶೆ ಬರುತ್ತದೆ. ಅದು ತಬ್ಬಲಿಯಾಗುತ್ತದೆ. ವ್ಯಕ್ತಿನಿಷ್ಠೆಯಿಂದ ತತ್ವನಿಷ್ಠೆ ಹುಟ್ಟಿದರೆ ಹೀಗಾಗದು. ಸಗುಣಕ್ಕೆ ನಿರ್ಗುಣದ ಸಹಾಯ ಬೇಕು. ಎಂದಾದರೂ ವ್ಯಕ್ತಿಯಿಂದ, ಆಕಾರದಿಂದ ಹೊರಬೀಳಲು ಕಲಿಯಬೇಕು. ಹಿಮಾಲಯದಿಂದ, ಶಂಕರನ ಜಡೆಯಿಂದ ಗಂಗೆ ಹೊರಟಳು. ಆದರೆ ಆಕೆ ಅಲ್ಲಿಯೇ ನಿಲ್ಲಲಿಲ್ಲ. ಆ ಜಡೆಯನ್ನು ಬಿಟ್ಟು, ಹಿಮಾಲಯದ ಕೊಳ್ಳ ಕಣಿವೆ ಕಾಡು ಬೆಟ್ಟಗಳನ್ನು ತ್ಯಜಿಸಿ ಬಯಲು ಸೀಮೆಗೆ ಜುಳು ಜುಳು ಹರಿದು ಬಂದಳು. ಆಗ ಅವಳಿಂದ ಜನಕ್ಕೆ ಉಪಯೋಗವಾಯಿತು. ಇದೇ ರೀತಿಯಾಗಿ ವ್ಯಕ್ತಿಯ ಆಧಾರ ತಪ್ಪಿದರೂ ಸಹ ಸಂಸ್ಥೆ ತತ್ವದ ಸುದೃಢ ಆಧಾರದ ಮೇಲೆ ನಿಲ್ಲಲು ಸಿದ್ಧವಾಗಿರಬೇಕು. ಕಮಾನು ಕಟ್ಟುವಾಗ ಅದಕ್ಕೆ ಆಧಾರ ಕೊಡುತ್ತಾರೆ. ಅನಂತರ ಅದನ್ನು ತೆಗೆದುಬಿಡುತ್ತಾರೆ. ಆಧಾರವನ್ನು ತೆಗೆದ ಬಳಿಕ ಕಮಾನು ನಿಂತರೇನೇ ಅದು ನಿಜವಾದ ಆಧಾರವಾಗಿತ್ತೆಂದು ತಿಳಿಯಬೇಕು. ಸ್ಫೂರ್ತಿಯ ಸ್ಫುರಿ ಮೊದಲು ಸಗುಣದಿಂದ ಹುಟ್ಟಿದುದು ನಿಜ. ಕೊನೆಗೆ ತತ್ವನಿಷ್ಠೆಯಲ್ಲಿ, ನಿರ್ಗುಣದಲ್ಲಿ ಪರಿಪೂರ್ಣವಾಗಬೇಕು. ಭಕ್ತಿಯ ಉದರದಿಂದ ಜ್ಞಾನ ಮೈದಳೆಯಬೇಕು. ಭಕ್ತಿಯ ಬಳ್ಳಿಗೆ ಜ್ಞಾನದ ಹೂ ಬರಬೇಕು.

ಈ ವಿಷಯವನ್ನು ಬುದ್ಧದೇವ ಅರಿತಿದ್ದ. ಆತ ಮೂರು ಬಗೆಯ ನಿಷ್ಠೆ ಹೇಳಿದಾನೆ. ಮೊದಲು ವ್ಯಕ್ತಿನಿಷ್ಠೆಯಿದ್ದರೂ ಅದರಿಂದ ತತ್ವನಿಷ್ಠೆ. ಒಮ್ಮೆಲೆ ತತ್ವನಿಷ್ಠೆಯುಂಟಾಗದಿದ್ದರೂ ಸಂಘನಿಷ್ಠೆಯಾದರೂ ಹುಟ್ಟಬೇಕು. ಒಬ್ಬ ವ್ಯಕ್ತಿಯ ಬಗ್ಗೆ ಇದ್ದ ಆದರಭಾವ ಹದಿನೈದು ವ್ಯಕ್ತಿಗಳ ಬಗೆಗೂ ಉಂಟಾಗಬೇಕು. ಸಂಘದ ಬಗ್ಗೆ ಸಾಮುದಾಯಿಕ ಪ್ರೀತಿಯಿರದಿದ್ದರೆ

ಒಡಕು ಹುಟ್ಟೀತು, ಕಲಹವಾದೀತು. ವ್ಯಕ್ತಿಶರಣತೆ ತೊಲಗಿಹೋಗಿ ಸಂಘಶರಣತೆ ತಲೆದೋರಬೇಕು. ಅನಂತರ ಸಿದ್ಧಾಂತದ ನಿಷ್ಠೆ ನಿರ್ಮಾಣ ವಾಗಬೇಕು. "ಬುದ್ಧಂ ಶರಣಂ ಗಚ್ಛಾಮಿ | ಸಂಘಂ ಶರಣಂ ಗಚ್ಛಾಮಿ | ಧರ್ಮಂ ಶರಣಂ ಗಚ್ಛಾಮಿ ||" ಮೂರು ಬಗೆಯ ಶರಣಾಗತಿಗಳಿವು. ಮೊದಲು ವ್ಯಕ್ತಿಯ ಬಗ್ಗೆ ಪ್ರೀತಿ, ಅನಂತರ ಸಂಘದ ಬಗ್ಗೆ ಪ್ರೀತಿ. ಆದರೆ ಇವೆರಡೂ ನಿಷ್ಠೆಗಳೂ ಡೋಲಾಯಮಾನವೇ. ಕೊನೆಗೆ ಸಿದ್ಧಾಂತ-ನಿಷ್ಠೆ ಉತ್ಪನ್ನವಾದರೆ ಮಾತ್ರ ಸಂಸ್ಥೆ ಉಳಿದೀತು. ಸ್ಫೂರ್ತಿಯ ಝರಿ ಸಗುಣದಿಂದ ಹುಟ್ಟಿದರೂ ಸಹ ಅದು ನಿರ್ಗುಣದ ಸಮುದ್ರವನ್ನೇ ಸೇರಿ ಕೊಳ್ಳಬೇಕು. ನಿರ್ಗುಣದ ಅಭಾವದಿಂದ ಸಗುಣ ಸದೋಷವಾಗುತ್ತದೆ. ನಿರ್ಗುಣದ ಮರ್ಯಾದೆ ಸಗುಣವನ್ನು ಸಮತೋಲವಾಗಿರಿಸುತ್ತದೆ. ಅದಕ್ಕಾಗಿ ನಿರ್ಗುಣಕ್ಕೆ ಸಗುಣ ಆಭಾರಿಯಾಗಿದೆ.

ಹಿಂದೂ, ಕ್ರೈಸ್ತ, ಇಸ್ಲಾಂ ಮುಂತಾದ ಎಲ್ಲಾ ಧರ್ಮಗಳಲ್ಲೂ ಮೂರ್ತಿ ಪೂಜೆ ಯಾವುದಾದರೊಂದು ರೀತಿಯಲ್ಲಿ ಉಂಟು. ಹಿಂದೂ ಧರ್ಮದಲ್ಲಿ ಮೂರ್ತಿಪೂಜೆ ಕೆಳಗಿನ ಮೆಟ್ಟಲಿನದೆಂಬ ಭಾವನೆಯಿದ್ದರೂ ಕೂಡ ಅದು ಮಾನ್ಯವಾದುದು. ಮೂರ್ತಿಪೂಜೆಯ ಮಹತ್ತು ದೊಡ್ಡದು. ನಿರ್ಗುಣದ ಮರ್ಯಾದೆಯಿರುವತನಕವೂ ಮೂರ್ತಿಪೂಜೆ ನಿರ್ದೋಷ ವಾಗಿತ್ತು. ಈ ಮರ್ಯಾದೆ ತಪ್ಪುತ್ತಲೂ ಸಗುಣ ಸದೋಷವಾಯಿತು. ಮೂರು ಧರ್ಮಗಳೂ ಸಗುಣ, ನಿರ್ಗುಣದ ಮರ್ಯಾದೆಯ ಅಭಾವದಿಂದ ಅವನತ ಸ್ಥಿತಿಗೆ ಬಂದಿವೆ. ಯಜ್ಞ, ಯಾಗಾದಿಗಳಲ್ಲಿ ಪ್ರಾಣಿಹತ್ಯೆ ನಡೆಯ ತೊಡಗಿತು. ಇವೊತ್ತೂ ಶಕ್ತಿಗೆ ಬಲಿ ಕೊಡುವ ಪದ್ಧತಿಯುಂಟು. ಇದು ಮೂರ್ತಿಪೂಜೆಯ ಅತ್ಯಾಚಾರ. ಮರ್ಯಾದೆಯನ್ನು ಬಿಟ್ಟು ಮೂರ್ತಿ ಪೂಜೆ ಮೇರೆ ಮೀರಿ ನಡೆಯಿತು. ನಿರ್ಗುಣ ನಿಷ್ಠೆ ಉತ್ಪನ್ನವಾದರೆ ಈ ಉಪಟಳವಿರದು.

### ೬೩. ಎರಡೂ ಪರಸ್ಪರ ಪೂರಕ : ರಾಮಾಯಣದ ದೃಷ್ಟಾಂತ

ಸಗುಣ ಸುಲಭ, ಸುರಕ್ಷಿತ. ಆದರೂ ಅದಕ್ಕೆ ನಿರ್ಗುಣದ ಆವಶ್ಯಕತೆಯುಂಟು. ಸಗುಣ ಬೆಳೆದು ಬಳ್ಳಿಯಾಗಿ ಅದಕ್ಕೆ ನಿರ್ಗುಣದ

ತತ್ವನಿಷ್ಠೆಯ ಹೂ ಬಿಡಬೇಕು. ನಿರ್ಗುಣ ಸಗುಣಗಳೆರಡೂ ಪರಸ್ಪರ ಪೂರಕಗಳು, ಪರಸ್ಪರ ವಿರುದ್ಧವಲ್ಲ. ಸಗುಣದಿಂದ ನಿರ್ಗುಣಕ್ಕೆ ಹೆಜ್ಜೆ ಹಾಕಬೇಕು. ಮನಸ್ಸಿನ ಸೂಕ್ಷ್ಮಕೊಳೆಯನ್ನು ತೆಗೆದುಹಾಕುವುದಕ್ಕಾಗಿ ನಿರ್ಗುಣಕ್ಕೂ ಸಗುಣದ ಆರ್ದ್ರತೆ ಬೇಕು. ಒಂದರಿಂದ ಇನ್ನೊಂದಕ್ಕೆ ಶೋಭೆಯುಂಟು. ರಾಮಾಯಣದಲ್ಲಿ ಈ ಎರಡು ಬಗೆಯ ಭಕ್ತಿಯನ್ನು ಕುರಿತು ಬಲು ಸುಂದರವಾಗಿ ಹೇಳಿದೆ. ಅದರ ವರ್ಣನೆಯಿರುವುದು ಅಯೋಧ್ಯಾಕಾಂಡದಲ್ಲಿ. ರಾಮಾಯಣದಲ್ಲೆಲ್ಲ ಈ ಎರಡು ರೀತಿಯ ಭಕ್ತಿಗಳ ವಿಸ್ತರಣವೇ ಕಂಡುಬರುತ್ತದೆ. ಭರತನ ಭಕ್ತಿಯದು ಮೊದಲನೆಯ ರೀತಿ. ಲಕ್ಷ್ಮಣನ ಭಕ್ತಿಯದು ಎರಡನೆಯ ರೀತಿ. ಸಗುಣ ಭಕ್ತಿ, ನಿರ್ಗುಣ ಭಕ್ತಿಗಳ ಸ್ವರೂಪ ಈ ನಿದರ್ಶನಗಳಿಂದ ಕಂಡು ಬಂದೀತು.

ರಾಮ ಕಾಡಿಗೆ ಹೊರಟು ನಿಂತಾಗ ಲಕ್ಷ್ಮಣನನ್ನು ಜೊತೆಗೆ ಕರೆದೊಯ್ಯಲು ಸಿದ್ಧನಿರಲಿಲ್ಲ. ಆತನನ್ನು ಜೊತೆಗೆ ಕರೆದೊಯ್ಯಲು ಯಾವ ಕಾರಣವೂ ಇಲ್ಲವೆಂದು ರಾಮನಿಗನಿಸಿತು. ಆತ ಲಕ್ಷ್ಮಣನಿಗೆಂದ— "ಲಕ್ಷ್ಮಣಾ, ನಾನು ಕಾಡಿಗೆ ಹೋಗುತ್ತೇನೆ. ತಂದೆಯ ಆಜ್ಞೆಯಾಗಿದೆ. ನೀನು ಮನೆಯಲ್ಲೇ ಇರು. ನನ್ನೊಂದಿಗೆ ಬಂದು ಮೊದಲೇ ದುಃಖ ದಲ್ಲಿರುವ ತಂದೆತಾಯಿಗಳಿಗೆ ಇನ್ನೂ ವ್ಯಸನವನ್ನುಂಟುಮಾಡಬೇಡ. ತಂದೆತಾಯಿಗಳನ್ನೂ ಪ್ರಜೆಗಳನ್ನೂ ಸೇವಿಸು. ಅವರ ಹತ್ತಿರ ನೀನಿದ್ದಲ್ಲಿ ನನಗಾವ ಚಿಂತೆಯೂ ಬಾರದು. ನನ್ನ ಪ್ರತಿನಿಧಿಯಾಗಿ ನೀನಿಲ್ಲಿರು. ಪ್ರಜೆಗಳ ಪಾಲನೆ ಮಾಡು. ನಾನು ಕಾಡಿನಲ್ಲಿ ಎಂದರೆ ಸಂಕಟಗಳ ಮಧ್ಯದಲ್ಲಿ ಪ್ರವೇಶಿಸುತ್ತಿಲ್ಲ. ಋಷಿಗಳ ಆಶ್ರಮಕ್ಕೆ ಹೋಗುತ್ತಿದೇನೆ." ಈ ಬಗೆಯಾಗಿ ಲಕ್ಷ್ಮಣನಿಗೆ ರಾಮ ಸಮಾಧಾನ ಹೇಳಿದ. ಆದರೆ ಲಕ್ಷ್ಮಣ ರಾಮನ ಎಲ್ಲ ಹೇಳಿಕೆಗಳನ್ನೂ ಒಂದೇ ಏಟಿಗೇ ಒಂದೇ ಶಬ್ದದಿಂದ ಅಳಿಸಿಬಿಟ್ಟ. ಒಂದು ಹೊಡೆತ, ಎರಡು ತುಂಡು ಮಾಡಿಬಿಟ್ಟ. ಆ ಚಿತ್ರ ವನ್ನು ತುಂಬಾ ಸುಂದರವಾಗಿ ರಚಿಸಿದಾರೆ ತುಲಸೀದಾಸರು. ಲಕ್ಷ್ಮಣ ಹೇಳಿದ: "ಒಳ್ಳೆ ನಿಗಮ ನೀತಿಗಳನ್ನು ನೀವು ನನಗೆ ಹೇಳಿಕೊಡುತ್ತಿದೀರಿ. ವಾಸ್ತವವಾಗಿ ಈ ನೀತಿಗಳನ್ನು ನಾನು ಪಾಲಿಸಬೇಕು. ಆದರೆ ಈ

ರಾಜನೀತಿಯ ಭಾರವನ್ನು ನಾನು ತಡೆದುಕೊಳ್ಳಲಾರೆ. ನಿಮ್ಮ ಪ್ರತಿನಿಧಿಯಾಗಲು ಅಗತ್ಯವಾದ ಶಕ್ತಿ ನನ್ನಲ್ಲಿಲ್ಲ. ನಾನಿನ್ನೂ ಮಗು. ಮೇರು-ಮಂದರದ ಭಾರವನ್ನು ಹಂಸಪಕ್ಷಿ ಹೊರಬಲ್ಲದೆ? ರಾಮಚಂದ್ರಾ, ನಿನ್ನ ಪ್ರೀತಿಯಿಂದ ಬೆಳೆದವನು ನಾನು. ನಿಮ್ಮ ಆ ರಾಜನೀತಿಯನ್ನು ಇನ್ನಾರಿಗಾದರೂ ಹೇಳಿ. ನಾನು ಇನ್ನೂ ಹುಡುಗ"* ಎಂದು ಹೇಳಿ ಲಕ್ಷ್ಮಣ ಆ ವಿಷಯವನ್ನೆಲ್ಲ ಒಮ್ಮೆಲೆ ನಿಲ್ಲಿಸಿಬಿಟ್ಟ.

ನೀರನ್ನು ಬಿಟ್ಟು ಬದುಕಲಾರದು ಮೀನು. ಲಕ್ಷ್ಮಣನದೂ ಹಾಗೇ. ರಾಮನನ್ನು ಬಿಟ್ಟು ದೂರವಿರಲು ಆತ ಸಮರ್ಥನಾಗಿಲ್ಲ. ಆತನ ರೋಮ ರೋಮದಲ್ಲಿ ಸಹಾನುಭೂತಿ ತುಂಬಿತ್ತು. ರಾಮ ನಿದ್ರಿಸಿದಾಗ ತಾನು ಜಾಗರಣೆ ಮಾಡಬೇಕು, ಅವನ ಸೇವೆ ಮಾಡಬೇಕು — ಅದರಲ್ಲೇ ಸಂತೋಷ ಲಕ್ಷ್ಮಣನಿಗೆ. ನಮ್ಮ ಕಣ್ಣಿಗೆ ಯಾರಾದರೂ ಕಲ್ಲು ಬೀಸಿದರೆ ಕೈ ಮುಂದಾಗಿ ತಾನು ಅದರ ಏಟು ತಿನ್ನುತ್ತದೆ. ಲಕ್ಷ್ಮಣ ಹೀಗೆ ರಾಮನ ಕೈಯಾಗಿದ್ದ. ರಾಮನಿಗೆ ಬೀಳುವ ಏಟನ್ನು ಮೊದಲು ಲಕ್ಷ್ಮಣನೇ ಎದುರಿಸುತ್ತಿದ್ದ. ಲಕ್ಷ್ಮಣನಿಗೆ ತುಲಸೀದಾಸರು ಒಂದು ಸುಂದರ ದೃಷ್ಟಾಂತ ಕೊಟ್ಟಿದಾರೆ. ಮೇಲೆ ಹಾರಾಡುತ್ತಿರುತ್ತದೆ ಬಾವುಟ. ಎಲ್ಲ ಹಾಡುಗಳೂ ಆ ಬಾವುಟವನ್ನು ಕುರಿತು, ಅದರ ಬಣ್ಣ, ಅದರ ಆಕಾರಗಳನ್ನು ಕುರಿತು. ಅದನ್ನು ಹಿಡಿದು ನೆಟೆದು ನಿಂತಿರುವ ಆ ಕೋಲು-ಯಾರು ನೆನೆದಾರು ಅದನ್ನು? ಹಾರುತಲಿದ್ದ ರಾಮನ ಯಶೋಧ್ವಜಕ್ಕೆ ಲಕ್ಷ್ಮಣ ದಂಡದಂತೆ ಆಧಾರವಾಗಿ ನಿಂತಿದ್ದ. ನೆಟ್ಟಗೆ ನಿಡು ನಿಂತಿದ್ದ. ದಂಡ ಮಣಿಯದು. ಅದರಂತೆ ರಾಮನ ಯಶಸ್ಸು ಮೆರೆಯಲೆಂದು ಲಕ್ಷ್ಮಣ ಎಂದೂ ಮಣಿಯಲಿಲ್ಲ. ಕೀರ್ತಿ ಯಾರದು? ರಾಮನದೇ! ಜಗತ್ತಿಗೆ ಕಾಣುವುದು ಬಾವುಟ, ದಂಡವಲ್ಲ. ಕಳಶ ಕಾಣುತ್ತದೆ, ತಳಹದಿಯಲ್ಲ. ರಾಮನ ಕೀರ್ತಿ ಮೆರೆಯುತ್ತಲೇ ಇದೆ. ಲಕ್ಷ್ಮಣನ ಸುಳಿವೇ ಇಲ್ಲ. ಹದಿನಾಲ್ಕು ವರ್ಷಗಳ ಕಾಲ ಮಣಿಯಲಿಲ್ಲ ಈ ದಂಡ.

---

* ದೀನ್ಹಿ ಮೋಹಿಸಿಖ ನೀಕಿ ಗುಂಸಾಯೀ । ಲಾಗಿ ಅಗಮ ಅಪನೀ ಕದರಾಈ ॥
ನರವರಧೀರ ಧರಮ-ಧುರ-ಧಾರೀ । ನಿಗಮನೀತಿಕೇ ತೇ ಅಧಿಕಾರೀ ॥
ಮೈ ಸಿಸ ಪ್ರಭು-ಸನೇಹ-ಪ್ರತಿಪಾಲಾ । ಮಂದರ ಮೇರು ಕಿ ಲೇಹಿ ಮರಾಲಾ ॥

ತಾನು ಸ್ವತಃ ಹಿಂದೆ ಇದ್ದುಕೊಂಡು ರಾಮನ ಕೀರ್ತಿಧ್ವಜವನ್ನು ಮೆರೆಸಿದ. ಶ್ರಮ ಕಷ್ಟದ ಕೆಲಸಗಳನ್ನು ಸಹ ಲಕ್ಷ್ಮಣನಿಂದಲೇ ಮಾಡಿಸಿಕೊಂಡ ರಾಮ. ಸೀತೆಯನ್ನು ಕಾಡಿಗಟ್ಟುವ ಕೆಲಸವೂ ಅವನ ಮೇಲೇ ಬಿತ್ತು. ಬಡಪಾಯಿ ಲಕ್ಷ್ಮಣ ಅತ್ತಿಗೆಯನ್ನು ಕಳುಹಿಸಿ ಬಂದ. ಆತನಿಗೆ ಅಸ್ತಿತ್ವವೆನ್ನುವುದೇ ಉಳಿಯಲಿಲ್ಲ. ಆತ ರಾಮನ ಕಣ್ಣಿನಂತಿದ್ದ, ಕೈಗಳಂತಿದ್ದ, ಮನಸ್ಸಿನಂತಿದ್ದ. ಸಮುದ್ರದಲ್ಲಿ ಹೊಳೆ ಮಿಲನವಾಗುವಂತೆ ಲಕ್ಷ್ಮಣನ ಸೇವೆ ರಾಮನಲ್ಲಿ ಮಿಲನವಾಗಿತ್ತು. ಆತ ರಾಮನ ನೆರಳಿನಂತಾಗಿದ್ದ. ಲಕ್ಷ್ಮಣನದು ಸಗುಣ ಭಕ್ತಿ.

ಭರತನದು ನಿರ್ಗುಣ ಭಕ್ತಿ. ತುಲಸೀದಾಸರು ಅವನನ್ನು ಚೆನ್ನಾಗಿ ಚಿತ್ರಿಸಿದಾರೆ. ರಾಮ ವನಕ್ಕೆ ಹೋದಾಗ ಭರತ ಅಯೋಧ್ಯೆಯಲ್ಲಿರಲಿಲ್ಲ. ಆತ ಅಲ್ಲಿಗೆ ಬಂದಾಗ ದಶರಥ ಕಾಲವಾಗಿದ್ದ. ನೀನೇ ರಾಜ್ಯಭಾರ ವಹಿಸು ಎಂದು ವಶಿಷ್ಠ ಗುರು ಭರತನಿಗೆ ಹೇಳಿದರು. ಭರತನಾದರೋ "ನಾನು ರಾಮನನ್ನು ಕಾಣಲೇಬೇಕು" ಎಂದು ಹಟ ಹಿಡಿದ. ರಾಮನ ಭೇಟಿಗಾಗಿ ಅವನ ಜೀವ ತಳಮಳಿಸುತ್ತಿತ್ತು. ಆದರೂ ರಾಜ್ಯದ ವ್ಯವಸ್ಥೆಗಾಗಿ ಆತ ಎಚ್ಚರಿಕೆ ವಹಿಸಿದ. ಇದು ರಾಮನ ರಾಜ್ಯ. ಅದರ ವ್ಯವಸ್ಥೆ ನೋಡಿಕೊಳ್ಳುವುದೆಂದರೆ ರಾಮನ ಕೆಲಸವನ್ನೇ ನೋಡಿಕೊಂಡ ಹಾಗೆ. ಅದು ಭರತನ ವಿಚಾರ. ಸಂಪತ್ತೆಲ್ಲವೂ ಸ್ವಾಮಿಯದು. ಅದರ ವ್ಯವಸ್ಥೆ ನೋಡಿಕೊಳ್ಳುವುದು ಮಾತ್ರ ನನ್ನ ಕರ್ತವ್ಯವೆಂದು ಆತ ತಿಳಿದುಕೊಂಡ. ಲಕ್ಷ್ಮಣನಂತೆ ರಾಜ್ಯಭಾರದಿಂದ ದೂರವಾಗುವುದು ಭರತನಿಗೆ ಸಾಧ್ಯವಿರಲಿಲ್ಲ. ಆತನ ಸ್ಥಿತಿಯಿದ್ದುದು ಹಾಗೆ. ರಾಮನ ಬಗ್ಗೆ ಭಕ್ತಿ ಎಂದರೆ ರಾಮನ ಕೆಲಸ ಮಾಡುವುದು; ಇಲ್ಲವಾದರೆ ಅಂಥ ಭಕ್ತಿಯಿಂದ ಏನು ಪ್ರಯೋಜನ? ಎಲ್ಲಾ ವ್ಯವಸ್ಥೆಮಾಡಿ ರಾಮನ ಭೇಟಿಗಾಗಿ ಭರತ ವನಕ್ಕೆ ಬಂದಿದಾನೆ. "ರಾಮ, ನಿನ್ನ ರಾಜ್ಯವಿದು. ನೀನು ........." ಎಂದು ಆತ ಹೇಳುತ್ತಿದ್ದ ಹಾಗೆ ರಾಮ "ಭರತ, ನೀನೇ ರಾಜ್ಯ ನಡಸು" ಎನ್ನುತ್ತಾನೆ. ಭರತ ಸಂಕೋಚನಿಂದ ಎದ್ದುನಿಂತು ಹೇಳುತ್ತಾನೆ: "ನಿನ್ನ ಅಪ್ಪಣೆ ಹೇಗೋ ಹಾಗೆ." ರಾಮ ಹೇಳಿದುದೇ ಆತನಿಗೆ ಪ್ರಮಾಣ. ಎಲ್ಲವನ್ನೂ ಆಗ ರಾಮನಿಗೆ ಒಪ್ಪಿಸಿದ. ಹಿಂದಿರುಗಿ ಬಂದು ರಾಜ್ಯಭಾರ

ವಹಿಸಿಕೊಂಡ. ಆದರೂ ಸ್ವಾರಸ್ಯ ನೋಡಿ. ಆತ ಇದ್ದುದು ಅಯೋಧ್ಯೆ ಯಿಂದ ಎರಡು ಮೈಲು ದೂರದಲ್ಲಿ. ತಪಸ್ಸು ಮಾಡುತ್ತ, ತಪಸ್ವಿಯಾಗಿದ್ದರೂ ರಾಜ್ಯಭಾರ ನೋಡಿಕೊಂಡ. ಕಡೆಗೆ ಭರತನನ್ನು ರಾಮ ಕಂಡಾಗ ವನಕ್ಕೆ ಹೋಗಿ ಬಂದ ನಿಜವಾದ ತಪಸ್ವಿ ಯಾರೆಂಬುದನ್ನು ಕಂಡುಹಿಡಿಯುವುದು ಕಷ್ಟವಾಗಿತ್ತು. ಇಬ್ಬರ ಮುಖ ಲಕ್ಷಣಗಳ ರೀತಿ ಒಂದೇ. ವಯಸ್ಸಿನಲ್ಲಿ ಮಾತ್ರ ಸ್ವಲ್ಪ ಬದಲಾವಣೆ. ಮುಖದ ಮೇಲಿನ ತಪಸ್ಸಿನ ಕಳೆಯೂ ಒಂದೇ ತರದ್ದು. ಇವರಿಬ್ಬರಲ್ಲಿ ರಾಮ ಯಾರು, ಭರತ ಯಾರು? ಹೇಳುವುದು ಕಷ್ಟವೇ. ಇಂಥದೊಂದು ಚಿತ್ರವನ್ನು ಯಾರಾದರೂ ಬರೆದರೆ ಅದೊಂದು ಅತಿ ಪಾವನ ಚಿತ್ರವಾದೀತು. ಹೀಗೆ ಭರತ ದೇಹದಿಂದ ರಾಮನಿಗೆ ದೂರವಾಗಿದ್ದರೂ ಮನಸ್ಸಿನಿಂದ ಕ್ಷಣಕಾಲವೂ ದೂರವಾಗಿರಲಿಲ್ಲ. ಒಂದು ಕಡೆ ರಾಜ್ಯವನ್ನು ನಡೆಸುತ್ತಿದ್ದರೂ ಆತ ಮನಸ್ಸಿನಿಂದ ರಾಮನ ಹತ್ತಿರ ಇದ್ದ. ನಿರ್ಗುಣದಲ್ಲಿ ಸಗುಣಭಕ್ತಿ ಪೂರ್ಣವಾಗಿ ತುಂಬಿರುತ್ತದೆ. ಅಲ್ಲಿ ಹೇಗೆ ವಿಯೋಗದ ಮಾತು ಆಡುವುದು? ಅಂತೆಯೇ ಭರತನಿಗೆ ಅದು ವಿಯೋಗವೆನಿಸಲಿಲ್ಲ. ಆತ ದೇವರ ಕೆಲಸದಲ್ಲಿ ತೊಡಗಿಕೊಂಡಿದ್ದ.

'ರಾಮನ ನಾಮ, ರಾಮನ ಭಕ್ತಿ, ರಾಮನ ಉಪಾಸನೆ ಎಂಬ ಮಾತು ನಮಗೇನೂ ಅರ್ಥವಾಗದು; ನಾವು ದೇವರ ಕೆಲಸ ಮಾಡೋಣ' ಎಂದು ಇಂದಿನ ಯುವಕರು ಹೇಳುತ್ತಾರೆ. ದೇವರ ಕೆಲಸ ಮಾಡುವ ರೀತಿಯನ್ನು ಭರತ ತೋರಿಸಿಕೊಡುತ್ತಿದಾನೆ. ಕೆಲಸದಲ್ಲಿ ತೊಡಗಿಕೊಂಡು ಭರತ ವಿಯೋಗವನ್ನು ನುಂಗಿದಾನೆ. ದೇವರ ಕೆಲಸ ಮಾಡುವಾಗ ಆತನ ವಿಯೋಗದ ನೆನಪು ಸಹ ಬರದಿರುವುದು ಬೇರೆ. ದೇವರ ಪರಿಚಯವೆ ಇಲ್ಲದವನ ಮಾತು ಬೇರೆ. ದೇವರ ಕೆಲಸ ಮಾಡುತ್ತ ಸಂಯಮಪೂರ್ಣವಾದ ಬಾಳು ನಡೆಸುವುದು ತುಂಬ ದುರ್ಲಭ. ನಿರ್ಗುಣ ಕಾರ್ಯ ಮಾಡುತ್ತಿರುವುದು ಭರತನ ವೃತ್ತಿಯಾಗಿದ್ದರೂ ಅದಕ್ಕೆ ಸಗುಣದ ಆಧಾರ ತಪ್ಪಲಿಲ್ಲ. 'ರಾಮಾ, ನಿಮ್ಮ ಮಾತು ನನಗೆ ಶಿರೋಧಾರ್ಯ. ನೀವು ಹೇಳುವುದರಲ್ಲಿ ನನಗಾವ ಸಂಶಯವೂ ಇಲ್ಲ' ಎಂದು ಹೇಳಿ ಭರತ ಹೊರಟು ನಿಂತರೂ ಸಹ ಮತ್ತೆ ಹಿಂದಿರುಗಿ 'ರಾಮಚಂದ್ರಾ, ನನಗೆ

ಸಮಾಧಾನವಾಗುವುದಿಲ್ಲ. ಏನೋ ಕಳವಳ' ಎಂದ. ರಾಮ ಅದನ್ನು ಗುರುತಿಸಿದ. 'ಹಾಗಾದರೆ ಈ ಪಾದುಕೆ ತೆಗೆದುಕೊ' ಎಂದ. ಕಡೆಯಲ್ಲೂ ಸಗುಣದ ಬಗ್ಗೆ ಆದರ ಉಳಿಯಿತು. ಕೊನೆಗೆ ನಿರ್ಗುಣ ವನ್ನು ಸಗುಣ ಕರಗಿಸಿತು. ಲಕ್ಷ್ಮಣನಿಗೆ ಆ ಪಾದುಕೆಗಳಿಂದ ತೃಪ್ತಿ ಯಾಗುವಂತಿರಲಿಲ್ಲ. ಆತನ ದೃಷ್ಟಿಯಲ್ಲಿ ಅದು ಹಾಲಿನ ಆಸೆಯನ್ನು ಮಜ್ಜಿಗೆಯಿಂದ ಪೂರೈಸಿಕೊಂಡ ಹಾಗಾಗುತ್ತಿತ್ತು. ಭರತನ ಭೂಮಿಕೆ ಬೇರೆ ರೀತಿ. ಹೊರಗಡೆ ದೂರವಾಗಿದ್ದುಕೊಂಡು ಆತ ಕರ್ಮ ಮಾಡು ತ್ತಿದ್ದರೂ ಮನಸ್ಸಿನಿಂದ ರಾಮಮಯವಾಗಿದ್ದ. ಕರ್ತವ್ಯ ಮಾಡುವುದರಲ್ಲಿ ರಾಮಭಕ್ತಿಯನ್ನು ಕಾಣುತ್ತಿದ್ದರೂ ಆತನಿಗೂ ಪಾದುಕೆ ಅಗತ್ಯ ಎನಿಸಿತು. ಪಾದುಕೆಗಳಿಲ್ಲದೆ ರಾಜ್ಯಮಾಡಲಾರದಾದ. ಆ ಪಾದುಕೆಗಳ ಆಜ್ಞೆಯೆಂದು ಆತ ಕರ್ತವ್ಯ ಮಾಡತೊಡಗಿದ. ಲಕ್ಷ್ಮಣ ರಾಮನ ಭಕ್ತ. ಹಾಗೇ ಭರತನೂ ಭಕ್ತ. ತೋರಿಕೆಗೆ ಇಬ್ಬರ ಭೂಮಿಕೆಗಳೂ ಬೇರೆ ಬೇರೆ. ಭರತ ಕರ್ತವ್ಯ ನಿಷ್ಠ, ತತ್ವನಿಷ್ಠ. ಆದರೂ ಅವನ ತತ್ವನಿಷ್ಠೆ ಪಾದುಕೆಗಳ ಆಶ್ರಯ ಪಡೆಯಬೇಕಾಯಿತು.

## ೬೪. ಎರಡೂ ಪರಸ್ಪರ ಪೂರಕ: ಕೃಷ್ಣಚರಿತೆಯ ದೃಷ್ಟಾಂತ

ಹರಿಭಕ್ತಿಯ ಆರ್ದ್ರತೆ ಅಗತ್ಯ. ಅಂತೆಯೇ ಅರ್ಜುನನಿಗೂ ಕೂಡ ಭಗವಂತ 'ಮಯ್ಯಾಸಕ್ತಮನಾಃ ಪಾರ್ಥ' – ಅರ್ಜುನಾ ನನ್ನಲ್ಲಿ ಆಸಕ್ತ ನಾಗಿರು, ನನ್ನಲ್ಲಿ ಶ್ರದ್ಧೆಯನ್ನಿಡು. ಅನಂತರ ಕರ್ಮ ಮಾಡು – ಎಂದು ಮತ್ತೆ ಮತ್ತೆ ಹೇಳಿದಾನೆ. ಯಾವ ಭಗವದ್ಗೀತೆಗೆ ಆಸಕ್ತಿ ಎಂಬ ಶಬ್ದವೇ ರುಚಿಸದೋ, ಹೊಳೆಯದೋ; ಯಾವ ಗೀತೆಯಲ್ಲಿ ಅನಾಸಕ್ತನಾಗಿ ಕರ್ಮ ಮಾಡು, ರಾಗದ್ವೇಷ ಬಿಟ್ಟು ಕರ್ಮಮಾಡು, ನಿರಪೇಕ್ಷ ಕರ್ಮ ಮಾಡು ಎಂದು ಮತ್ತೆ ಮತ್ತೆ ಹೇಳಿದೆಯೋ; ಎಲ್ಲಿ ಅನಾಸಕ್ತಿ – ನಿಃಸಂಗಗಳ ಪಲ್ಲವಿ ಮತ್ತೆ ಮತ್ತೆ ಕೇಳಿಬರುತ್ತದೆಯೋ ಅದೇ ಭಗವದ್ಗೀತೆ ಹೇಳುತ್ತದೆ: 'ಅರ್ಜುನಾ, ನನ್ನ ಆಸಕ್ತಿಯನ್ನಿಟ್ಟುಕೊ.' ಆದರೆ ಭಗವಂತನ ಆಸಕ್ತಿ ಯೆಂದರೆ ಅತಿ ಉಚ್ಚ ವಸ್ತುವೆಂಬುದನ್ನು ನಾವು ಗಮನದಲ್ಲಿಟ್ಟುಕೊಳ್ಳ ಬೇಕು. ಅದೇನು ಪಾರ್ಥಿವ ವಸ್ತುಗಳ ಆಸಕ್ತಿಯೇ? ನಿರ್ಗುಣ ಸಗುಣಗಳು

ಪರಸ್ಪರ ಬೆರೆತುಕೊಂಡಿವೆ. ನಿರ್ಗುಣದ ಆಧಾರವನ್ನು ಸಗುಣ ಪೂರ್ಣವಾಗಿ ಕಡಿದುಹಾಕಲಾರದು. ಸಗುಣದ ಆರ್ದ್ರತೆ ನಿರ್ಗುಣಕ್ಕೆ ಬೇಕೇ ಬೇಕು. ಸದಾ ಕರ್ತವ್ಯಕರ್ಮನಿರತನು ಕರ್ಮರೂಪದ ಪೂಜೆಯಲ್ಲೇ ತೊಡಗಿದ ಹಾಗೆ. ಆ ಪೂಜೆಯ ಜೊತೆಯಲ್ಲೇ ಆರ್ದ್ರತೆಯೂ ಬೇಕು. 'ಮಾಮನುಸ್ಮರ ಯುಧ್ಯ ಚ '– ನನ್ನ ನೆನಪಿಟ್ಟುಕೊಂಡು ಯುದ್ಧಮಾಡು. ಕರ್ಮವೂ ಸ್ವಯಂ ಪೂಜೆಯೆ. ಆದರೂ ಅಂತರಂಗದ ಭಾವ ಜೀವಂತವಾಗಿರಬೇಕು. ಕೆಲವು ಹೂ ತಲೆಯ ಮೇಲಿಟ್ಟರೆ ಪೂಜೆಯಾಗಲಿಲ್ಲ. ಅಲ್ಲಿ ಭಾವನೆ ಬೇಕು. ತಲೆಯ ಮೇಲೆ ಹೂ ಇಡುವುದು ಪೂಜೆಯದೊಂದು ರೀತಿ, ಸತ್ಕರ್ಮದಿಂದ ಪೂಜೆ ಸಲ್ಲಿಸುವುದು ಇನ್ನೊಂದು ರೀತಿ. ಇವೆರಡರಲ್ಲೂ ಭಾವನೆಯ ಆರ್ದ್ರತೆ ಬೇಕೇ ಬೇಕು. ಹೂ ಏರಿಸಿದಾಗ ಭಾವವಿಲ್ಲದಿದ್ದರೆ ಕಲ್ಲಿನ ಮೇಲೆ ಆ ಹೂ ಏರಿಸಿದಂತಾಯಿತು. ಭಾವನೆ ಮುಖ್ಯವಸ್ತು. ಸಗುಣ ಮತ್ತು ನಿರ್ಗುಣ, ಕರ್ಮ ಮತ್ತು ಪ್ರೀತಿ, ಜ್ಞಾನ ಮತ್ತು ಭಕ್ತಿ, ಇವೆಲ್ಲವೂ ಏಕರೂಪ. ಇವೆಲ್ಲವುಗಳ ಕೊನೆಯ ಅನುಭವವೊಂದೇ.

ಉದ್ಧವ – ಅರ್ಜುನರ ಕತೆಯನ್ನೆ ನೋಡಿ. ರಾಮಾಯಣದಿಂದ ನಾನು ಮಹಾಭಾರತಕ್ಕೆ ಹಾರಿಬಿಟ್ಟೆ. ಹೀಗೆ ಹಾರಲು ನನಗೆ ಅಧಿಕಾರವೂ ಉಂಟು. ರಾಮ – ಕೃಷ್ಣ ಇಬ್ಬರೂ ಒಂದೇ. ಭರತ – ಲಕ್ಷ್ಮಣರಿದ್ದ ಹಾಗೆ ಉದ್ಧವ – ಅರ್ಜುನ. ಕೃಷ್ಣನಿರುವಲ್ಲೆಲ್ಲ ಉದ್ಧವನಿರಲೇಬೇಕು. ಕೃಷ್ಣನ ವಿಯೋಗ ಒಂದು ಕ್ಷಣವೂ ಅವನಿಗೆ ಸಹನವಾಗದು. ಆತ ಕೃಷ್ಣನ ಹತ್ತಿರ ಸದಾ ಸೇವೆ ಸಲ್ಲಿಸುತ್ತಿರಬೇಕು. ಕೃಷ್ಣನಿಲ್ಲವಾದರೆ ಜಗವೆಲ್ಲ ಅವನ ಪಾಲಿಗೆ ಶೂನ್ಯ. ಅರ್ಜುನನೂ ಕೃಷ್ಣನ ಗೆಳೆಯ. ಆದರೆ ಆತ ಇರುವುದು ದೂರದ ದಿಲ್ಲಿಯಲ್ಲಿ. ಅರ್ಜುನ ಕೃಷ್ಣನ ಕೆಲಸ ಮಾಡುವವನು. ಕೃಷ್ಣ ದ್ವಾರಕೆಯಲ್ಲಿದ್ದರೆ ಈತ ಹಸ್ತಿನಾಪುರದಲ್ಲಿ. ದೇಹ ತ್ಯಜಿಸಬೇಕಾದ ಅಗತ್ಯವೆನಿಸಿದಾಗ ಭಗವಂತ ಉದ್ಧವನಿಗೆಂದ – 'ಉದ್ಧವಾ, ನಾ ಹೊರಟೆ.' ಅದಕ್ಕೆ ಉದ್ಧವ, 'ನನ್ನನ್ನೂ ಸಂಗಡ ಕರೆದುಕೊಂಡು ಹೋಗುವುದಿಲ್ಲವೆ? ಕೂಡಿಯೇ ಹೋಗೋಣ' ಎಂದ. 'ನನಗಿಷ್ಟವಿಲ್ಲ. ಸೂರ್ಯ ತನ್ನ ತೇಜಸ್ಸನ್ನು ಅಗ್ನಿಯಲ್ಲಿಟ್ಟು ಹೋಗುತ್ತಾನೆ. ಹಾಗೇ ನನ್ನ

ಜ್ಯೋತಿಯನ್ನು ನಿನ್ನಲ್ಲಿಟ್ಟು ಹೊರಡುತ್ತೇನೆ' ಎಂದು ಭಗವಂತ ಕಡೆಯ ವ್ಯವಸ್ಥೆಮಾಡಿ ಉದ್ಧವನಿಗೆ ಬುದ್ಧಿ ಹೇಳಿ ಕಳುಹಿಸುತ್ತಾನೆ. ಮುಂದೆ ಉದ್ಧವನಿಗೆ ಭಗವಂತ ನಿಜಧಾಮಕ್ಕೆ ತೆರಳಿದುದು ಮೈತ್ರೇಯ ಋಷಿಯಿಂದ ತಿಳಿಯುತ್ತದೆ. ಆಗ ಅವನ ಮನಸ್ಸಿನ ಮೇಲೆ ಕೊಂಚವೂ ಪರಿಣಾಮವಾಗದು.

ಗುರು ಸತ್ತ, ಶಿಷ್ಯ ಅತ್ತ ಇಬ್ಬರೂ ಬೋಧೆ ವ್ಯರ್ಥ। *

ಎಂಬ ಹಾಗಲ್ಲ ಇದು. ಇಲ್ಲಿ ವಿಯೋಗದ ಪ್ರಶ್ನೆಯೇ ಇಲ್ಲ. ಆತ ಬಾಳಿನ ಕೊನೆಯವರೆಗೂ ಸಗುಣ ಉಪಾಸನೆಯಲ್ಲಿ ತೊಡಗಿದ್ದ. ಪರಮಾತ್ಮನ ಸನ್ನಿಧಿಯಲ್ಲಿದ್ದ. ಈಗ ಆತನಿಗೆ ನಿರ್ಗುಣದಲ್ಲಿಯೂ ಆನಂದ ವುಂಟಾಗತೊಡಗಿತು. ನಿರ್ಗುಣದ ಮೆಟ್ಟಿಲನ್ನು ಆತ ಏರಬೇಕಾಯಿತು. ಮುಂದೆ ಸಗುಣ, ಆದರೂ ಅದರ ಹಿಂದೆ ನಿರ್ಗುಣ ಬರಲೇಬೇಕು. ಇಲ್ಲವಾದರೆ ಪೂರ್ಣತ್ವವಿಲ್ಲ.

ಅರ್ಜುನನದು ಇದಕ್ಕೆ ವಿರುದ್ಧ. ಕೃಷ್ಣ ಆತನಿಗೆ ಹೇಳಿದ ಕೆಲಸ ವೇನು? ತಾನು ದೇಹ ತ್ಯಜಿಸಿದನಂತರ ತನ್ನ ಸ್ತ್ರೀಯರನ್ನೆಲ್ಲ ರಕ್ಷಿಸುವುದು. ಅರ್ಜುನ ದಿಲ್ಲಿಯಿಂದ ಬಂದು ದ್ವಾರಕೆಯಲ್ಲಿದ್ದ ಶ್ರೀ ಕೃಷ್ಣನ ಸ್ತ್ರೀಯರನ್ನೆಲ್ಲ ಕರೆದುಕೊಂಡು ಹೊರಟ. ದಾರಿಯಲ್ಲಿ ಹಿಸಾರದ ಬಳಿ ಪಂಜಾಬದಲ್ಲಿನ ಕಳ್ಳರು ಅವನನ್ನು ಸುಲಿದರು. ಆ ಕಾಲದ ಅತಿ ಪ್ರಸಿದ್ಧ ವೀರ, ಏಕಮಾತ್ರ 'ನರ'ನೆಂಬ ಕೀರ್ತಿ ಪಡೆದವ, ಸೋಲನ್ನೇ ಅರಿಯದವ, ಅಂತೆಯೇ 'ಜಯ' ಎಂಬ ಹೆಸರಿನಿಂದ ಖ್ಯಾತನಾದವ, ಪ್ರತ್ಯಕ್ಷ ಶಂಕರನೊಂದಿಗೆ ಕಾದಿ ಅವನನ್ನು ಮಣಿಸಿದವ, ವೀರಾಧಿವೀರ, ಆ ಅರ್ಜುನ ಅಜಮಾರಿನ ಬಳಿ ಕಾಲ್ದೆಗೆದು ಓಡಿ ಉಳಿದುಕೊಂಡ. ಕೃಷ್ಣ ಹೊರಟುಹೋದುದರಿಂದ ಅವನ ಮನಸ್ಸಿನ ಮೇಲೆ ತುಂಬಾ ಪರಿಣಾಮ ವಾಗಿತ್ತು. ಅವನ ಜೀವವೇ ಹೊರಟುಹೋಗಿ ನಿಸ್ತ್ರಾಣ ನಿಷ್ಪ್ರಾಣ ಶರೀರ ಉಳಿದ ಹಾಗಿತ್ತು. ಸಾರಾಂಶವಿಷ್ಟೆ: ಸದಾ ಕರ್ಮನಿರತನಾದ, ಕೃಷ್ಣನಿಂದ ದೂರದಲ್ಲಿದ್ದ, ನಿರ್ಗುಣ ಉಪಾಸಕ ಅರ್ಜುನನಿಗೂ ಕಡೆಗೆ

---

* 'ಮರಕಾ ಗುರೂ, ರಡಕಾ ಚೇಲಾ ದೋಹೀಂಚಾ ಬೋಧವಾಯಾ ಗೇಲಾ!'

ವಿಯೋಗವನ್ನು ಸಹಿಸಲಾಗಲಿಲ್ಲ. ಕಟ್ಟಕಡೆಗೆ ಅವನ ನಿರ್ಗುಣ ಬಾಯಿ ಬಿಟ್ಟಿತು. ಆತನ ಕರ್ಮವೆಲ್ಲ ಮುಗಿದಂತಾಯಿತು. ನಿರ್ಗುಣದ ಅಂತ್ಯದಲ್ಲಿ ಅವನಿಗೆ ಸಗುಣದ ಅನುಭವ ಬಂತು. ಹೀಗೆ ನಿರ್ಗುಣ ದೊಂದಿಗೆ ಸಗುಣ ಬೆರೆಯಬೇಕಾಗುತ್ತದೆ ಸಗುಣದಲ್ಲಿ ನಿರ್ಗುಣ ಸೇರ ಬೇಕಾಗುತ್ತದೆ. ಒಂದರಿಂದ ಇನ್ನೊಂದಕ್ಕೆ ಪರಿಪೂರ್ಣತೆ ಪ್ರಾಪ್ತ ವಾಗುತ್ತದೆ.

## ೭೫. ಸಗುಣ — ನಿರ್ಗುಣ ಏಕರೂಪ: ಸ್ವಾನುಭವ

ಅಂತೆಯೆ ಸಗುಣ ಉಪಾಸಕ, ನಿರ್ಗುಣ ಉಪಾಸಕರಲ್ಲಿರುವ ಅಂತರ ವೇನೆಂಬುದನ್ನು ಹೇಳಹೊರಟರೆ ಭಾಷೆ ಕುಂಠಿತವಾಗುತ್ತದೆ. ಸಗುಣ, ನಿರ್ಗುಣಗಳೆರಡೂ ಕೊನೆಗೆ ಒಂದೇ ಕಡೆ ಸೇರುತ್ತವೆ. ಭಕ್ತಿಯ ಝರಿ ಮೊದಲು ಸಗುಣದಿಂದ ಹೊರಟರೂ ಕೊನೆಗೆ ನಿರ್ಗುಣವನ್ನೆ ಸೇರುತ್ತದೆ. ಹಿಂದೆ ವೈಕಮ್ ಸತ್ಯಾಗ್ರಹವನ್ನು ನೋಡಲು ನಾ ಹೋಗಿದ್ದೆ. ಮಲಬಾರು ತೀರದಲ್ಲಿ ಶಂಕರಾಚಾರ್ಯರ ಜನ್ಮಸ್ಥಳವಿದೆಯೆಂದು ಭೂಗೋಲದಲ್ಲಿ ಬಂದ ವಿಷಯ ನನಗೆ ನೆನಪಿತ್ತು. ನಾನು ಹೋಗುತ್ತಿದ್ದ ಊರಿನ ಹತ್ತಿರದಲ್ಲೇ ಭಗವಾನ್ ಶಂಕರಾಚಾರ್ಯರ ಊರು 'ಕಾಲಡಿ' ಇರಬಹುದೆಂದು ತಿಳಿದು, ಜೊತೆಗಿದ್ದ ಮಲಯಾಳಿ ಗೃಹಸ್ಥರನ್ನು ಆ ಬಗ್ಗೆ ಕೇಳಿದೆ. 'ಇಲ್ಲಿಂದ ಹತ್ತು ಹನ್ನೆರಡು ಮೈಲು ದೂರ ಇದೆ ಆ ಊರು. ನೀವು ನೋಡಬೇಕೆ?' ಎಂದ ರವರು. ಇಲ್ಲ ಎಂದೆ. ನಾ ಬಂದದ್ದು ಸತ್ಯಾಗ್ರಹಕ್ಕೆ ಹೋಗಲು. ದಾರಿಯಲ್ಲಿ ಬೇರೆ ಕಡೆ ಹೋಗುವುದು ನನಗೆ ಯೋಗ್ಯವೆನಿಸಲಿಲ್ಲ. ಆದುದ ರಿಂದ ಆಗ ನಾನು ಆ ಊರು ನೋಡಲು ಹೋಗಲಿಲ್ಲ. ಅದು ಸರಿ ಎಂದು ಈಗಲೂ ನನಗನಿಸುತ್ತದೆ. ಆದರೆ ಆಗ ರಾತ್ರಿ ಮಲಗಿಕೊಂಡಾಗ ಆ ಕಾಲಡಿ ಗ್ರಾಮ, ಆ ಶಂಕರಾಚಾರ್ಯರ ಮೂರ್ತಿ ಕಣ್ಣೆದುರು ಕಟ್ಟುತ್ತಿತ್ತು. ನಿದ್ದೆ ಬರುತ್ತಿರಲಿಲ್ಲ. ಆ ಅನುಭವ ನನಗೆ ಈಗಲೂ ಹೊಸದಾಗಿ ತೋರು ತ್ತದೆ. ಶಂಕರಾಚಾರ್ಯರ ಜ್ಞಾನದ ಆ ಪ್ರಭಾವ, ಅವರ ಆ ದಿವ್ಯ ಅದ್ವೈತನಿಷ್ಠೆ, ಇದಿರಿಗೆ ಪಸರಿಸಿರುವ ಜಗತ್ತನ್ನೆಲ್ಲ ಕ್ಷುದ್ರಗೊಳಿಸುವ ಅವರ ಆ ಅಲೌಕಿಕ — ಜ್ವಲಂತ ವೈರಾಗ್ಯ, ಅವರ ಗಂಭೀರ ಭಾಷೆ, ಅವರಿಂದ

ನನಗಾದ ಅನಂತ ಉಪಕಾರ, ಈ ಎಲ್ಲ ಕಲ್ಪನೆ ನನ್ನ ಮನಸ್ಸಿನಲ್ಲಿ ತುಂಬು ತ್ತಿದ್ದವು. ಈ ಭಾವನೆಗಳೆಲ್ಲ ರಾತ್ರಿಯಲ್ಲಿ ಪ್ರಕಟವಾಗುತ್ತಿದ್ದವು. ನಿರ್ಗುಣ ದಲ್ಲಿ ಸಗುಣ ಹೇಗೆ ತುಂಬಿಕೊಂಡಿದೆಯೆಂಬುದರ ಅನುಭವ ನನಗಾಗ ಬಂತು. ಪ್ರತ್ಯಕ್ಷ ಭೆಟ್ಟಿಯಲ್ಲಿ ಇಷ್ಟು ಪ್ರೀತಿಯಿರದು. ವಿಶೇಷವಾಗಿ ಪತ್ರ ಬರೆಯುವ ಅಭ್ಯಾಸ ನನಗಿಲ್ಲ. ಆದರೆ ಗೆಳೆಯನೊಬ್ಬನಿಗೆ ಪತ್ರ ಬರೆಯದಿದಾಗ್ದ ಒಳಗೊಳಗೇ ನೆನಪಾಗುತ್ತಿರುತ್ತದೆ. ಪತ್ರ ಬರೆಯ ದಿದ್ದರೂ ಮನಸ್ಸಿನಲ್ಲಿ ಸ್ಮರಣೆಯಿರುತ್ತದೆ. ಹೀಗೆ ನಿರ್ಗುಣದಲ್ಲೂ ಸಗುಣ ಗುಪ್ತವಾಗಿ ತುಂಬಿರುತ್ತದೆ. ಸಗುಣ, ನಿರ್ಗುಣಗಳೆರಡೂ ಒಂದೇ ರೂಪದವು. ಪ್ರತ್ಯಕ್ಷ ಮೂರ್ತಿಯೊಂದನ್ನು ಎತ್ತಿಕೊಂಡು ಪೂಜೆ ಮಾಡುವುದು, ಅಂತರಂಗದಲ್ಲಿ ಯಾವಾಗಲೂ ಜಗತ್ಕಲ್ಯಾಣದ ಚಿಂತನೆ ನಡೆದಿದ್ದರೂ ಹೊರಗಡೆ ಪೂಜೆ ಕಾಣಿಸದಿರುವುದು: ಈ ಎರಡು ವಿಚಾರ ಗಳಿಗೂ ಅಷ್ಟೇ ಬೆಲೆ, ಅಷ್ಟೇ ಯೋಗ್ಯತೆ.

## ೬೬. ಸಗುಣ – ನಿರ್ಗುಣ ಬರೀ ದೃಷ್ಟಿಭೇದ, ಅಂತೇ ಭಕ್ತಲಕ್ಷಣವನ್ನು ಜಪಿಸು

ಕೊನೆಗೆ ನಾನು ಹೇಳುವುದಿಷ್ಟೆ: ನಗುಣ ಯಾವುದು, ನಿರ್ಗುಣ ಯಾವುದು ಎಂಬುದನ್ನು ನಿಖರವಾಗಿ ಹೇಳುವುದೂ ಸುಲಭವಲ್ಲ. ಒಂದು ದೃಷ್ಟಿಯಿಂದ ಸಗುಣವಾದುದು ಇನ್ನೊಂದು ದೃಷ್ಟಿಯಿಂದ ನಿರ್ಗುಣ ವಾಗಿರಲೂ ಸಾಧ್ಯ. ಸಗುಣದ ಸೇವೆ ಮಾಡುವವರು ಒಂದು ಕಲ್ಲು ತೆಗೆದುಕೊಂಡು ಮಾಡುತ್ತಾರೆ. ಆ ಕಲ್ಲಿನಲ್ಲಿ ದೇವರನ್ನು ಕಲ್ಪಿಸಿಕೊಳ್ಳು ತ್ತಾರೆ. ತಾಯಿಯಲ್ಲಿ, ಶರಣರಲ್ಲಿ, ಪ್ರತ್ಯಕ್ಷ ಚೈತನ್ಯ ಪ್ರಕಟವಾಗಿದೆ. ಅಲ್ಲಿ ಜ್ಞಾನ, ಪ್ರೀತಿ, ಆತ್ಮೀಯತೆ ಅರಳಿದೆ. ಅಲ್ಲಿ ಪರಮಾತ್ಮನೆಂದು ಅರಿತು ಪೂಜೆ ನಡೆಯದು. ಅವರ ಸೇವೆ ಮಾಡಬೇಕು. ಅಲ್ಲಿ ನಗುಣ ಪರಮಾತ್ಮನನ್ನು ಕಾಣಬೇಕು. ಅದನ್ನು ಬಿಟ್ಟು ಕಲ್ಲಿನಲ್ಲಿ ದೇವರನ್ನು ಕಾಣುತ್ತಾರೆ ಶರಣರು! ಕಲ್ಲಿನಲ್ಲಿ ದೇವರನ್ನು ಕಾಣುವುದು ನಿರ್ಗುಣದ ಪರಾಕಾಷ್ಠೆ. ತಂದೆ ತಾಯಿಗಳು, ನೆರೆಹೊರೆ, ಇವರಲ್ಲಿ ಪ್ರೀತಿ ಜ್ಞಾನ ಉಪಕಾರಬುದ್ಧಿ ಕಾಣುತ್ತಿದೆ. ಅಲ್ಲಿ ಈಶ್ವರನನ್ನು ಕಾಣುವುದು ಸುಲಭ.

ಕಲ್ಲಿನಲ್ಲಿ ಕಾಣುವುದು ಕಷ್ಟ. ನರ್ಮದೆಯ ಕಲ್ಲನ್ನು ದೇವರೆಂದು ತಿಳಿಯುತ್ತಾರೆ. ಅದು ನಿರ್ಗುಣ ಪೂಜೆಯಲ್ಲವೊ? ಹೀಗೂ ಅನಿಸುತ್ತದೆ ಒಮ್ಮೊಮ್ಮೆ — ಕಲ್ಲಿನಲ್ಲಿ ದೇವರನ್ನು ಕಾಣದಿದ್ದರೆ ಇನ್ನೆಲ್ಲಿ ಕಾಣಬೇಕು? ದೇವರ ಮೂರ್ತಿಯಾಗಲು ಆ ಕಲ್ಲೇ ಯೋಗ್ಯ. ಅದು ನಿರ್ವಿಕಾರಿ, ಶಾಂತ. ಕತ್ತಲೆಯಿರಲಿ, ಬೆಳಕಿರಲಿ, ಚಳಿಯಿರಲಿ, ಆ ಕಲ್ಲು ಹಾಗೇ ಇರುತ್ತದೆ. ಇಂಥ ಈ ನಿರ್ವಿಕಾರಿ ಕಲ್ಲೇ ಪರಮಾತ್ಮನ ಮೂರ್ತಿಯಾಗಲು ಯೋಗ್ಯ. ತಂದೆ ತಾಯಿ, ನೆರೆಹೊರೆ, ಜನರು ಎಲ್ಲರೂ ವಿಕಾರಮಯರು. ಅವರಲ್ಲಿ ಅಲ್ಪ ಸ್ವಲ್ಪವಾದರೂ ವಿಕಾರವಿರದಿರಲಾರದು. ಆದುದರಿಂದ ಕಲ್ಲಿನ ಪೂಜೆಗಿಂತ ಅವರ ಸೇವೆ ಮಾಡುವುದೇ ಒಂದು ದೃಷ್ಟಿಯಿಂದ ಕಷ್ಟಸಾಧ್ಯ.

ಸಾರಾಂಶ — ಸಗುಣ ನಿರ್ಗುಣಗಳೆರಡೂ ಪರಸ್ಪರ ಪೂರಕ. ಸಗುಣ ಸುಲಭವಾದರೆ ನಿರ್ಗುಣ ಕಠಿನ. ಹಾಗೆ ಸಗುಣವೂ ಕಠಿನ, ನಿರ್ಗುಣವೂ ಸುಲಭ. ಎರಡರಿಂದಲೂ ದೊರೆಯುವ ಧ್ಯೇಯವೊಂದೇ. ಐದನೆಯ ಅಧ್ಯಾಯದಲ್ಲಿ ಹೇಳಿದ ಹಾಗೆ ಇಪ್ಪತ್ನಾಲ್ಕು ತಾಸು ಕರ್ಮ ಮಾಡಿಯೂ ಕೊಂಚವೂ ಕರ್ಮ ಮಾಡದಿರುವ, ಇಪ್ಪತ್ನಾಲ್ಕು ತಾಸು ಕಾಲವೂ ಕರ್ಮವನ್ನೇ ಮಾಡದಿದ್ದರೂ ಎಲ್ಲ ಕರ್ಮಗಳನ್ನು ಮಾಡುವ ಯೋಗಿಯೂ ಸಂನ್ಯಾಸಿಯೂ ಏಕರೂಪಿಯಾಗಿರುವಂತೆಯೇ ಇಲ್ಲೂ. ಸಂನ್ಯಾಸ ಶ್ರೇಷ್ಠವೋ, ಯೋಗ ಶ್ರೇಷ್ಠವೋ ಎಂಬ ಪ್ರಶ್ನೆಗೆ ಉತ್ತರ ಕೊಡುವಾಗ ಭಗವಂತನಿಗೆ ಯೋಚನೆಯುಂಟಾದಂತೆಯೇ ಇಲ್ಲೂ ಆಯಿತು. ಕೊನೆಗೆ ಸೌಲಭ್ಯ, ಕಷ್ಟಗಳನ್ನು ತಾರತಮ್ಯದಿಂದ ಎಣಿಸಿ ಉತ್ತರವಿತ್ತ. ಯೋಗ — ಸಂನ್ಯಾಸ, ಸಗುಣ — ನಿರ್ಗುಣ ಎಲ್ಲವೂ ಒಂದೇ. ಕೊನೆಗೆ ಭಗವಂತ ಹೇಳಿದ — 'ಅರ್ಜುನಾ, ನೀನು ಸಗುಣನೇ ಇರು, ನಿರ್ಗುಣನೇ ಇರು. ಭಕ್ತನಾಗಿದ್ದರೆ ಸಾಕು. ಗುಂಡುಕಲ್ಲಾಗಬೇಡ.' ಹೀಗೆ ಹೇಳಿ ಭಗವಂತ ಕೊನೆಯಲ್ಲಿ ಭಕ್ತರ ಲಕ್ಷಣಗಳನ್ನು ವಿವರಿಸಿದಾನೆ. ಅಮೃತ ಮಧುರವಾಗಿದ್ದೀತು. ಆದರೆ ಅದರ ಮಾಧುರ್ಯವನ್ನು ನಾವು ಸವಿದಿಲ್ಲ. ಈ ಲಕ್ಷಣಗಳೆಲ್ಲ ಮಧುರವಾಗಿವೆ. ಇಲ್ಲಿ ಕಲ್ಪನೆಯ ಅಗತ್ಯವಿಲ್ಲ. ಅನುಭವ ಅಗತ್ಯ. ಹನ್ನೆರಡನೆ ಅಧ್ಯಾಯದಲ್ಲಿನ ಈ ಭಕ್ತ ಲಕ್ಷಣಗಳನ್ನು ಸ್ಥಿತಪ್ರಜ್ಞನ

ಲಕ್ಷಣಗಳ ಹಾಗೆ ನಾವು ನಿತ್ಯವೂ ಪಾರಾಯಣ ಮಾಡಬೇಕು. ಮನನ ಮಾಡಬೇಕು. ನಿಧಾನವಾಗಿ ಅವನ್ನು ನಮ್ಮ ಆಚರಣೆಗೆ ತಂದು ಪುಷ್ಟಿ ಪಡೆಯಬೇಕು. ಈ ರೀತಿಯಾಗಿ ನಮ್ಮ ಬಾಳು ಮೆಲ್ಲಮೆಲ್ಲನೆ ಪರಮಾತ್ಮನತ್ತ ಸಾಗಬೇಕು.

ಭಾನುವಾರ,
೧೫-೫-೧೯೬೨.

## ೩೭. ಕರ್ಮಯೋಗಕ್ಕೆ ಉಪಕಾರಕ ದೇಹಾತ್ಮ ಪೃಥಕ್ಕರಣ

ವ್ಯಾಸರು ತಮ್ಮ ಬಾಳಿನ ಸಾರವನ್ನೆಲ್ಲ ಭಗವದ್ಗೀತೆಯಲ್ಲಿ ತುಂಬಿದಾರೆ. ಬೇರೆ ಬರೆಹವನ್ನು ಅವರು ವಿಸ್ತಾರವಾಗಿ ಸಾಕಷ್ಟು ಬರೆದಿದಾರೆ. ಮಹಾಭಾರತದ ಸಂಹಿತೆಗಳೇ ಲಕ್ಷ, ಒಂದೂಕಾಲು ಲಕ್ಷದಷ್ಟು. ಸಂಸ್ಕೃತದಲ್ಲಿ 'ವ್ಯಾಸ' ಎಂಬ ಶಬ್ದಕ್ಕೇ ವಿಸ್ತಾರ ಎಂಬ ಅರ್ಥವೇ ಬಂದುಬಿಟ್ಟಿದೆ. ಆದರೆ ಗೀತೆಯಲ್ಲಿ ವಿಸ್ತಾರದ ಕಡೆ ಅವರ ಲಕ್ಷ್ಯವಿಲ್ಲ. ಭೂಮಿತಿಯಲ್ಲಿ ಯೂಕ್ಲಿಡ್ ಕೆಲವು ತತ್ವ ಹೇಳಿದಹಾಗೆ, ಕೆಲವು ಸಿದ್ಧಾಂತ ಮಂಡಿಸಿದ ಹಾಗೆ, ಬಾಳಿಗೆ ಉಪಯುಕ್ತವಾದ ಹಲವು ತತ್ವಗಳನ್ನು ವ್ಯಾಸರು ಗೀತೆಯಲ್ಲಿ ವಿವರಿಸಿದಾರೆ ಇಲ್ಲಿ ವಿಶೇಷ ಚರ್ಚೆಯಿಲ್ಲ. ಉದ್ದುದ್ದ ವಿಸ್ತಾರವಿಲ್ಲ. ಗೀತೆಯಲ್ಲಿ ಹೇಳಿದ ವಿಷಯಗಳನ್ನು ಪ್ರತಿಯೊಬ್ಬರೂ ತಮ್ಮ ತಮ್ಮ ಬಾಳಿನಲ್ಲಿ ಉಪಯೋಗಿಸಿಕೊಳ್ಳಲು ಸಾಧ್ಯವಿರುವುದೇ ಇದಕ್ಕೆ ಕಾರಣ. ಈ ಬಗೆಯ ಉಪಯೋಗಕ್ಕಾಗಿಯೇ ಅವನ್ನು ಗೀತೆಯಲ್ಲಿ ಹೇಳಿರುವುದು. ಬಾಳಿಗೆ ಉಪಯುಕ್ತವಾದ ವಿಷಯಗಳನ್ನು ಮಾತ್ರ ಅಲ್ಲಿ ವಿವರಿಸಿದೆ. ಆ ವಿವರಣೆಯ ಉದ್ದೇಶ್ಯ ಅಷ್ಟೆ. ಅಂತೆಯೆ ವ್ಯಾಸರು ಸ್ವಲ್ಪದರಲ್ಲಿಯೆ ತತ್ವಗಳನ್ನು ವಿವರಿಸಿ ಸಂತುಷ್ಟರಾಗಿದಾರೆ. ಅವರ ಈ ಸಂತೋಷದಿಂದ, ಸತ್ಯ ಹಾಗೂ ಆತ್ಮಾನುಭವಗಳ ಬಗೆಗೆ ಅವರಿಗಿದ್ದ ಅಪಾರ ನಂಬಿಕೆ ಕಂಡುಬರುತ್ತದೆ. ಸತ್ಯವಾದ ವಸ್ತುವನ್ನು ಮಂಡಿಸಲು ಹೆಚ್ಚು ಯುಕ್ತಿಯನ್ನು ಉಪಯೋಗಿಸಬೇಕಾದ ಅಗತ್ಯವೇನೂ ಇಲ್ಲ.

ಗೀತೆಯನ್ನು ನಾವು ನೋಡಿದೇವೆ. ಬಾಳಿನಲ್ಲಿ ಸಹಾಯದ ಅಗತ್ಯವಿದ್ದಾಗಲೆಲ್ಲ ಗೀತೆಯಿಂದ ಅದು ದೊರೆಯುವಂತಾಗಬೇಕೆಂಬುದೇ ಅದರ ಉದ್ದೇಶ್ಯ. ಇಂಥ ನೆರವು ನಮಗೆ ಯಾವಾಗಲೂ ದೊರೆಯಲು ಸಾಧ್ಯ. ಬಾಳಿಗೆ ಉಪಯುಕ್ತವಾದ ಶಾಸ್ತ್ರ ಗೀತೆ, ಅಂತೆಯೆ ಅದರಲ್ಲಿ ಸ್ವಧರ್ಮಕ್ಕೆ ಅಷ್ಟು ಮಹತ್ವ. ಸ್ವಧರ್ಮಾಚರಣೆ ಬಾಳಿನ ಮುಖ್ಯ ತಳಹದಿ. ಅದರ ಮೇಲೇ ಕಟ್ಟಡವೆಲ್ಲ ನಿಲ್ಲಬೇಕು. ಈ ತಳಹದಿ ಭದ್ರವಾಗಿದ್ದಷ್ಟೂ ಕಟ್ಟಡ ತಡೆದು ನಿಂತೀತು. ಈ ಸ್ವಧರ್ಮಾಚರಣೆ 'ಕರ್ಮ' ಎನ್ನುತ್ತದೆ ಗೀತೆ.

ಲಾಗುವುದಿಲ್ಲ. ಅಂತೆಯೆ ನಿರ್ಗುಣ. ಉಪಾಸನೆ ಬಹಳ ಕಠಿನ. ಬಗೆ ಬಗೆಯ ರೀತಿಯಲ್ಲಿ ಸಗುಣ ಉಪಾಸನೆಯನ್ನು ನಮ್ಮ ಶಕ್ತಿಗನುಸಾರವಾಗಿ ಮಾಡಬಹುದು. ನಾವು ಹುಟ್ಟಿದ ಹಳ್ಳಿಯ ಸೇವೆ, ನಮ್ಮ ತಂದೆ ತಾಯಿಗಳ ಸೇವೆಗಳೂ ಸಗುಣ ಪೂಜೆಯೆ. ಜಗದ ಹಿತಕ್ಕೆ ನಿಮ್ಮ ಆ ಸೇವೆ ವಿರುದ್ಧ ವಾಗಿರದಿದ್ದರೆ ಸಾಕು. ನೀವು ಎಷ್ಟೇ ಅಲ್ಪಪ್ರಮಾಣದಲ್ಲಿ ಮಾಡಿದರೂ ಸರಿ, ಅದು ಇತರರ ಹಿತಗಳಿಗೆ ಅಡ್ಡ ಬಾರದಿದ್ದಲ್ಲಿ ಭಕ್ತಿಯ ದರ್ಜೆಗೇರುವುದು ನಿಶ್ಚಿತ. ಇಲ್ಲವಾದರೆ ಆ ಸೇವೆ ಆಸಕ್ತಿ ಆದೀತು. ತಾಯಿ ತಂದೆ, ನಿಮ್ಮ ಗೆಳೆಯರು, ದುಃಖಿತರಾದ ಬಂಧುಗಳು, ಸಾಧು ಶರಣರು ದೇವರೆಂದು ತಿಳಿದು ಸೇವೆ ಮಾಡಬೇಕು. ಅವರಲ್ಲಿ ಪರಮಾತ್ಮನನ್ನು ಕಲ್ಪಿಸಿಕೊಳ್ಳಬೇಕು. ಸಂತೋಷಪಡಬೇಕು. ಸುಗಣ ಪೂಜೆ ಸುಲಭ, ನಿರ್ಗುಣ ಪೂಜೆ ಕಠಿನ. ಉಳಿದದ್ದೆಲ್ಲ ಎರಡರದೂ ಒಂದೇ ಅರ್ಥ. ಸೌಲಭ್ಯದ ದೃಷ್ಟಿಯಿಂದ ಸಗುಣ ಶ್ರೇಯಸ್ಕರವಾದುದು, ಅಷ್ಟೆ.

ಸುಲಭತೆಯ ಅಂಶವಾಯಿತು. ಹಾಗೇ ಇನ್ನೊಂದು ಅಂಶವುಂಟು. ನಿರ್ಗುಣದಲ್ಲಿ ಭಯವುಂಟು. ಅದು ಜ್ಞಾನಮಯ. ಸಗುಣ ಪ್ರೇಮ ಮಯ, ಭಾವನಾಮಯ. ಸಗುಣದಲ್ಲಿ ಸಾರಳ್ಯವುಂಟು. ಇಲ್ಲಿ ಭಕ್ತ ಹೆಚ್ಚು ಸುರಕ್ಷಿತನಾಗಿರುತ್ತಾನೆ. ನಿರ್ಗುಣದಲ್ಲಿ ಕೊಂಚ ಗಂಡಾಂತರವಿದೆ. ಜ್ಞಾನದ ಮೇಲೆ ನಾನು ಹೆಚ್ಚಾಗಿ ಶ್ರದ್ಧೆಯಿಟ್ಟಿದ್ದ ಕಾಲವೊಂದಿತ್ತು. ಆದರೆ ಜ್ಞಾನವೊಂದರಿಂದಲೇ ನನ್ನ ಕಾರ್ಯವಾಗಲಾರದೆಂಬ ಅನುಭವ ನನಗೆ ಬಂದಿದೆ. ಮನಸ್ಸಿನ ಸ್ಥೂಲ ಮಲ ಜ್ಞಾನದಿಂದ ಸುಟ್ಟು ಬೂದಿ ಯಾಗುತ್ತದೆ. ಸೂಕ್ಷ್ಮ ಮಲವನ್ನು ತೊಳೆದು ಬಿಸುಡುವ ಸಾಮರ್ಥ್ಯ ಜ್ಞಾನಕ್ಕಿಲ್ಲ. ಸ್ವಾವಲಂಬನ, ವಿಚಾರ, ವಿವೇಕ, ಅಭ್ಯಾಸ, ವೈರಾಗ್ಯ ಈ ಎಲ್ಲ ಸಾಧನೆಗಳನ್ನು ಕೈಗೊಂಡರೂ ಸಹ ಮನಸ್ಸಿನ ಸೂಕ್ಷ್ಮ ಮಲವನ್ನು ತೊಳೆದುಹಾಕಲಾಗುವುದಿಲ್ಲ. ಭಕ್ತಿಯ ನೀರಿಲ್ಲದೆ ಈ ಮಲವನ್ನು ತೊಳೆಯುವಂತಿಲ್ಲ. ಭಕ್ತಿಯ ನೀರಿನಲ್ಲಿ ಅಂಥ ಶಕ್ತಿಯಿದೆ. ಇದನ್ನು ನೀವು ಪರಾವಲಂಬನವೆಂದೀರಿ. ಆದರೆ 'ಪರ' ಎಂದರೆ 'ಬೇರೆಯವರು' ಎಂದರ್ಥವಲ್ಲ: ಆ ಶ್ರೇಷ್ಠ ಪರಮಾತ್ಮ, ಆತನ ಅವಲಂಬನ ಎಂದು ಅರ್ಥ. ಪರಮಾತ್ಮನ ಆಧಾರ ಪಡೆಯದೆ ಚಿತ್ತದ ಮಲ ಮಾಯುವಾಗದು.

'ಜ್ಞಾನ ಎಂಬ ಶಬ್ದದ ಅರ್ಥವನ್ನಿಲ್ಲಿ ಸಂಕುಚಿತಗೊಳಿಸಿದೆ. ಮನಸ್ಸಿನ ಕೊಳೆಯನ್ನು ಜ್ಞಾನದಿಂದ ತೊಳೆಯಲಾಗದು ಎಂದಾಗ ಜ್ಞಾನ ಕಡಮೆ ದರ್ಜೆಯದಾಯಿತು' ಎಂದು ಕೆಲವರು ಹೇಳಬಹುದು. ಈ ಆಕ್ಷೇಪಣೆಯನ್ನು ನಾ ಒಪ್ಪುತ್ತೇನೆ. ಈ ಮಣ್ಣಿನ ಪುತ್ಥಳಿಗೆ ಶುದ್ಧವಾದ ಜ್ಞಾನ ಲಭಿಸಲು ಸಾಧ್ಯವಿಲ್ಲವೆಂದು ನನ್ನ ಅಭಿಮತ. ಈ ದೇಹದಲ್ಲಿ ಹುಟ್ಟಿದ ಜ್ಞಾನ ಎಷ್ಟೇ ಶುದ್ಧವಾಗಿದ್ದರೂ ನಹ ಕೊಂಚ ವಿಕೃತವಾಗಿರುವುದು ಅನಿವಾರ್ಯ. ಇಲ್ಲಿ ಹುಟ್ಟುವ ಜ್ಞಾನದ ಶಕ್ತಿ ಮರ್ಯಾದಿತ. 'ಶುದ್ಧ ಜ್ಞಾನ ಹುಟ್ಟಿದಲ್ಲಿ ಅದರಿಂದ ಎಲ್ಲ ಕೊಳೆಯೂ ಸುಟ್ಟು ಬೂದಿಯಾಗುವುದೆಂಬ ವಿಚಾರದಲ್ಲಿ ನನಗೆ ಸಂದೇಹವಿಲ್ಲ. ಚಿತ್ತದ ಸಮೇತ ಎಲ್ಲ ಕೊಳೆಯನ್ನೂ ಸುಟ್ಟುಹಾಕಬಲ್ಲ ಸಾಮರ್ಥ್ಯ ಜ್ಞಾನದಲ್ಲಿದೆ. ಆದರೆ ಈ ವಿಕಾರಮಯ ದೇಹದಲ್ಲಿ ಜ್ಞಾನದ ಬಲ ಅಲ್ಪ. ಅಂತೆಯೇ ಸೂಕ್ಷ್ಮ ಕೊಳೆ ತೊಳೆದುಹೋಗುವುದಿಲ್ಲ. ಭಕ್ತಿಯನ್ನಾಶ್ರಯಿಸದೆ ಸೂಕ್ಷ್ಮ ಕೊಳೆಯನ್ನು ಒರೆಸಿ ತೆಗೆಯಲು ಸಾಧ್ಯವಾಗದು. ಎಂತಲೇ ಭಕ್ತಿಯ ನಡುವೆ ಮನುಷ್ಯ ಹೆಚ್ಚು ಕ್ಷೇಮದಿಂದಿರುತ್ತಾನೆ. 'ಹೆಚ್ಚು' ಎಂಬ ಶಬ್ದ ನಾನು ಸೇರಿಸಿದುದು ಎಂದಿಟ್ಟುಕೊಳ್ಳಿ. ಸಗುಣಭಕ್ತಿ ಸುಲಭ. ಇಲ್ಲಿ ಈಶ್ವರನೇ ಆಧಾರ. ನಿರ್ಗುಣದಲ್ಲಿ ಸ್ವಾವಲಂಬನ. ಇಲ್ಲಿನ 'ಸ್ವ' ದ ಅರ್ಥವೇನು? ಸ್ವಾವಲಂಬನ ಎಂದರೆ ಸ್ವಂತದ ಅಂತಃಕರಣದಲ್ಲಿನ ಪರಮಾತ್ಮನ ಆಧಾರ. ಇಲ್ಲೂ ಅದೇ ಅರ್ಥ. ಕೇವಲ ಬುದ್ಧಿಯ ಆಧಾರದಿಂದಲೇ ಶುದ್ಧರಾದವರಾರೂ ಇಲ್ಲ. ಸ್ವಾವಲಂಬನದಿಂದ ಎಂದರೆ ಅಂತಃಕರಣದಲ್ಲಿನ ಆತ್ಮಜ್ಞಾನದಿಂದ ಶುದ್ಧ ಜ್ಞಾನ ದೊರೆತೀತು. ಸಾರಾಂಶ, ನಿರ್ಗುಣ ಭಕ್ತಿಯ ಸ್ವಾವಲಂಬನದಲ್ಲೂ ಆತ್ಮದ್ದೇ ಆಧಾರ.

## ೬೨. ನಿರ್ಗುಣದ ಅಭಾವದಿಂದ ಸಗುಣ – ಸದೋಷ

ಸಗುಣ ಉಪಾಸನೆಯ ಪಕ್ಷಕ್ಕೆ ನಾನು ಸುಲಭತೆ ಸುರಕ್ಷಿತತೆಗಳ ತೂಕ ಹಾಕಿದೆ. ಹಾಗೇ ನಿರ್ಗುಣದ ಪಕ್ಷಕ್ಕೂ ಹಾಕಬಹುದು. ನಿರ್ಗುಣದಲ್ಲಿ ಮರ್ಯಾದೆಯುಂಟು. ಬೇರೆಬೇರೆ ಕೆಲಸಗಳಿಗಾಗಿ ಸೇವೆಗಾಗಿ ನಾವು ಸಂಸ್ಥೆಯನ್ನು ಸ್ಥಾಪಿಸುತ್ತೇವೆ. ಅದು ಪ್ರಾರಂಭ

ವಾಗುವುದು ಮೊದಲು ವ್ಯಕ್ತಿಯ ಮೂಲಕ. ಆ ವ್ಯಕ್ತಿಯೇ ಅದಕ್ಕೆ ಮುಖ್ಯ ಆಧಾರ. ಸಂಸ್ಥೆ ಮೊದಲಿಗೆ ವ್ಯಕ್ತಿನಿಷ್ಠವಾಗಿದ್ದರೂ ಮುಂದೆ ವಿಕಾಸವಾದಂತೆ ತತ್ವನಿಷ್ಠವಾಗಬೇಕು. ಹಾಗಾಗದಿದ್ದಲ್ಲಿ, ಸ್ಫೂರ್ತಿ ಕೊಡುವ ಆ ವ್ಯಕ್ತಿ ಇಲ್ಲದಾಗುತ್ತಲೂ ಸಂಸ್ಥೆಯಲ್ಲಿ ಅವ್ಯವಸ್ಥೆ ತಲೆದೋರೀತು. ನನ್ನ ಮೆಚ್ಚುಗೆಯ ದೃಷ್ಟಾಂತ ಕೊಡಲೆ? ಚರಖದ ಮಾಳ ಹರಿಯುತ್ತಲೂ ನೂಲು ತೆಗೆಯುವುದು ಹಾಗಿರಲಿ, ತೆಗೆದ ನೂಲನ್ನು ಸುತ್ತುವುದೂ ಸಾಧ್ಯವಾಗುವುದಿಲ್ಲ. ಅದೇ ಮೇರೆಗೆ ಆ ವ್ಯಕ್ತಿಯ ಆಧಾರ ತಪ್ಪುತ್ತಲೂ ಸಂಸ್ಥೆಗೆ ದುರ್ದಶೆ ಬರುತ್ತದೆ. ಅದು ತಬ್ಬಲಿಯಾಗುತ್ತದೆ. ವ್ಯಕ್ತಿನಿಷ್ಠೆಯಿಂದ ತತ್ವನಿಷ್ಠೆ ಹುಟ್ಟಿದರೆ ಹೀಗಾಗದು. ಸಗುಣಕ್ಕೆ ನಿರ್ಗುಣದ ಸಹಾಯ ಬೇಕು. ಎಂದಾದರೂ ವ್ಯಕ್ತಿಯಿಂದ, ಆಕಾರದಿಂದ ಹೊರಬೀಳಲು ಕಲಿಯಬೇಕು. ಹಿಮಾಲಯದಿಂದ, ಶಂಕರನ ಜಡೆಯಿಂದ ಗಂಗೆ ಹೊರಟಳು. ಆದರೆ ಆಕೆ ಅಲ್ಲಿಯೇ ನಿಲ್ಲಲಿಲ್ಲ. ಆ ಜಡೆಯನ್ನು ಬಿಟ್ಟು, ಹಿಮಾಲಯದ ಕೊಳ್ಳ ಕಣಿವೆ ಕಾಡು ಬೆಟ್ಟಗಳನ್ನು ತ್ಯಜಿಸಿ ಬಯಲು ಸೀಮೆಗೆ ಜುಳು ಜುಳು ಹರಿದು ಬಂದಳು. ಆಗ ಅವಳಿಂದ ಜನಕ್ಕೆ ಉಪಯೋಗವಾಯಿತು. ಇದೇ ರೀತಿಯಾಗಿ ವ್ಯಕ್ತಿಯ ಆಧಾರ ತಪ್ಪಿದರೂ ಸಹ ಸಂಸ್ಥೆ ತತ್ವದ ಸುದೃಢ ಆಧಾರದ ಮೇಲೆ ನಿಲ್ಲಲು ಸಿದ್ಧವಾಗಿರಬೇಕು. ಕಮಾನು ಕಟ್ಟುವಾಗ ಅದಕ್ಕೆ ಆಧಾರ ಕೊಡುತ್ತಾರೆ. ಅನಂತರ ಅದನ್ನು ತೆಗೆದುಬಿಡುತ್ತಾರೆ. ಆಧಾರವನ್ನು ತೆಗೆದ ಬಳಿಕ ಕಮಾನು ನಿಂತರೇನೇ ಅದು ನಿಜವಾದ ಆಧಾರವಾಗಿತ್ತೆಂದು ತಿಳಿಯಬೇಕು. ಸ್ಫೂರ್ತಿಯ ಝರಿ ಮೊದಲು ಸಗುಣದಿಂದ ಹುಟ್ಟಿದುದು ನಿಜ. ಕೊನೆಗೆ ತತ್ವನಿಷ್ಠೆಯಲ್ಲಿ, ನಿರ್ಗುಣದಲ್ಲಿ ಪರಿಪೂರ್ಣವಾಗಬೇಕು. ಭಕ್ತಿಯ ಉದರದಿಂದ ಜ್ಞಾನ ಮೈದಳೆಯಬೇಕು. ಭಕ್ತಿಯ ಬಳ್ಳಿಗೆ ಜ್ಞಾನದ ಹೂ ಬರಬೇಕು.

ಈ ವಿಷಯವನ್ನು ಬುದ್ಧದೇವ ಅರಿತಿದ್ದ. ಆತ ಮೂರು ಬಗೆಯ ನಿಷ್ಠೆ ಹೇಳಿದಾನೆ. ಮೊದಲು ವ್ಯಕ್ತಿನಿಷ್ಠೆಯಿದ್ದರೂ ಅದರಿಂದ ತತ್ವನಿಷ್ಠೆ. ಒಮ್ಮೆಲೆ ತತ್ವನಿಷ್ಠೆಯುಂಟಾಗದಿದ್ದರೂ ಸಂಘನಿಷ್ಠೆಯಾದರೂ ಹುಟ್ಟಬೇಕು. ಒಬ್ಬ ವ್ಯಕ್ತಿಯ ಬಗ್ಗೆ ಇದ್ದ ಆದರಭಾವ ಹದಿನೈದು ವ್ಯಕ್ತಿಗಳ ಬಗೆಗೂ ಉಂಟಾಗಬೇಕು. ಸಂಘದ ಬಗ್ಗೆ ಸಾಮುದಾಯಿಕ ಪ್ರೀತಿಯಿರದಿದ್ದರೆ

ಒಡಕು ಹುಟ್ಟೀತು, ಕಲಹವಾದೀತು. ವ್ಯಕ್ತಿಶರಣತೆ ತೊಲಗಿಹೋಗಿ ಸಂಘಶರಣತೆ ತಲೆದೋರಬೇಕು. ಅನಂತರ ಸಿದ್ಧಾಂತದ ನಿಷ್ಠೆ ನಿರ್ಮಾಣ ವಾಗಬೇಕು. “ಬುದ್ಧಂ ಶರಣಂ ಗಚ್ಛಾಮಿ। ಸಂಘಂ ಶರಣಂ ಗಚ್ಛಾಮಿ। ಧರ್ಮಂ ಶರಣಂ ಗಚ್ಛಾಮಿ ॥” ಮೂರು ಬಗೆಯ ಶರಣಾಗತಿಗಳಿವು. ಮೊದಲು ವ್ಯಕ್ತಿಯ ಬಗ್ಗೆ ಪ್ರೀತಿ, ಅನಂತರ ಸಂಘದ ಬಗ್ಗೆ ಪ್ರೀತಿ. ಆದರೆ ಇವೆರಡೂ ನಿಷ್ಠೆಗಳೂ ಡೋಲಾಯಮಾನವೇ. ಕೊನೆಗೆ ಸಿದ್ಧಾಂತ-ನಿಷ್ಠೆ ಉತ್ಪನ್ನವಾದರೆ ಮಾತ್ರ ಸಂಸ್ಥೆ ಉಳಿದೀತು. ಸ್ಫೂರ್ತಿಯ ಝರಿ ಸಗುಣದಿಂದ ಹುಟ್ಟಿದರೂ ಸಹ ಅದು ನಿರ್ಗುಣದ ಸಮುದ್ರವನ್ನೇ ಸೇರಿ ಕೊಳ್ಳಬೇಕು. ನಿರ್ಗುಣದ ಅಭಾವದಿಂದ ಸಗುಣ ಸದೋಷವಾಗುತ್ತದೆ. ನಿರ್ಗುಣದ ಮರ್ಯಾದೆ ಸಗುಣವನ್ನು ಸಮತೋಲವಾಗಿರಿಸುತ್ತದೆ. ಅದಕ್ಕಾಗಿ ನಿರ್ಗುಣಕ್ಕೆ ಸಗುಣ ಆಭಾರಿಯಾಗಿದೆ.

ಹಿಂದೂ, ಕ್ರೈಸ್ತ, ಇಸ್ಲಾಂ ಮುಂತಾದ ಎಲ್ಲಾ ಧರ್ಮಗಳಲ್ಲೂ ಮೂರ್ತಿ ಪೂಜೆ ಯಾವುದಾದರೊಂದು ರೀತಿಯಲ್ಲಿ ಉಂಟು. ಹಿಂದೂ ಧರ್ಮದಲ್ಲಿ ಮೂರ್ತಿಪೂಜೆ ಕೆಳಗಿನ ಮೆಟ್ಟಲಿನದೆಂಬ ಭಾವನೆಯಿದ್ದರೂ ಕೂಡ ಅದು ಮಾನ್ಯವಾದುದು. ಮೂರ್ತಿಪೂಜೆಯ ಮಹತ್ತು ದೊಡ್ಡದು. ನಿರ್ಗುಣದ ಮರ್ಯಾದೆಯಿರುವತನಕವೂ ಮೂರ್ತಿಪೂಜೆ ನಿರ್ದೋಷ ವಾಗಿತ್ತು. ಈ ಮರ್ಯಾದೆ ತಪ್ಪುತ್ತಲೂ ಸಗುಣ ಸದೋಷವಾಯಿತು. ಮೂರು ಧರ್ಮಗಳೂ ಸಗುಣ, ನಿರ್ಗುಣದ ಮರ್ಯಾದೆಯ ಅಭಾವದಿಂದ ಅವನತ ಸ್ಥಿತಿಗೆ ಬಂದಿವೆ. ಯಜ್ಞ, ಯಾಗಾದಿಗಳಲ್ಲಿ ಪ್ರಾಣಿಹತ್ಯೆ ನಡೆಯ ತೊಡಗಿತು. ಇವೊತ್ತೂ ಶಕ್ತಿಗೆ ಬಲಿ ಕೊಡುವ ಪದ್ಧತಿಯುಂಟು. ಇದು ಮೂರ್ತಿಪೂಜೆಯ ಅತ್ಯಾಚಾರ. ಮರ್ಯಾದೆಯನ್ನು ಬಿಟ್ಟು ಮೂರ್ತಿ ಪೂಜೆ ಮೇರೆ ಮೀರಿ ನಡೆಯಿತು. ನಿರ್ಗುಣ ನಿಷ್ಠೆ ಉತ್ಪನ್ನವಾದರೆ ಈ ಉಪಟಳವಿರದು.

### ೬೩. ಎರಡೂ ಪರಸ್ಪರ ಪೂರಕ : ರಾಮಾಯಣದ ದೃಷ್ಟಾಂತ

ಸಗುಣ ಸುಲಭ, ಸುರಕ್ಷಿತ. ಆದರೂ ಅದಕ್ಕೆ ನಿರ್ಗುಣದ ಆವಶ್ಯಕತೆಯುಂಟು. ಸಗುಣ ಬೆಳೆದು ಬಳ್ಳಿಯಾಗಿ ಅದಕ್ಕೆ ನಿರ್ಗುಣದ

ತತ್ತ್ವನಿಷ್ಠೆಯ ಹೂ ಬಿಡಬೇಕು. ನಿರ್ಗುಣ ಸಗುಣಗಳೆರಡೂ ಪರಸ್ಪರ ಪೂರಕಗಳು, ಪರಸ್ಪರ ವಿರುದ್ಧವಲ್ಲ. ಸಗುಣದಿಂದ ನಿರ್ಗುಣಕ್ಕೆ ಹೆಜ್ಜೆ ಹಾಕಬೇಕು. ಮನಸ್ಸಿನ ಸೂಕ್ಷ್ಮ ಕೊಳೆಯನ್ನು ತೆಗೆದುಹಾಕುವುದಕ್ಕಾಗಿ ನಿರ್ಗುಣಕ್ಕೂ ಸಗುಣದ ಆರ್ದ್ರತೆ ಬೇಕು. ಒಂದರಿಂದ ಇನ್ನೊಂದಕ್ಕೆ ಶೋಭೆಯುಂಟು. ರಾಮಾಯಣದಲ್ಲಿ ಈ ಎರಡು ಬಗೆಯ ಭಕ್ತಿಯನ್ನು ಕುರಿತು ಬಲು ಸುಂದರವಾಗಿ ಹೇಳಿದೆ. ಅದರ ವರ್ಣನೆಯಿರುವುದು ಅಯೋಧ್ಯಾಕಾಂಡದಲ್ಲಿ. ರಾಮಾಯಣದಲ್ಲೆಲ್ಲ ಈ ಎರಡು ರೀತಿಯ ಭಕ್ತಿಗಳ ವಿಸ್ತರಣವೇ ಕಂಡುಬರುತ್ತದೆ. ಭರತನ ಭಕ್ತಿಯದು ಮೊದಲನೆಯ ರೀತಿ. ಲಕ್ಷ್ಮಣನ ಭಕ್ತಿಯದು ಎರಡನೆಯ ರೀತಿ. ಸಗುಣ ಭಕ್ತಿ, ನಿರ್ಗುಣ ಭಕ್ತಿಗಳ ಸ್ವರೂಪ ಈ ನಿದರ್ಶನಗಳಿಂದ ಕಂಡು ಬಂದೀತು.

ರಾಮ ಕಾಡಿಗೆ ಹೊರಟು ನಿಂತಾಗ ಲಕ್ಷ್ಮಣನನ್ನು ಜೊತೆಗೆ ಕರೆದೊಯ್ಯಲು ಸಿದ್ಧನಿರಲಿಲ್ಲ. ಆತನನ್ನು ಜೊತೆಗೆ ಕರೆದೊಯ್ಯಲು ಯಾವ ಕಾರಣವೂ ಇಲ್ಲವೆಂದು ರಾಮನಿಗನಿಸಿತು. ಆತ ಲಕ್ಷ್ಮಣನಿಗೆಂದ — "ಲಕ್ಷ್ಮಣಾ, ನಾನು ಕಾಡಿಗೆ ಹೋಗುತ್ತೇನೆ. ತಂದೆಯ ಆಜ್ಞೆಯಾಗಿದೆ. ನೀನು ಮನೆಯಲ್ಲೇ ಇರು. ನನ್ನೊಂದಿಗೆ ಬಂದು ಮೊದಲೇ ದುಃಖ ದಲ್ಲಿರುವ ತಂದೆತಾಯಿಗಳಿಗೆ ಇನ್ನೂ ವ್ಯಸನವನ್ನುಂಟುಮಾಡಬೇಡ. ತಂದೆತಾಯಿಗಳನ್ನೂ ಪ್ರಜೆಗಳನ್ನೂ ಸೇವಿಸು. ಅವರ ಹತ್ತಿರ ನೀನಿದ್ದಲ್ಲಿ ನನಗಾವ ಚಿಂತೆಯೂ ಬಾರದು. ನನ್ನ ಪ್ರತಿನಿಧಿಯಾಗಿ ನೀನಿಲ್ಲಿರು. ಪ್ರಜೆಗಳ ಪಾಲನೆ ಮಾಡು. ನಾನು ಕಾಡಿನಲ್ಲಿ ಎಂದರೆ ಸಂಕಟಗಳ ಮಧ್ಯದಲ್ಲಿ ಪ್ರವೇಶಿಸುತ್ತಿಲ್ಲ. ಋಷಿಗಳ ಆಶ್ರಮಕ್ಕೆ ಹೋಗುತ್ತಿದೇನೆ." ಈ ಬಗೆಯಾಗಿ ಲಕ್ಷ್ಮಣನಿಗೆ ರಾಮ ಸಮಾಧಾನ ಹೇಳಿದ. ಆದರೆ ಲಕ್ಷ್ಮಣ ರಾಮನ ಎಲ್ಲ ಹೇಳಿಕೆಗಳನ್ನೂ ಒಂದೇ ಏಟಿಗೇ ಒಂದೇ ಶಬ್ದದಿಂದ ಅಳಿಸಿಬಿಟ್ಟ. ಒಂದು ಹೊಡೆತ, ಎರಡು ತುಂಡು ಮಾಡಿಬಿಟ್ಟ. ಆ ಚಿತ್ರ ವನ್ನು ತುಂಬಾ ಸುಂದರವಾಗಿ ರಚಿಸಿದಾರೆ ತುಲಸೀದಾಸರು. ಲಕ್ಷ್ಮಣ ಹೇಳಿದ: "ಒಳ್ಳೆ ನಿಗಮ ನೀತಿಗಳನ್ನು ನೀವು ನನಗೆ ಹೇಳಿಕೊಡುತ್ತಿದೀರಿ. ವಾಸ್ತವವಾಗಿ ಈ ನೀತಿಗಳನ್ನು ನಾನು ಪಾಲಿಸಬೇಕು. ಆದರೆ ಈ

ರಾಜನೀತಿಯ ಭಾರವನ್ನು ನಾನು ತಡೆದುಕೊಳ್ಳಲಾರೆ. ನಿಮ್ಮ ಪ್ರತಿನಿಧಿಯಾಗಲು ಅಗತ್ಯವಾದ ಶಕ್ತಿ ನನ್ನಲ್ಲಿಲ್ಲ. ನಾನಿನ್ನೂ ಮಗು. ಮೇರು-ಮಂದರದ ಭಾರವನ್ನು ಹಂಸಪಕ್ಷಿ ಹೊರಬಲ್ಲದೆ? ರಾಮಚಂದ್ರಾ, ನಿನ್ನ ಪ್ರೀತಿಯಿಂದ ಬೆಳೆದವನು ನಾನು. ನಿಮ್ಮ ಆ ರಾಜನೀತಿಯನ್ನು ಇನ್ನಾರಿಗಾದರೂ ಹೇಳಿ. ನಾನು ಇನ್ನೂ ಹುಡುಗ "* ಎಂದು ಹೇಳಿ ಲಕ್ಷ್ಮಣ ಆ ವಿಷಯವನ್ನೆಲ್ಲ ಒಮ್ಮೆಲೆ ನಿಲ್ಲಿಸಿಬಿಟ್ಟ.

ನೀರನ್ನು ಬಿಟ್ಟು ಬದುಕಲಾರದು ಮೀನು. ಲಕ್ಷ್ಮಣನದೂ ಹಾಗೇ. ರಾಮನನ್ನು ಬಿಟ್ಟು ದೂರವಿರಲು ಆತ ಸಮರ್ಥನಾಗಿಲ್ಲ. ಆತನ ರೋಮ ರೋಮದಲ್ಲಿ ಸಹಾನುಭೂತಿ ತುಂಬಿತ್ತು. ರಾಮ ನಿದ್ರಿಸಿದಾಗ ತಾನು ಜಾಗರಣೆ ಮಾಡಬೇಕು, ಅವನ ಸೇವೆ ಮಾಡಬೇಕು – ಅದರಲ್ಲೇ ಸಂತೋಷ ಲಕ್ಷ್ಮಣನಿಗೆ. ನಮ್ಮ ಕಣ್ಣಿಗೆ ಯಾರಾದರೂ ಕಲ್ಲು ಬೀಸಿದರೆ ಕೈ ಮುಂದಾಗಿ ತಾನು ಅದರ ಏಟು ತಿನ್ನುತ್ತದೆ. ಲಕ್ಷ್ಮಣ ಹೀಗೆ ರಾಮನ ಕೈಯಾಗಿದ್ದ. ರಾಮನಿಗೆ ಬೀಳುವ ಏಟನ್ನು ಮೊದಲು ಲಕ್ಷ್ಮಣನೇ ಎದುರಿಸುತ್ತಿದ್ದ. ಲಕ್ಷ್ಮಣನಿಗೆ ತುಲಸೀದಾಸರು ಒಂದು ಸುಂದರ ದೃಷ್ಟಾಂತ ಕೊಟ್ಟಿದಾರೆ. ಮೇಲೆ ಹಾರಾಡುತ್ತಿರುತ್ತದೆ ಬಾವುಟ ಎಲ್ಲ ಹಾಡುಗಳೂ ಆ ಬಾವುಟವನ್ನು ಕುರಿತು, ಅದರ ಬಣ್ಣ, ಅದರ ಆಕಾರಗಳನ್ನು ಕುರಿತು. ಅದನ್ನು ಹಿಡಿದು ಸೆಟೆದು ನಿಂತಿರುವ ಆ ಕೋಲು-ಯಾರು ನೆನೆದಾರು ಅದನ್ನು? ಹಾರುತಲಿದ್ದ ರಾಮನ ಯಶೋಧ್ವಜಕ್ಕೆ ಲಕ್ಷ್ಮಣ ದಂಡದಂತೆ ಆಧಾರವಾಗಿ ನಿಂತಿದ್ದ. ನೆಟ್ಟಗೆ ನಿಡು ನಿಂತಿದ್ದ. ದಂಡ ಮಣಿಯದು. ಅದರಂತೆ ರಾಮನ ಯಶಸ್ಸು ಮೆರೆಯಲೆಂದು ಲಕ್ಷ್ಮಣ ಎಂದೂ ಮಣಿಯಲಿಲ್ಲ. ಕೀರ್ತಿ ಯಾರದು? ರಾಮನದೇ! ಜಗತ್ತಿಗೆ ಕಾಣುವುದು ಬಾವುಟ, ದಂಡವಲ್ಲ. ಕಳಶ ಕಾಣುತ್ತದೆ, ತಳಹದಿಯಲ್ಲ. ರಾಮನ ಕೀರ್ತಿ ಮೆರೆಯುತ್ತಲೇ ಇದೆ. ಲಕ್ಷ್ಮಣನ ಸುಳಿವೇ ಇಲ್ಲ. ಹದಿನಾಲ್ಕು ವರ್ಷಗಳ ಕಾಲ ಮಣಿಯಲಿಲ್ಲ ಈ ದಂಡ.

---

* ದೀನ್ಹಿ ಮೋಹಿಸಿಖ ನೀಕಿ ಗುಂಸಾಯೀ । ಲಾಗಿ ಅಗಮ ಅಪನೀ ಕದರಾಈ ॥
ನರವರಧೀರ ಧರಮ-ಧುರ-ಧಾರೀ । ನಿಗಮನೀತಿಕೇ ತೇ ಅಧಿಕಾರೀ ॥
ಮೈ ಸಿಸ ಪ್ರಭು-ಸನೇಹ-ಪ್ರತಿಪಾಲಾ । ಮಂದರ ಮೇರು ಕಿ ಲೋಹಿ ಮರಾಲಾ ॥

ತಾನು ಸ್ವತಃ ಹಿಂದೆ ಇದ್ದುಕೊಂಡು ರಾಮನ ಕೀರ್ತಿಧ್ವಜವನ್ನು ಮೆರೆಸಿದ. ತೀರಾ ಕಷ್ಟದ ಕೆಲಸಗಳನ್ನು ಸಹ ಲಕ್ಷ್ಮಣನಿಂದಲೇ ಮಾಡಿಸಿಕೊಂಡ ರಾಮ. ಸೀತೆಯನ್ನು ಕಾಡಿಗಟ್ಟುವ ಕೆಲಸವೂ ಅವನ ಮೇಲೇ ಬಿತ್ತು. ಬಡಪಾಯಿ ಲಕ್ಷ್ಮಣ ಅತ್ತಿಗೆಯನ್ನು ಕಳುಹಿಸಿ ಬಂದ. ಆತನಿಗೆ ಅಸ್ತಿತ್ವ ವೆನ್ನುವುದೇ ಉಳಿಯಲಿಲ್ಲ. ಆತ ರಾಮನ ಕಣ್ಣಿನಂತಿದ್ದ, ಕೈಗಳಂತಿದ್ದ, ಮನಸ್ಸಿನಂತಿದ್ದ. ಸಮುದ್ರದಲ್ಲಿ ಹೊಳೆ ಮಿಲನವಾಗುವಂತೆ ಲಕ್ಷ್ಮಣನ ಸೇವೆ ರಾಮನಲ್ಲಿ ಮಿಲನವಾಗಿತ್ತು. ಆತ ರಾಮನ ನೆರಳಿನಂತಾಗಿದ್ದ. ಲಕ್ಷ್ಮಣನದು ಸಗುಣ ಭಕ್ತಿ.

ಭರತನದು ನಿರ್ಗುಣ ಭಕ್ತಿ. ತುಲಸೀದಾಸರು ಅವನನ್ನು ಚೆನ್ನಾಗಿ ಚಿತ್ರಿಸಿದಾರೆ. ರಾಮ ವನಕ್ಕೆ ಹೋದಾಗ ಭರತ ಅಯೋಧ್ಯೆಯಲ್ಲಿರಲಿಲ್ಲ. ಆತ ಅಲ್ಲಿಗೆ ಬಂದಾಗ ದಶರಥ ಕಾಲವಾಗಿದ್ದ. ನೀನೇ ರಾಜ್ಯಭಾರ ವಹಿಸು ಎಂದು ವಶಿಷ್ಠ ಗುರು ಭರತನಿಗೆ ಹೇಳಿದರು. ಭರತನಾದರೋ "ನಾನು ರಾಮನನ್ನು ಕಾಣಲೇಬೇಕು" ಎಂದು ಹಟ ಹಿಡಿದ. ರಾಮನ ಭೇಟಿಗಾಗಿ ಅವನ ಜೀವ ತಳಮಳಿಸುತ್ತಿತ್ತು. ಆದರೂ ರಾಜ್ಯದ ವ್ಯವಸ್ಥೆ ಗಾಗಿ ಆತ ಎಚ್ಚರಿಕೆ ವಹಿಸಿದ. ಇದು ರಾಮನ ರಾಜ್ಯ. ಅದರ ವ್ಯವಸ್ಥೆ ನೋಡಿಕೊಳ್ಳುವುದೆಂದರೆ ರಾಮನ ಕೆಲಸವನ್ನೇ ನೋಡಿಕೊಂಡ ಹಾಗೆ. ಅದು ಭರತನ ವಿಚಾರ. ಸಂಪತ್ತೆಲ್ಲವೂ ಸ್ವಾಮಿಯದು. ಅದರ ವ್ಯವಸ್ಥೆ ನೋಡಿಕೊಳ್ಳುವುದು ಮಾತ್ರ ನನ್ನ ಕರ್ತವ್ಯವೆಂದು ಆತ ತಿಳಿದು ಕೊಂಡ. ಲಕ್ಷ್ಮಣನಂತೆ ರಾಜ್ಯಭಾರದಿಂದ ದೂರವಾಗುವುದು ಭರತನಿಗೆ ಸಾಧ್ಯವಿರಲಿಲ್ಲ. ಆತನ ಸ್ಥಿತಿಯಿದ್ದುದು ಹಾಗೆ. ರಾಮನ ಬಗ್ಗೆ ಭಕ್ತಿ ಎಂದರೆ ರಾಮನ ಕೆಲಸ ಮಾಡುವುದು ; ಇಲ್ಲವಾದರೆ ಅಂಥ ಭಕ್ತಿಯಿಂದ ಏನು ಪ್ರಯೋಜನ ? ಎಲ್ಲಾ ವ್ಯವಸ್ಥೆಮಾಡಿ ರಾಮನ ಭೇಟಿಗಾಗಿ ಭರತ ವನಕ್ಕೆ ಬಂದಿದಾನೆ. "ರಾಮ, ನಿನ್ನ ರಾಜ್ಯವಿದು. ನೀನು ..........." ಎಂದು ಆತ ಹೇಳುತ್ತಿದ್ದ ಹಾಗೆ ರಾಮ "ಭರತ, ನೀನೇ ರಾಜ್ಯ ನಡಸು" ಎನ್ನುತ್ತಾನೆ. ಭರತ ಸಂಕೋಚನಿಂದ ಎದ್ದುನಿಂತು ಹೇಳುತ್ತಾನೆ : "ನಿನ್ನ ಅಪ್ಪಣೆ ಹೇಗೋ ಹಾಗೆ." ರಾಮ ಹೇಳಿದುದೇ ಆತನಿಗೆ ಪ್ರಮಾಣ. ಎಲ್ಲವನ್ನೂ ಆಗ ರಾಮನಿಗೆ ಒಪ್ಪಿಸಿದ. ಹಿಂದಿರುಗಿ ಬಂದು ರಾಜ್ಯಭಾರ

ವಹಿಸಿಕೊಂಡ. ಆದರೂ ಸ್ವಾರಸ್ಯ ನೋಡಿ. ಆತ ಇದ್ದುದು ಅಯೋಧ್ಯೆ ಯಿಂದ ಎರಡು ಮೈಲು ದೂರದಲ್ಲಿ. ತಪಸ್ಸು ಮಾಡುತ್ತ ತಪಸ್ವಿಯಾಗಿ ದ್ದರೂ ರಾಜ್ಯಭಾರ ನೋಡಿಕೊಂಡ. ಕಡೆಗೆ ಭರತನನ್ನು ರಾಮ ಕಂಡಾಗ ವನಕ್ಕೆ ಹೋಗಿ ಬಂದ ನಿಜವಾದ ತಪಸ್ವಿ ಯಾರೆಂಬುದನ್ನು ಕಂಡುಹಿಡಿ ಯುವುದು ಕಷ್ಟವಾಗಿತ್ತು. ಇಬ್ಬರ ಮುಖ ಲಕ್ಷಣಗಳ ರೀತಿ ಒಂದೇ. ವಯಸ್ಸಿನಲ್ಲಿ ಮಾತ್ರ ಸ್ವಲ್ಪ ಬದಲಾವಣೆ. ಮುಖದ ಮೇಲಿನ ತಪಸ್ಸಿನ ಕಳೆಯೂ ಒಂದೇ ತರದ್ದು. ಇವರಿಬ್ಬರಲ್ಲಿ ರಾಮ ಯಾರು, ಭರತ ಯಾರು? ಹೇಳುವುದು ಕಷ್ಟವೇ. ಇಂಥದೊಂದು ಚಿತ್ರವನ್ನು ಯಾರಾದರೂ ಬರೆದರೆ ಅದೊಂದು ಅತಿ ಪಾವನ ಚಿತ್ರವಾದೀತು. ಹೀಗೆ ಭರತ ದೇಹದಿಂದ ರಾಮನಿಗೆ ದೂರವಾಗಿದ್ದರೂ ಮನಸ್ಸಿನಿಂದ ಕ್ಷಣಕಾಲವೂ ದೂರವಾಗಿರಲಿಲ್ಲ. ಒಂದು ಕಡೆ ರಾಜ್ಯವನ್ನು ನಡೆಸುತ್ತಿದ್ದರೂ ಆತ ಮನಸ್ಸಿನಿಂದ ರಾಮನ ಹತ್ತಿರ ಇದ್ದ. ನಿರ್ಗುಣದಲ್ಲಿ ಸಗುಣಭಕ್ತಿ ಪೂರ್ಣ ವಾಗಿ ತುಂಬಿರುತ್ತದೆ. ಅಲ್ಲಿ ಹೇಗೆ ವಿಯೋಗದ ಮಾತು ಆಡುವುದು? ಅಂತೆಯೇ ಭರತನಿಗೆ ಅದು ವಿಯೋಗವೆನಿಸಲಿಲ್ಲ. ಆತ ದೇವರ ಕೆಲಸದಲ್ಲಿ ತೊಡಗಿಕೊಂಡಿದ್ದ.

'ರಾಮನ ನಾಮ, ರಾಮನ ಭಕ್ತಿ, ರಾಮನ ಉಪಾಸನೆ ಎಂಬ ಮಾತು ನಮಗೇನೂ ಅರ್ಥವಾಗದು ; ನಾವು ದೇವರ ಕೆಲಸ ಮಾಡೋಣ' ಎಂದು ಇಂದಿನ ಯುವಕರು ಹೇಳುತ್ತಾರೆ. ದೇವರ ಕೆಲಸ ಮಾಡುವ ರೀತಿಯನ್ನು ಭರತ ತೋರಿಸಿಕೊಡುತ್ತಿದಾನೆ. ಕೆಲಸದಲ್ಲಿ ತೊಡಗಿಕೊಂಡು ಭರತ ವಿಯೋಗವನ್ನು ನುಂಗಿದಾನೆ. ದೇವರ ಕೆಲಸ ಮಾಡುವಾಗ ಆತನ ವಿಯೋಗದ ನೆನಪು ಸಹ ಬರದಿರುವುದು ಬೇರೆ. ದೇವರ ಪರಿಚಯವೆ ಇಲ್ಲದವನ ಮಾತು ಬೇರೆ. ದೇವರ ಕೆಲಸ ಮಾಡುತ್ತ ಸಂಯಮಪೂರ್ಣ ವಾದ ಬಾಳು ನಡೆಸುವುದು ತುಂಬ ದುರ್ಲಭ. ನಿರ್ಗುಣ ಕಾರ್ಯ ಮಾಡುತ್ತಿರುವುದು ಭರತನ ವೃತ್ತಿಯಾಗಿದ್ದರೂ ಅದಕ್ಕೆ ಸಗುಣದ ಆಧಾರ ತಪ್ಪಲಿಲ್ಲ. 'ರಾಮಾ, ನಿಮ್ಮ ಮಾತು ನನಗೆ ಶಿರೋಧಾರ್ಯ. ನೀವು ಹೇಳುವುದರಲ್ಲಿ ನನಗಾವ ಸಂಶಯವೂ ಇಲ್ಲ' ಎಂದು ಹೇಳಿ ಭರತ ಹೊರಟು ನಿಂತರೂ ಸಹ ಮತ್ತೆ ಹಿಂದಿರುಗಿ 'ರಾಮಚಂದ್ರಾ, ನನಗೆ

ಸಮಾಧಾನವಾಗುವುದಿಲ್ಲ. ಏನೋ ಕಳವಳ' ಎಂದ. ರಾಮ ಅದನ್ನು ಗುರುತಿಸಿದ. 'ಹಾಗಾದರೆ ಈ ಪಾದುಕೆ ತೆಗೆದುಕೊ' ಎಂದ. ಕಡೆಯಲ್ಲೂ ಸಗುಣದ ಬಗ್ಗೆ ಆದರ ಉಳಿಯಿತು. ಕೊನೆಗೆ ನಿರ್ಗುಣ ವನ್ನು ಸಗುಣ ಕರಗಿಸಿತು. ಲಕ್ಷ್ಮಣನಿಗೆ ಆ ಪಾದುಕೆಗಳಿಂದ ತೃಪ್ತಿ ಯಾಗುವಂತಿರಲಿಲ್ಲ. ಆತನ ದೃಷ್ಟಿಯಲ್ಲಿ ಅದು ಹಾಲಿನ ಆಸೆಯನ್ನು ಮಜ್ಜಿಗೆಯಿಂದ ಪೂರೈಸಿಕೊಂಡ ಹಾಗಾಗುತ್ತಿತ್ತು. ಭರತನ ಭೂಮಿಕೆ ಬೇರೆ ರೀತಿ. ಹೊರಗಡೆ ದೂರವಾಗಿದ್ದುಕೊಂಡು ಆತ ಕರ್ಮ ಮಾಡು ತ್ತಿದ್ದರೂ ಮನಸ್ಸಿನಿಂದ ರಾಮಮಯವಾಗಿದ್ದ. ಕರ್ತವ್ಯ ಮಾಡುವುದರಲ್ಲಿ ರಾಮಭಕ್ತಿಯನ್ನು ಕಾಣುತ್ತಿದ್ದರೂ ಆತನಿಗೂ ಪಾದುಕೆ ಅಗತ್ಯ ಎನಿಸಿತು. ಪಾದುಕೆಗಳಿಲ್ಲದೆ ರಾಜ್ಯಮಾಡಲಾರದಾದ. ಆ ಪಾದುಕೆಗಳ ಆಜ್ಞೆಯೆಂದು ಆತ ಕರ್ತವ್ಯ ಮಾಡತೊಡಗಿದ. ಲಕ್ಷ್ಮಣ ರಾಮನ ಭಕ್ತ. ಹಾಗೇ ಭರತನೂ ಭಕ್ತ. ತೋರಿಕೆಗೆ ಇಬ್ಬರ ಭೂಮಿಕೆಗಳೂ ಬೇರೆ ಬೇರೆ. ಭರತ ಕರ್ತವ್ಯ ನಿಷ್ಠ, ತತ್ವನಿಷ್ಠ. ಆದರೂ ಅವನ ತತ್ವನಿಷ್ಠೆ ಪಾದುಕೆಗಳ ಆಶ್ರಯ ಪಡೆಯಬೇಕಾಯಿತು.

## ೬೪. ಎರಡೂ ಪರಸ್ಪರ ಪೂರಕ: ಕೃಷ್ಣಚರಿತೆಯ ದೃಷ್ಟಾಂತ

ಹರಿಭಕ್ತಿಯ ಆರ್ದ್ರತೆ ಅಗತ್ಯ. ಅಂತೆಯೇ ಅರ್ಜುನನಿಗೂ ಕೂಡ ಭಗವಂತ 'ಮಯ್ಯಾಸಕ್ತ ಮನಾಃ ಪಾರ್ಥ' – ಅರ್ಜುನಾ ನನ್ನಲ್ಲಿ ಆಸಕ್ತ ನಾಗಿರು, ನನ್ನಲ್ಲಿ ಶ್ರದ್ಧೆಯನ್ನಿಡು. ಅನಂತರ ಕರ್ಮ ಮಾಡು – ಎಂದು ಮತ್ತೆ ಮತ್ತೆ ಹೇಳಿದಾನೆ. ಯಾವ ಭಗವದ್ಗೀತೆಗೆ ಆಸಕ್ತಿ ಎಂಬ ಶಬ್ದವೇ ರುಚಿಸದೋ, ಹೊಳೆಯದೋ; ಯಾವ ಗೀತೆಯಲ್ಲಿ ಅನಾಸಕ್ತನಾಗಿ ಕರ್ಮ ಮಾಡು, ರಾಗದ್ವೇಷ ಬಿಟ್ಟು ಕರ್ಮಮಾಡು, ನಿರಪೇಕ್ಷ ಕರ್ಮ ಮಾಡು ಎಂದು ಮತ್ತೆ ಮತ್ತೆ ಹೇಳಿದೆಯೋ; ಎಲ್ಲಿ ಅನಾಸಕ್ತಿ – ನಿಃಸಂಗಗಳ ಪಲ್ಲವಿ ಮತ್ತೆ ಮತ್ತೆ ಕೇಳಿಬರುತ್ತದೆಯೋ ಅದೇ ಭಗವದ್ಗೀತೆ ಹೇಳುತ್ತದೆ: 'ಅರ್ಜುನಾ, ನನ್ನ ಆಸಕ್ತಿಯನ್ನಿಟ್ಟುಕೊ.' ಆದರೆ ಭಗವಂತನ ಆಸಕ್ತಿ ಯೆಂದರೆ ಅತಿ ಉಚ್ಚ ವಸ್ತುವೆಂಬುದನ್ನು ನಾವು ಗಮನದಲ್ಲಿಟ್ಟುಕೊಳ್ಳ ಬೇಕು. ಅದೇನು ಪಾರ್ಥಿವ ವಸ್ತುಗಳ ಆಸಕ್ತಿಯೇ? ನಿರ್ಗುಣ ಸಗುಣಗಳು

ಪರಸ್ಪರ ಬೆರೆತುಕೊಂಡಿವೆ. ನಿರ್ಗುಣದ ಆಧಾರವನ್ನು ಸಗುಣ ಪೂರ್ಣ ವಾಗಿ ಕಡಿದುಹಾಕಲಾರದು. ಸಗುಣದ ಆರ್ದ್ರತೆ ನಿರ್ಗುಣಕ್ಕೆ ಬೇಕೇ ಬೇಕು. ಸದಾ ಕರ್ತವ್ಯಕರ್ಮನಿರತನು ಕರ್ಮರೂಪದ ಪೂಜೆಯಲ್ಲೇ ತೊಡಗಿದ ಹಾಗೆ. ಆ ಪೂಜೆಯ ಜೊತೆಯಲ್ಲೇ ಆರ್ದ್ರತೆಯೂ ಬೇಕು. 'ಮಾಮನುಸ್ಮರ ಯುಧ್ಯ ಚ'— ನನ್ನ ನೆನಪಿಟ್ಟುಕೊಂಡು ಯುದ್ಧಮಾಡು. ಕರ್ಮವೂ ಸ್ವಯಂ ಪೂಜೆಯೆ. ಆದರೂ ಅಂತರಂಗದ ಭಾವ ಜೀವಂತ ವಾಗಿರಬೇಕು. ಕೆಲವು ಹೂ ತಲೆಯ ಮೇಲಿಟ್ಟರೆ ಪೂಜೆಯಾಗಲಿಲ್ಲ. ಅಲ್ಲಿ ಭಾವನೆ ಬೇಕು. ತಲೆಯ ಮೇಲೆ ಹೂ ಇಡುವುದು ಪೂಜೆಯದೊಂದು ರೀತಿ, ಸತ್ಕರ್ಮದಿಂದ ಪೂಜೆ ಸಲ್ಲಿಸುವುದು ಇನ್ನೊಂದು ರೀತಿ. ಇವೆರಡ ರಲ್ಲೂ ಭಾವನೆಯ ಆರ್ದ್ರತೆ ಬೇಕೇ ಬೇಕು. ಹೂ ಏರಿಸಿದಾಗ ಭಾವವಿಲ್ಲ ದಿದ್ದರೆ ಕಲ್ಲಿನ ಮೇಲೆ ಆ ಹೂ ಏರಿಸಿದಂತಾಯಿತು. ಭಾವನೆ ಮುಖ್ಯ ವಸ್ತು. ಸಗುಣ ಮತ್ತು ನಿರ್ಗುಣ, ಕರ್ಮ ಮತ್ತು ಪ್ರೀತಿ, ಜ್ಞಾನ ಮತ್ತು ಭಕ್ತಿ, ಇವೆಲ್ಲವೂ ಏಕರೂಪ. ಇವೆಲ್ಲವುಗಳ ಕೊನೆಯ ಅನುಭವ ವೊಂದೇ.

ಉದ್ಧವ — ಅರ್ಜುನರ ಕತೆಯನ್ನೆ ನೋಡಿ. ರಾಮಾಯಣದಿಂದ ನಾನು ಮಹಾಭಾರತಕ್ಕೆ ಹಾರಿಬಿಟ್ಟೆ. ಹೀಗೆ ಹಾರಲು ನನಗೆ ಅಧಿಕಾರವೂ ಉಂಟು. ರಾಮ — ಕೃಷ್ಣ ಇಬ್ಬರೂ ಒಂದೇ. ಭರತ – ಲಕ್ಷ್ಮಣರಿದ್ದ ಹಾಗೆ ಉದ್ಧವ — ಅರ್ಜುನ. ಕೃಷ್ಣನಿರುವಲ್ಲೆಲ್ಲ ಉದ್ಧವನಿರಲೇಬೇಕು. ಕೃಷ್ಣನ ವಿಯೋಗ ಒಂದು ಕ್ಷಣವೂ ಅವನಿಗೆ ಸಹನವಾಗದು. ಆತ ಕೃಷ್ಣನ ಹತ್ತಿರ ಸದಾ ಸೇವೆ ಸಲ್ಲಿಸುತ್ತಿರಬೇಕು. ಕೃಷ್ಣನಿಲ್ಲವಾದರೆ ಜಗವೆಲ್ಲ ಅವನ ಪಾಲಿಗೆ ಶೂನ್ಯ. ಅರ್ಜುನನೂ ಕೃಷ್ಣನ ಗೆಳೆಯ. ಆದರೆ ಆತ ಇರುವುದು ದೂರದ ದಿಲ್ಲಿಯಲ್ಲಿ. ಅರ್ಜುನ ಕೃಷ್ಣನ ಕೆಲಸ ಮಾಡು ವವನು. ಕೃಷ್ಣ ದ್ವಾರಕೆಯಲ್ಲಿದ್ದರೆ ಈತ ಹಸ್ತಿನಾಪುರದಲ್ಲಿ. ದೇಹ ತ್ಯಜಿಸಬೇಕಾದ ಅಗತ್ಯವೆನಿಸಿದಾಗ ಭಗವಂತ ಉದ್ಧವನಿಗೆಂದ – 'ಉದ್ಧವಾ, ನಾ ಹೊರಟೆ.' ಅದಕ್ಕೆ ಉದ್ಧವ, 'ನನ್ನನ್ನೂ ಸಂಗಡ ಕರೆದುಕೊಂಡು ಹೋಗುವುದಿಲ್ಲವೆ? ಕೂಡಿಯೇ ಹೋಗೋಣ' ಎಂದ. 'ನನಗಿಷ್ಟವಿಲ್ಲ. ಸೂರ್ಯ ತನ್ನ ತೇಜಸ್ಸನ್ನು ಅಗ್ನಿಯಲ್ಲಿಟ್ಟು ಹೋಗುತ್ತಾನೆ. ಹಾಗೇ ನನ್ನ

ಜ್ಯೋತಿಯನ್ನು ನಿನ್ನಲ್ಲಿಟ್ಟು ಹೊರಡುತ್ತೇನೆ' ಎಂದು ಭಗವಂತ ಕಡೆಯ ವ್ಯವಸ್ಥೆಮಾಡಿ ಉದ್ಧವನಿಗೆ ಬುದ್ಧಿ ಹೇಳಿ ಕಳುಹಿಸುತ್ತಾನೆ. ಮುಂದೆ ಉದ್ಧವನಿಗೆ ಭಗವಂತ ನಿಜಧಾಮಕ್ಕೆ ತೆರಳಿದುದು ಮೈತ್ರೇಯ ಋಷಿಯಿಂದ ತಿಳಿಯುತ್ತದೆ. ಆಗ ಅವನ ಮನಸ್ಸಿನ ಮೇಲೆ ಕೊಂಚವೂ ಪರಿಣಾಮವಾಗದು.

ಗುರು ಸತ್ತ, ಶಿಷ್ಯ ಅತ್ತ ಇಬ್ಬರದೂ ಬೋಧೆ ವ್ಯರ್ಥ। *

ಎಂಬ ಹಾಗಲ್ಲ ಇದು. ಇಲ್ಲಿ ವಿಯೋಗದ ಪ್ರಶ್ನೆಯೇ ಇಲ್ಲ. ಆತ ಬಾಳಿನ ಕೊನೆಯವರೆಗೂ ಸಗುಣ ಉಪಾಸನೆಯಲ್ಲಿ ತೊಡಗಿದ್ದ. ಪರಮಾತ್ಮನ ಸನ್ನಿಧಿಯಲ್ಲಿದ್ದ. ಈಗ ಆತನಿಗೆ ನಿರ್ಗುಣದಲ್ಲಿಯೂ ಆನಂದ ವುಂಟಾಗತೊಡಗಿತು. ನಿರ್ಗುಣದ ಮೆಟ್ಟಲನ್ನು ಆತ ಏರಬೇಕಾಯಿತು. ಮುಂದೆ ಸಗುಣ, ಆದರೂ ಅದರ ಹಿಂದೆ ನಿರ್ಗುಣ ಬರಲೇಬೇಕು. ಇಲ್ಲವಾದರೆ ಪೂರ್ಣತ್ವವಿಲ್ಲ.

ಅರ್ಜುನನದು ಇದಕ್ಕೆ ವಿರುದ್ಧ. ಕೃಷ್ಣ ಆತನಿಗೆ ಹೇಳಿದ ಕೆಲಸ ವೇನು? ತಾನು ದೇಹ ತ್ಯಜಿಸಿದನಂತರ ತನ್ನ ಸ್ತ್ರೀಯರನ್ನೆಲ್ಲ ರಕ್ಷಿಸುವುದು. ಅರ್ಜುನ ದಿಲ್ಲಿಯಿಂದ ಬಂದು ದ್ವಾರಕೆಯಲ್ಲಿದ್ದ ಶ್ರೀ ಕೃಷ್ಣನ ಸ್ತ್ರೀಯರನ್ನೆಲ್ಲ ಕರೆದುಕೊಂಡು ಹೊರಟ. ದಾರಿಯಲ್ಲಿ ಹಿಸಾರದ ಬಳಿ ಪಂಜಾಬದಲ್ಲಿನ ಕಳ್ಳರು ಅವನನ್ನು ಸುಲಿದರು. ಆ ಕಾಲದ ಅತಿ ಪ್ರಸಿದ್ಧ ವೀರ, ಏಕಮಾತ್ರ 'ನರ'ನೆಂಬ ಕೀರ್ತಿ ಪಡೆದವ, ಸೋಲನ್ನೇ ಅರಿಯದವ, ಅಂತೆಯೇ 'ಜಯ' ಎಂಬ ಹೆಸರಿನಿಂದ ಖ್ಯಾತನಾದವ, ಪ್ರತ್ಯಕ್ಷ ಶಂಕರನೊಂದಿಗೆ ಕಾದಿ ಅವನನ್ನು ಮಣಿಸಿದವ, ವೀರಾಧಿವೀರ, ಆ ಅರ್ಜುನ ಅಜಮಾರಿನ ಬಳಿ ಕಾಲ್ದೆಗೆದು ಓಡಿ ಉಳಿದುಕೊಂಡ. ಕೃಷ್ಣ ಹೊರಟುಹೋದುದರಿಂದ ಅವನ ಮನಸ್ಸಿನ ಮೇಲೆ ತುಂಬಾ ಪರಿಣಾಮ ವಾಗಿತ್ತು. ಅವನ ಜೀವವೇ ಹೊರಟುಹೋಗಿ ನಿಸ್ತ್ರಾಣ ನಿಷ್ಪ್ರಾಣ ಶರೀರ ಉಳಿದ ಹಾಗಿತ್ತು. ಸಾರಾಂಶವಿಷ್ಟೆ: ಸದಾ ಕರ್ಮನಿರತನಾದ, ಕೃಷ್ಣನಿಂದ ದೂರದಲ್ಲಿದ್ದ, ನಿರ್ಗುಣ ಉಪಾಸಕ ಅರ್ಜುನನಿಗೂ ಕಡೆಗೆ

---

* 'ಮರಕಾ ಗುರೂ, ರಡಕಾ ಚೇಲಾ ದೋಹೀಂಚಾ ಬೋಧವಾಯಾ ಗೇಲಾ।'

ವಿಯೋಗವನ್ನು ಸಹಿಸಲಾಗಲಿಲ್ಲ. ಕಟ್ಟಕಡೆಗೆ ಅವನ ನಿರ್ಗುಣ ಬಾಯಿ ಬಿಟ್ಟಿತು. ಆತನ ಕರ್ಮವೆಲ್ಲ ಮುಗಿದಂತಾಯಿತು. ನಿರ್ಗುಣದ ಅಂತ್ಯದಲ್ಲಿ ಅವನಿಗೆ ಸಗುಣದ ಅನುಭವ ಬಂತು. ಹೀಗೆ ನಿರ್ಗುಣ ದೊಂದಿಗೆ ಸಗುಣ ಬೆರೆಯಬೇಕಾಗುತ್ತದೆ. ಸಗುಣದಲ್ಲಿ ನಿರ್ಗುಣ ಸೇರ ಬೇಕಾಗುತ್ತದೆ. ಒಂದರಿಂದ ಇನ್ನೊಂದಕ್ಕೆ ಪರಿಪೂರ್ಣತೆ ಪ್ರಾಪ್ತ ವಾಗುತ್ತದೆ.

### ೬೫. ಸಗುಣ — ನಿರ್ಗುಣ ಏಕರೂಪ: ಸ್ವಾನುಭವ

ಅಂತೆಯೆ ಸಗುಣ ಉಪಾಸಕ, ನಿರ್ಗುಣ ಉಪಾಸಕರಲ್ಲಿರುವ ಅಂತರ ವೇನೆಂಬುದನ್ನು ಹೇಳಹೊರಟರೆ ಭಾಷೆ ಕುಂಠಿತವಾಗುತ್ತದೆ. ಸಗುಣ, ನಿರ್ಗುಣಗಳೆರಡೂ ಕೊನೆಗೆ ಒಂದೇ ಕಡೆ ಸೇರುತ್ತವೆ. ಭಕ್ತಿಯ ಝರಿ ಮೊದಲು ಸಗುಣದಿಂದ ಹೊರಟರೂ ಕೊನೆಗೆ ನಿರ್ಗುಣವನ್ನೆ ಸೇರುತ್ತದೆ. ಹಿಂದೆ ವೈಕಮ್ ಸತ್ಯಾಗ್ರಹವನ್ನು ನೋಡಲು ನಾ ಹೋಗಿದ್ದೆ. ಮಲಬಾರು ತೀರದಲ್ಲಿ ಶಂಕರಾಚಾರ್ಯರ ಜನ್ಮಸ್ಥಳವಿದೆಯೆಂದು ಭೂಗೋಲದಲ್ಲಿ ಬಂದ ವಿಷಯ ನನಗೆ ನೆನಪಿತ್ತು. ನಾನು ಹೋಗುತ್ತಿದ್ದ ಊರಿನ ಹತ್ತಿರದಲ್ಲೇ ಭಗವಾನ್ ಶಂಕರಾಚಾರ್ಯರ ಊರು ' ಕಾಲಡಿ ' ಇರಬಹುದೆಂದು ತಿಳಿದು, ಜೊತೆಗಿದ್ದ ಮಲಯಾಳಿ ಗೃಹಸ್ಥರನ್ನು ಆ ಬಗ್ಗೆ ಕೇಳಿದೆ. ' ಇಲ್ಲಿಂದ ಹತ್ತು ಹನ್ನೆರಡು ಮೈಲು ದೂರ ಇದೆ ಆ ಊರು. ನೀವು ನೋಡಬೇಕೆ ? ' ಎಂದ ರವರು. ಇಲ್ಲ ಎಂದೆ. ನಾ ಬಂದದ್ದು ಸತ್ಯಾಗ್ರಹಕ್ಕೆ ಹೋಗಲು. ದಾರಿಯಲ್ಲಿ ಬೇರೆ ಕಡೆ ಹೋಗುವುದು ನನಗೆ ಯೋಗ್ಯವೆನಿಸಲಿಲ್ಲ. ಆದುದ ರಿಂದ ಆಗ ನಾನು ಆ ಊರು ನೋಡಲು ಹೋಗಲಿಲ್ಲ. ಅದು ಸರಿ ಎಂದು ಈಗಲೂ ನನಗನಿಸುತ್ತದೆ. ಆದರೆ ಆಗ ರಾತ್ರಿ ಮಲಗಿಕೊಂಡಾಗ ಆ ಕಾಲಡಿ ಗ್ರಾಮ, ಆ ಶಂಕರಾಚಾರ್ಯರ ಮೂರ್ತಿ ಕಣ್ಣೆದುರು ಕಟ್ಟುತ್ತಿತ್ತು. ನಿದ್ದೆ ಬರುತ್ತಿರಲಿಲ್ಲ. ಆ ಅನುಭವ ನನಗೆ ಈಗಲೂ ಹೊಸದಾಗಿ ತೋರು ತ್ತದೆ. ಶಂಕರಾಚಾರ್ಯರ ಜ್ಞಾನದ ಆ ಪ್ರಭಾವ, ಅವರ ಆ ದಿವ್ಯ ಅದ್ವೈತನಿಷ್ಠೆ, ಇದಿರಿಗೆ ಪಸರಿಸಿರುವ ಜಗತ್ತನ್ನೆಲ್ಲ ಕ್ಷುದ್ರಗೊಳಿಸುವ ಅವರ ಆ ಅಲೌಕಿಕ — ಜ್ವಲಂತ ವೈರಾಗ್ಯ, ಅವರ ಗಂಭೀರ ಭಾಷೆ, ಅವರಿಂದ

ನನಗಾದ ಅನಂತ ಉಪಕಾರ, ಈ ಎಲ್ಲ ಕಲ್ಪನೆ ನನ್ನ ಮನಸ್ಸಿನಲ್ಲಿ ತುಂಬು ತ್ತಿದ್ದವು. ಈ ಭಾವನೆಗಳೆಲ್ಲ ರಾತ್ರಿಯಲ್ಲಿ ಪ್ರಕಟವಾಗುತ್ತಿದ್ದವು. ನಿರ್ಗುಣ ದಲ್ಲಿ ಸಗುಣ ಹೇಗೆ ತುಂಬಿಕೊಂಡಿದೆಯೆಂಬುದರ ಅನುಭವ ನನಗಾಗ ಬಂತು. ಪ್ರತ್ಯಕ್ಷ ಭೆಟ್ಟಿಯಲ್ಲಿ ಇಷ್ಟು ಪ್ರೀತಿಯಿರದು. ವಿಶೇಷವಾಗಿ ಪತ್ರ ಬರೆಯುವ ಅಭ್ಯಾಸ ನನಗಿಲ್ಲ. ಆದರೆ ಗೆಳೆಯನೊಬ್ಬನಿಗೆ ಪತ್ರ ಬರೆಯದಿದ್ದಾಗ್ಗ ಒಳಗೊಳಗೇ ನೆನಪಾಗುತ್ತಿರುತ್ತದೆ. ಪತ್ರ ಬರೆಯ ದಿದ್ದರೂ ಮನಸ್ಸಿನಲ್ಲಿ ಸ್ಮರಣೆಯಿರುತ್ತದೆ. ಹೀಗೆ ನಿರ್ಗುಣದಲ್ಲೂ ಸಗುಣ ಗುಪ್ತವಾಗಿ ತುಂಬಿರುತ್ತದೆ. ಸಗುಣ, ನಿರ್ಗುಣಗಳೆರಡೂ ಒಂದೇ ರೂಪದವು. ಪ್ರತ್ಯಕ್ಷ ಮೂರ್ತಿಯೊಂದನ್ನು ಎತ್ತಿಕೊಂಡು ಪೂಜೆ ಮಾಡುವುದು, ಅಂತರಂಗದಲ್ಲಿ ಯಾವಾಗಲೂ ಜಗತ್ಕಲ್ಯಾಣದ ಚಿಂತನೆ ನಡೆದಿದ್ದರೂ ಹೊರಗಡೆ ಪೂಜೆ ಕಾಣಿಸದಿರುವುದು: ಈ ಎರಡು ವಿಚಾರ ಗಳಿಗೂ ಅಷ್ಟೇ ಬೆಲೆ, ಅಷ್ಟೇ ಯೋಗ್ಯತೆ.

## ೬೬. ಸಗುಣ – ನಿರ್ಗುಣ ಬರೀ ದೃಷ್ಟಿಭೇದ, ಅಂತೇ ಭಕ್ತಲಕ್ಷಣವನ್ನು ಜಪಿಸು

ಕೊನೆಗೆ ನಾನು ಹೇಳುವುದಿಷ್ಟೆ: ಸಗುಣ ಯಾವುದು, ನಿರ್ಗುಣ ಯಾವುದು ಎಂಬುದನ್ನು ನಿಖರವಾಗಿ ಹೇಳುವುದೂ ಸುಲಭವಲ್ಲ. ಒಂದು ದೃಷ್ಟಿಯಿಂದ ಸಗುಣವಾದುದು ಇನ್ನೊಂದು ದೃಷ್ಟಿಯಿಂದ ನಿರ್ಗುಣ ವಾಗಿರಲೂ ಸಾಧ್ಯ. ಸಗುಣದ ಸೇವೆ ಮಾಡುವವರು ಒಂದು ಕಲ್ಲು ತೆಗೆದುಕೊಂಡು ಮಾಡುತ್ತಾರೆ. ಆ ಕಲ್ಲಿನಲ್ಲಿ ದೇವರನ್ನು ಕಲ್ಪಿಸಿಕೊಳ್ಳು ತ್ತಾರೆ. ತಾಯಿಯಲ್ಲಿ, ಶರಣರಲ್ಲಿ, ಪ್ರತ್ಯಕ್ಷ ಚೈತನ್ಯ ಪ್ರಕಟವಾಗಿದೆ. ಅಲ್ಲಿ ಜ್ಞಾನ, ಪ್ರೀತಿ, ಆತ್ಮೀಯತೆ ಅರಳಿದೆ. ಅಲ್ಲಿ ಪರಮಾತ್ಮನೆಂದು ಅರಿತು ಪೂಜೆ ನಡೆಯದು. ಅವರ ಸೇವೆ ಮಾಡಬೇಕು. ಅಲ್ಲಿ ಸಗುಣ ಪರಮಾತ್ಮನನ್ನು ಕಾಣಬೇಕು. ಅದನ್ನು ಬಿಟ್ಟು ಕಲ್ಲಿನಲ್ಲಿ ದೇವರನ್ನು ಕಾಣುತ್ತಾರೆ ಶರಣರು! ಕಲ್ಲಿನಲ್ಲಿ ದೇವರನ್ನು ಕಾಣುವುದು ನಿರ್ಗುಣದ ಪರಾಕಾಷ್ಠೆ. ತಂದೆ ತಾಯಿಗಳು, ನೆರೆಹೊರೆ, ಇವರಲ್ಲಿ ಪ್ರೀತಿ ಜ್ಞಾನ ಉಪಕಾರಬುದ್ಧಿ ಕಾಣುತ್ತಿದೆ. ಅಲ್ಲಿ ಈಶ್ವರನನ್ನು ಕಾಣುವುದು ಸುಲಭ.

ಕಲ್ಲಿನಲ್ಲಿ ಕಾಣುವುದು ಕಷ್ಟ. ನರ್ಮದೆಯ ಕಲ್ಲನ್ನು ದೇವರೆಂದು ತಿಳಿಯುತ್ತಾರೆ. ಅದು ನಿರ್ಗುಣ ಪೂಜೆಯಲ್ಲವೊ? ಹೀಗೂ ಅನಿಸುತ್ತದೆ ಒಮ್ಮೊಮ್ಮೆ—ಕಲ್ಲಿನಲ್ಲಿ ದೇವರನ್ನು ಕಾಣದಿದ್ದರೆ ಇನ್ನೆಲ್ಲಿ ಕಾಣಬೇಕು? ದೇವರ ಮೂರ್ತಿಯಾಗಲು ಆ ಕಲ್ಲೇ ಯೋಗ್ಯ. ಅದು ನಿರ್ವಿಕಾರಿ, ಶಾಂತ. ಕತ್ತಲೆಯಿರಲಿ, ಬೆಳಕಿರಲಿ, ಚಳಿಯಿರಲಿ, ಆ ಕಲ್ಲು ಹಾಗೇ ಇರುತ್ತದೆ. ಇಂಥ ಈ ನಿರ್ವಿಕಾರಿ ಕಲ್ಲೇ ಪರಮಾತ್ಮನ ಮೂರ್ತಿಯಾಗಲು ಯೋಗ್ಯ. ತಂದೆ ತಾಯಿ, ನೆರೆಹೊರೆ, ಜನರು ಎಲ್ಲರೂ ವಿಕಾರಮಯರು. ಅವರಲ್ಲಿ ಅಲ್ಪ ಸ್ವಲ್ಪವಾದರೂ ವಿಕಾರವಿರದಿರಲಾರದು. ಆದುದರಿಂದ ಕಲ್ಲಿನ ಪೂಜೆಗಿಂತ ಅವರ ಸೇವೆ ಮಾಡುವುದೇ ಒಂದು ದೃಷ್ಟಿಯಿಂದ ಕಷ್ಟಸಾಧ್ಯ.

ಸಾರಾಂಶ—ಸಗುಣ ನಿರ್ಗುಣಗಳೆರಡೂ ಪರಸ್ಪರ ಪೂರಕ. ಸಗುಣ ಸುಲಭವಾದರೆ ನಿರ್ಗುಣ ಕಠಿನ. ಹಾಗೆ ಸಗುಣವೂ ಕಠಿನ, ನಿರ್ಗುಣವೂ ಸುಲಭ. ಎರಡರಿಂದಲೂ ದೊರೆಯುವ ಧ್ಯೇಯವೊಂದೇ. ಐದನೆಯ ಅಧ್ಯಾಯದಲ್ಲಿ ಹೇಳಿದ ಹಾಗೆ ಇಪ್ಪತ್ನಾಲ್ಕು ತಾಸು ಕರ್ಮ ಮಾಡಿಯೂ ಕೊಂಚವೂ ಕರ್ಮ ಮಾಡದಿರುವ, ಇಪ್ಪತ್ನಾಲ್ಕು ತಾಸು ಕಾಲವೂ ಕರ್ಮವನ್ನೇ ಮಾಡದಿದ್ದರೂ ಎಲ್ಲ ಕರ್ಮಗಳನ್ನು ಮಾಡುವ ಯೋಗಿಯೂ ಸಂನ್ಯಾಸಿಯೂ ಏಕರೂಪಿಯಾಗಿರುವಂತೆಯೇ ಇಲ್ಲೂ. ಸಂನ್ಯಾಸ ಶ್ರೇಷ್ಠವೋ, ಯೋಗ ಶ್ರೇಷ್ಠವೋ ಎಂಬ ಪ್ರಶ್ನೆಗೆ ಉತ್ತರ ಕೊಡುವಾಗ ಭಗವಂತನಿಗೆ ಯೋಚನೆಯುಂಟಾದಂತೆಯೇ ಇಲ್ಲೂ ಆಯಿತು. ಕೊನೆಗೆ ಸೌಲಭ್ಯ, ಕಷ್ಟಗಳನ್ನು ತಾರತಮ್ಯದಿಂದ ಎಣಿಸಿ ಉತ್ತರವಿತ್ತ. ಯೋಗ—ಸಂನ್ಯಾಸ, ಸಗುಣ—ನಿರ್ಗುಣ ಎಲ್ಲವೂ ಒಂದೇ. ಕೊನೆಗೆ ಭಗವಂತ ಹೇಳಿದ—'ಅರ್ಜುನಾ, ನೀನು ಸಗುಣನೇ ಇರು, ನಿರ್ಗುಣನೇ ಇರು. ಭಕ್ತನಾಗಿದ್ದರೆ ಸಾಕು. ಗುಂಡುಕಲ್ಲಾಗಬೇಡ.' ಹೀಗೆ ಹೇಳಿ ಭಗವಂತ ಕೊನೆಯಲ್ಲಿ ಭಕ್ತರ ಲಕ್ಷಣಗಳನ್ನು ವಿವರಿಸಿದಾನೆ. ಅಮೃತ ಮಧುರವಾಗಿದ್ದೀತು. ಆದರೆ ಅದರ ಮಾಧುರ್ಯವನ್ನು ನಾವು ಸವಿದಿಲ್ಲ. ಈ ಲಕ್ಷಣಗಳೆಲ್ಲ ಮಧುರವಾಗಿವೆ. ಇಲ್ಲಿ ಕಲ್ಪನೆಯ ಅಗತ್ಯವಿಲ್ಲ. ಅನುಭವ ಅಗತ್ಯ. ಹನ್ನೆರಡನೆ ಅಧ್ಯಾಯದಲ್ಲಿನ ಈ ಭಕ್ತ ಲಕ್ಷಣಗಳನ್ನು ಸ್ಥಿತಪ್ರಜ್ಞನ

ಲಕ್ಷಣಗಳ ಹಾಗೆ ನಾವು ನಿತ್ಯವೂ ಪಾರಾಯಣ ಮಾಡಬೇಕು. ಮನನ ಮಾಡಬೇಕು. ನಿಧಾನವಾಗಿ ಅವನ್ನು ನಮ್ಮ ಆಚರಣೆಗೆ ತಂದು ಪುಷ್ಟಿ ಪಡೆಯಬೇಕು. ಈ ರೀತಿಯಾಗಿ ನಮ್ಮ ಬಾಳು ಮೆಲ್ಲಮೆಲ್ಲನೆ ಪರಮಾತ್ಮನತ್ತ ಸಾಗಬೇಕು.

ಭಾನುವಾರ,
೧೫-೫-೧೯೬೨.

## ೩೭. ಕರ್ಮಯೋಗಕ್ಕೆ ಉಪಕಾರಕ ದೇಹಾತ್ಮ ಪೃಥಕ್ಕರಣ

ವ್ಯಾಸರು ತಮ್ಮ ಬಾಳಿನ ಸಾರವನ್ನೆಲ್ಲ ಭಗವದ್ಗೀತೆಯಲ್ಲಿ ತುಂಬಿದಾರೆ. ಬೇರೆ ಬರಹವನ್ನು ಅವರು ವಿಸ್ತಾರವಾಗಿ ಸಾಕಷ್ಟು ಬರೆದಿದಾರೆ. ಮಹಾಭಾರತದ ಸಂಹಿತೆಗಳೇ ಲಕ್ಷ, ಒಂದೂಕಾಲು ಲಕ್ಷದಷ್ಟು. ಸಂಸ್ಕೃತದಲ್ಲಿ 'ವ್ಯಾಸ' ಎಂಬ ಶಬ್ದಕ್ಕೇ ವಿಸ್ತಾರ ಎಂಬ ಅರ್ಥವೇ ಬಂದುಬಿಟ್ಟಿದೆ. ಆದರೆ ಗೀತೆಯಲ್ಲಿ ವಿಸ್ತಾರದ ಕಡೆ ಅವರ ಲಕ್ಷ್ಯವಿಲ್ಲ. ಭೂಮಿತಿಯಲ್ಲಿ ಯೂಕ್ಲಿಡ್ ಕೆಲವು ತತ್ವ ಹೇಳಿದಹಾಗೆ, ಕೆಲವು ಸಿದ್ಧಾಂತ ಮಂಡಿಸಿದ ಹಾಗೆ, ಬಾಳಿಗೆ ಉಪಯುಕ್ತವಾದ ಹಲವು ತತ್ವಗಳನ್ನು ವ್ಯಾಸರು ಗೀತೆಯಲ್ಲಿ ವಿವರಿಸಿದಾರೆ ಇಲ್ಲಿ ವಿಶೇಷ ಚರ್ಚೆಯಿಲ್ಲ. ಉದ್ದುದ್ದ ವಿಸ್ತಾರವಿಲ್ಲ. ಗೀತೆಯಲ್ಲಿ ಹೇಳಿದ ವಿಷಯಗಳನ್ನು ಪ್ರತಿಯೊಬ್ಬರೂ ತಮ್ಮ ತಮ್ಮ ಬಾಳಿನಲ್ಲಿ ಉಪಯೋಗಿಸಿಕೊಳ್ಳಲು ಸಾಧ್ಯವಿರುವುದೇ ಇದಕ್ಕೆ ಕಾರಣ. ಈ ಬಗೆಯ ಉಪಯೋಗಕ್ಕಾಗಿಯೇ ಅವನ್ನು ಗೀತೆಯಲ್ಲಿ ಹೇಳಿರುವುದು. ಬಾಳಿಗೆ ಉಪಯುಕ್ತವಾದ ವಿಷಯಗಳನ್ನು ಮಾತ್ರ ಅಲ್ಲಿ ವಿವರಿಸಿದೆ. ಆ ವಿವರಣೆಯ ಉದ್ದೇಶ್ಯ ಅಷ್ಟೆ. ಅಂತೆಯೆ ವ್ಯಾಸರು ಸ್ವಲ್ಪದರಲ್ಲಿಯೆ ತತ್ವಗಳನ್ನು ವಿವರಿಸಿ ಸಂತುಷ್ಟರಾಗಿದಾರೆ. ಅವರ ಈ ಸಂತೋಷದಿಂದ, ಸತ್ಯ ಹಾಗೂ ಆತ್ಮಾನುಭವಗಳ ಬಗೆಗೆ ಅವರಿಗಿದ್ದ ಅಪಾರ ನಂಬಿಕೆ ಕಂಡು ಬರುತ್ತದೆ. ಸತ್ಯವಾದ ವಸ್ತುವನ್ನು ಮಂಡಿಸಲು ಹೆಚ್ಚು ಯುಕ್ತಿಯನ್ನು ಉಪಯೋಗಿಸಬೇಕಾದ ಅಗತ್ಯವೇನೂ ಇಲ್ಲ.

ಗೀತೆಯನ್ನು ನಾವು ನೋಡಿದೇವೆ. ಬಾಳಿನಲ್ಲಿ ಸಹಾಯದ ಅಗತ್ಯ ವಿದ್ದಾಗಲೆಲ್ಲ ಗೀತೆಯಿಂದ ಅದು ದೊರೆಯುವಂತಾಗಬೇಕೆಂಬುದೇ ಅದರ ಉದ್ದೇಶ್ಯ. ಇಂಥ ನೆರವು ನಮಗೆ ಯಾವಾಗಲೂ ದೊರೆಯಲು ಸಾಧ್ಯ. ಬಾಳಿಗೆ ಉಪಯುಕ್ತವಾದ ಶಾಸ್ತ್ರ ಗೀತೆ; ಅಂತೆಯೆ ಅದರಲ್ಲಿ ಸ್ವಧರ್ಮಕ್ಕೆ ಅಷ್ಟು ಮಹತ್ವ. ಸ್ವಧರ್ಮಾಚರಣೆ ಬಾಳಿನ ಮುಖ್ಯ ತಳಹದಿ. ಅದರ ಮೇಲೇ ಕಟ್ಟಡವೆಲ್ಲ ನಿಲ್ಲಬೇಕು. ಈ ತಳಹದಿ ಭದ್ರವಾಗಿದ್ದಷ್ಟೂ ಕಟ್ಟಡ ತಡೆದು ನಿಂತೀತು. ಈ ಸ್ವಧರ್ಮಾಚರಣೆ 'ಕರ್ಮ' ಎನ್ನುತ್ತದೆ ಗೀತೆ.

ಸಾಕು, ಬಂದೇಬಿಡುತ್ತಾನೆ. ಸೊಂಟದ ಮೇಲೆ ಕೈಯಿಟ್ಟುಕೊಂಡು ಭೀಮಾತೀರದಲ್ಲಿ ಆತ ಸಜ್ಜಾಗಿ ನಿಂತಿದಾನೆ.

ಕೈಯೆತ್ತಿ ನಿಂತ, ಕಾಪಾಡಲೆಂತ *

ಇತ್ಯಾದಿಯಾಗಿ ತುಕಾರಾಮಾದಿಗಳು ವರ್ಣಿಸಿದಾರೆ. ಮೂಗು ತೆರೆದಿದ್ದರೆ ಸಾಕು, ಗಾಳಿ ಒಳಗೆ ಸೇರುತ್ತದೆ. ಬಾಗಿಲು ಕೊಂಚ ತೆರೆದಿದ್ದರೆ ಸಾಕು, ಬೆಳಕು ಒಳಗೆ ಬರುತ್ತದೆ. ಗಾಳಿ ಬೆಳಕುಗಳ ದೃಷ್ಟಾಂತವೂ ಅಪೂರ್ಣ. ಪರಮಾತ್ಮ ಅವಕ್ಕಿಂತ ಹೆಚ್ಚು ಸಮೀಪಸ್ಥ, ಹೆಚ್ಚು ಉತ್ಸುಕ. ಆತ 'ಉಪದ್ರಷ್ಟಾ' 'ಅನುಮಂತಾ' ಆಗಿ ಉಳಿಯದೆ, 'ಭರ್ತಾ' ಎಂದರೆ ಎಲ್ಲ ರೀತಿಯಲ್ಲೂ ಸಹಾಯಮಾಡುವವನಾಗುತ್ತಾನೆ. ಮನಸ್ಸಿನ ಕೊಳೆಯನ್ನು ತೊಳೆವಾಗ ನಾವು ಅಗತಿಕರಾಗಿ "ನನ್ನ ನಾಡಿ ನಿನ್ನ ಕೈಯೊಳಗೆ, ಕಾಯೊ ದೊರೆಯೆ" ಎನ್ನುತ್ತೇವೆ. "ನೀನೊಬ್ಬನೇ ನೆರವುಗಾರ, ನಿನ್ನ ಆಸರೆಯೇ ನನ್ನ ಸಾರ" ಎಂದು ಪ್ರಾರ್ಥಿಸುತ್ತೇವೆ. ಇಂಥ ಪ್ರಾರ್ಥನೆಯನ್ನಾಲಿಸಿಯೂ ದೂರ ನಿಂತಾನೇ ಆ ದಯಾಘನ? ಭಕ್ತನ ಸಹಾಯಕ ಆ ಪರಮಾತ್ಮ, ಕೊರತೆಗಳನ್ನು ಪೂರಯಿಸುವ ಆ ಪರಮಾತ್ಮ ಮುಂದೆ ಬರುತ್ತಾನೆ. ಆಗ ಆತ ರೋಹಿದಾಸನ ಚರ್ಮವನ್ನು ತೊಳೆದಾನು, ಸಜ್ಜನ ಕಸಾಯಿಯ ಮಾಂಸ ಮಾರಿಯಾನು, ಕಬೀರನ ಸೇಲೆ ನೇಯ್ದಾನು. ಜನಾಬಾಯಿಗೆ ಬೀಸಲು ನೆರವಾದಾನು.

ಪರಮಾತ್ಮನ ಕೃಪೆಯ ಪ್ರಸಾದದಿಂದ ಕರ್ಮಕ್ಕೆ ಫಲ ದೊರೆತರೂ ಅದನ್ನು ತಾನು ತೆಗೆದುಕೊಳ್ಳದೆ ದೇವರಿಗೇ ಅರ್ಪಿಸಬೇಕೆಂಬುದು ಮುಂದಿನ ಮೆಟ್ಟಲು. 'ನಿನ್ನ ಫಲವನ್ನು ನೀನೇ ತೆಗೆದುಕೋ' ಎಂದು ಜೀವ ದೇವರಿಗೆ ಹೇಳುತ್ತದೆ. ದೇವರು ಹಾಲು ಕುಡಿಯಲೇಬೇಕೆಂದು ಹಟಹಿಡಿದ ನಾಮದೇವ. ಅದರಲ್ಲಿ ತುಂಬಾ ಸ್ವಾರಸ್ಯವುಂಟು. ಕರ್ಮಫಲರೂಪವಾದ ಎಲ್ಲ ಹಾಲನ್ನೂ ನಾಮದೇವ ದೇವರಿಗೆ ಅರ್ಪಿಸತಕ್ಕವ. ಆ ಬಗೆಯ ಬಾಳಿನ ಸರ್ವ ಸಂಪತ್ತನ್ನೂ ಎಲ್ಲ ಗಳಿಕೆಯನ್ನೂ ಯಾರ ಕೃಪೆಯಿಂದ ಅದು ಲಭಿಸಿತೋ ಅವರಿಗೇ ಅರ್ಪಿಸಬೇಕು. ಧರ್ಮರಾಯ

---

* ಉಭಾರೂನಿ ಬಾಹೇ। ವಿರೋ ಪಾಲವೀತ ಆಹೇ॥

ಸ್ವರ್ಗದಲ್ಲಿ ಕಾಲಿಡಬೇಕು; ಅವನ ಜೊತೆಯಲ್ಲಿ ಒಂದು ನಾಯಿ ಇತ್ತು. ಆದಕ್ಕೆ ಸ್ವರ್ಗದಲ್ಲಿ ಪ್ರವೇಶವಿಲ್ಲ ಎಂದರು. ಇಡೀ ಜೀವನದಲ್ಲಿ ತಾನು ಗಳಿಸಿದ ಸರ್ವ ಭಾಗ್ಯವನ್ನೂ ಧರ್ಮರಾಯ ಒಂದೇ ಗಳಿಗೆಯಲ್ಲಿ ತ್ಯಾಗ ಮಾಡಿದ. ಅದೇ ರೀತಿ ಸಾಧಕ ತಾನು ಗಳಿಸಿದ ಸರ್ವ ಫಲವನ್ನೂ ಈಶ್ವರಾರ್ಪಣ ಮಾಡುತ್ತಾನೆ. ಉಪದ್ರಷ್ಟಾ, ಅನುಮಂತಾ, ಭರ್ತಾ ಎಂಬ ರೂಪಗಳಲ್ಲಿ ಪ್ರತೀತನಾಗುವ ಪರಮಾತ್ಮ ಈಗ ಭೋಕ್ತನಾಗುತ್ತಾನೆ. ಶರೀರದಲ್ಲಿದ್ದು ಆ ಪರಮಾತ್ಮನೇ ಭೋಗವನ್ನು ಭೋಗಿಸುತ್ತಿರುವನೆಂಬ ಭೂಮಿಕೆಗೆ ಏರುತ್ತದೆ ಜೀವ.

ಇದರ ಮುಂದಿನ ಮೆಟ್ಟಲು, ಸಂಕಲ್ಪ ಮಾಡುವುದನ್ನು ನಿಲ್ಲಿಸುವುದು. ಕರ್ಮದಲ್ಲಿ ಮೂರು ಮೆಟ್ಟಲು – ಸಂಕಲ್ಪ ಮಾಡುತ್ತೇವೆ, ಅನಂತರ ಕೆಲಸ ಮಾಡುತ್ತೇವೆ. ಕೊನೆಗೆ ಫಲ ದೊರೆಯುತ್ತದೆ. ಪ್ರಭುವಿನ ನೆರವಿನಿಂದ ಮಾಡಿದ ಕರ್ಮಕ್ಕಾಗಿ ದೊರೆತ ಫಲವನ್ನು ಅವನಿಗೇ ಅರ್ಪಿಸಿಯಾಯಿತು. ಕರ್ಮ ಮಾಡುವಾತನೂ ಪರಮಾತ್ಮ, ಅದರ ಫಲವನ್ನುಣ್ಣುವಾತನೂ ಪರಮಾತ್ಮ. ಇನ್ನು ಆ ಕರ್ಮದ ಸಂಕಲ್ಪ ಮಾಡುವಾತನೂ ಪರಮಾತ್ಮನೇ ಆಗಲಿ. ಕರ್ಮದ ಆದಿಮಧ್ಯಾಂತದವರೆಗೂ ಪರಮಾತ್ಮನೇ ಇರಲಿ. ಜ್ಞಾನದೇವರು ಹೇಳುತ್ತಾರೆ: ‘ ತೋಟಗಾರ ಎಲ್ಲಿಗೆ ನೀರು ಒಯ್ಯಬೇಕೋ ಅಲ್ಲಿಗೆ ಅದು ಹೋಗುತ್ತದೆ; ಆತನ ಪ್ರೀತಿಯು ಹೂಗಿಡಗಳನ್ನೂ ಹಣ್ಣಿನ ಗಿಡಗಳನ್ನೂ ಬೆಳೆಸುತ್ತದೆ. ಹಾಗೆಯೆ ನನ್ನಿಂದ ಏನು ಆಗಬೇಕೋ ಆತನೇ ನಿರ್ಧರಿಸಲಿ.’ ನನ್ನ ಮನದ ಎಲ್ಲ ಸಂಕಲ್ಪಗಳ ಹೊಣೆಯೂ ಆತನದೇ. ಕುದುರೆಯ ಮೇಲೆ ನಾನು ಭಾರ ಹೊತ್ತುಕೊಳ್ಳಬೇಕೆ? ಅದೂ ಕುದುರೆಯ ಬೆನ್ನ ಮೇಲಿರಲಿ. ನನ್ನ ತಲೆಯ ಮೇಲೆ ಅದನ್ನಿಟ್ಟುಕೊಂಡರೂ ಸಹ ಅದರ ಭಾರ ಹೊರುವುದು ಕುದುರೆಯೆ ಅಲ್ಲವೆ? ಆದುದರಿಂದ ಎಲ್ಲ ಭಾರವೂ ಅದರ ಬೆನ್ನಮೇಲೇ ಇರಲಿ. ಹೀಗೆ ಬಾಳಿನ ಎಲ್ಲ ಓಡಾಟ – ಅಲೆದಾಟ, ಕುಣಿದಾಟ – ಹಾರಾಟ, ಎಲ್ಲವನ್ನೂ ಮಾಡುವವನು ಕಡೆಗೆ ಪರಮೇಶ್ವರನೇ. ನನ್ನ ಬಾಳಿನ “ ಮಹೇಶ್ವರ ” ಆತ. ಈ ರೀತಿ ವಿಕಾಸವಾಗುತ್ತ ಬಂದ ಹಾಗೆ ಬಾಳೆಲ್ಲವೂ ಈಶ್ವರಮಯವಾದೀತು. ಉಳಿ

ಯುವುದು ಈ ದೇಹದ ಪರದೆ ಮಾತ್ರ. ಅದೂ ಹಾರಿಹೋದಾಗ ಜೀವ, ಶಿವ, ಆತ್ಮ - ಪರಮಾತ್ಮಗಳ ಐಕ್ಯವಾಗುತ್ತದೆ. ಹೀಗೆ —

“ ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ”

ಈ ಸ್ವರೂಪದಲ್ಲಿ ಪರಮಾತ್ಮನ ಅನುಭವವನ್ನು ಉತ್ತರೋತ್ತರ ಹೆಚ್ಚು ಪಡೆಯಬೇಕು. ದೇವರು ಮೊದಲು ತಟಸ್ಥನಾಗಿದ್ದು ನೋಡುತ್ತಾನೆ. ನೈತಿಕ ಜೀವನಕ್ಕಾರಂಭವಾಗಿ ಸತ್ಕರ್ಮಗಳಿಗೆ ಮೊದಲಾದಾಗ ‘ಶಾಬಾಸ್’ ಎನ್ನುತ್ತಾನೆ. ಚಿತ್ತದ ಸೂಕ್ಷ್ಮ ಕೊಳೆಯನ್ನು ತೊಳೆದುಹಾಕಲು ತನ್ನ ಪ್ರಯತ್ನ ಸಾಲದೆ ಭಕ್ತ ಕರೆದಾಗ, ಆ ಅನಾಥನಾಥ ಸಹಾಯಕ್ಕಾಗಿ ಧಾವಿಸುತ್ತಾನೆ.* ಅನಂತರ, ಫಲವನ್ನು ಆತನಿಗೇ ಅರ್ಪಿಸಿ, ಅವನನ್ನು ಭೋಕ್ತನನ್ನಾಗಿ ಮಾಡಬೇಕು. ಕೊನೆಗೆ ಸಂಕಲ್ಪಗಳೆಲ್ಲವನ್ನೂ ಅವನ ಮೇಲೇ ಬಿಟ್ಟು ಜೀವನವೆಲ್ಲವನ್ನೂ ಹರಿಮಯವನ್ನಾಗಿ ಮಾಡಬೇಕು. ಮಾನವನ ಅಂತಿಮ ಸಾಧ್ಯ ಇದು. ಕರ್ಮಯೋಗ, ಭಕ್ತಿಯೋಗಗಳೆಂಬ ರೆಕ್ಕೆಗಳಿಂದ ಹಾರುತ್ತ ಸಾಧಕ ಈ ಕೊನೆಯ ಮೆಟ್ಟಲನ್ನು ಏರಬೇಕು.

## ೭೪. ನಮ್ರತೆ, ನಿರ್ದಂಭ ಆದಿ ಮೂಲಭೂತ ಜ್ಞಾನಸಾಧನಗಳು

ಇದೆಲ್ಲವನ್ನೂ ಸಾಧಿಸಲು ನೈತಿಕ ಸಾಧನೆಯ ದೃಢವಾದ ತಳಹದಿ ಬೇಕು. ಸತ್ಯ, ಅಸತ್ಯಗಳನ್ನು ವಿವೇಚಿಸಿ ಸತ್ಯವನ್ನೇ ಸ್ವೀಕರಿಸಬೇಕು. ಸಾರಾಸಾರವನ್ನು ಕಂಡು ಸಾರವನ್ನು ತೆಗೆದುಕೊಳ್ಳಬೇಕು. ಚಿಪ್ಪನ್ನು ಬಿಸುಟು ಮುತ್ತನ್ನು ತೆಗೆದುಕೊಳ್ಳಬೇಕು. ಹೀಗೆ ಬಾಳನ್ನು ಆರಂಭಿಸಬೇಕು. ಆತ್ಮಪ್ರಯತ್ನ, ಪರಮೇಶ್ವರ ಕೃಪೆಗಳ ಬಲದಿಂದ ಮೇಲಕ್ಕೇರಬೇಕು. ದೇಹದಿಂದ ಆತ್ಮವನ್ನು ಬೇರ್ಪಡಿಸಲು ನಮಗೆ ತಿಳಿದಿದ್ದಲ್ಲಿ ಈ ಸಾಧನೆಗೆ ತುಂಬ ಸಹಾಯವಾದೀತು. ಈ ಸಂದರ್ಭದಲ್ಲಿ ಕ್ರಿಸ್ತನ ಬಲಿದಾನದ ನೆನಪು ಬರುತ್ತದೆ. ಆತನಿಗೆ ಬಲವಾಗಿ ಮೊಳೆ ಜಡಿದಿದ್ದರು. ಆ ಸಮಯದಲ್ಲಿ ಕ್ರಿಸ್ತನ ಬಾಯಿಂದ ‘ದೇವರೆ, ಇವರು ಹೀಗೇಕೆ ಪೀಡಿಸುತ್ತಾರೆ’ ಎಂಬ ಮಾತು ಹೊರಟವು. ಒಡನೆಯೆ ಆತ ಸವರಿಸಿಕೊಂಡು

* ‘ಮಾಳಿಯೇ ಜೇ ಉತೇಂ ನೇಲೇ। ತೇ ಉತೇಂ ನಿವಾತ ಚಿ ಗೇಲೇ
ತಯಾ ಪಾಣಿಯಾ ಐಸೇ ಕೇಲೇ। ಹೋ ಆವೇ ಗಾ’

'ದೇವರೆ, ನಿನ್ನ ಇಷ್ಟದಂತೆ ಆಗಲಿ. ಅವರನ್ನು ಕ್ಷಮಿಸು. ಅವರಿಗೆ ತಾವು ಏನು ಮಾಡುತ್ತಿದೇವೆಂಬುದೇ ಗೊತ್ತಿಲ್ಲ' ಎಂದ. ಕ್ರಿಸ್ತನ ಈ ಉದಾಹರಣೆ ಬಹಳ ಸ್ವಾರಸ್ಯಭರಿತವಾಗಿದೆ. ದೇಹದಿಂದ ಆತ್ಮವನ್ನು ಎಷ್ಟುಮಟ್ಟಿಗೆ ಬೇರ್ಪಡಿಸಬಹುದೋ ಇದು ತಿಳಿಸುತ್ತದೆ. ಎಲ್ಲಿಯುವರೆಗೆ ನಮ್ಮ ಗುರಿಯಿರಬೇಕು, ಇರಲು ಸಾಧ್ಯ, ಎಂಬುದು ಕ್ರಿಸ್ತನ ದೃಷ್ಟಾಂತ ದಿಂದ ತಿಳಿಯುತ್ತದೆ. ಮರದ ತೊಗಟೆಯಂತೆ ಮೈ ಕಳಚಿ ಬೀಳುತ್ತದೆ ಎಂಬವರೆಗೆ ನಮ್ಮ ಮಟ್ಟ ಏರಿತು. ಆತ್ಮನನ್ನು ದೇಹದಿಂದ ಬೇರ್ಪಡಿ ಸುವ ವಿಚಾರ ಬಂದಾಗಲೆಲ್ಲ ನನಗೆ ಕ್ರಿಸ್ತನ ಚಿತ್ರ ಕಣ್ಣಿಗೆ ಕಟ್ಟಿದಂತಾಗು ತ್ತದೆ. ಮೈಯಿಂದ ಆತ್ಮ ಬೇರೆಯಾಗುವುದು, ಮೈಯ ಸಂಬಂಧವನ್ನು ಕಡಿದುಕೊಳ್ಳುವುದು ಕ್ರಿಸ್ತನ ಜೀವನದಲ್ಲಿ ಕಾಣಬರುತ್ತದೆ.

ದೇಹ – ಆತ್ಮಗಳ ಈ ಪೃಥಕ್ಕರಣ ಸತ್ಯ – ಅಸತ್ಯದ ವಿವೇಕವಿಲ್ಲದೆ ಸಾಧ್ಯವಿಲ್ಲ. ಈ ವಿವೇಕ, ತಿಳಿವು ಮೈಗೂಡಬೇಕು. ಜ್ಞಾನ ಎಂದರೆ ತಿಳಿವುದು ಎಂದು ಅರ್ಥಮಾಡುತ್ತೇವೆ. ಆದರೆ ಬುದ್ಧಿಯಿಂದ ತಿಳಿ ಯುವುದು ಒಂದು ತಿಳಿವು ಅಲ್ಲ. ಬಾಯೊಳಗೆ ಹಿಡಿಕೂಳು ತುರುಕಿದ ಮಾತ್ರಕ್ಕೆ ಹೊಟ್ಟೆ ತುಂಬದು. ಅದನ್ನು ಅಗಿದು ಗಂಟಲೊಳಗೆ ಇಳಿಸ ಬೇಕು. ಹೊಟ್ಟೆಯಲ್ಲಿ ಅದು ಜೀರ್ಣವಾಗಿ ರಕ್ತವಾಗಿ ಇಡೀ ಶರೀರಕ್ಕೆ ಪುಷ್ಟಿಯಾಗಬೇಕು. ಇಷ್ಟೆಲ್ಲ ಆದಾಗ ಅದು ನಿಜವಾಗಿ ಊಟ. ಅದೇ ರೀತಿ ಬರೀ ಬುದ್ಧಿಯಿಂದ ತಿಳಿದರೆ ಸಾಲದು. ತಿಳಿದು ಬಾಳಿನಲ್ಲಿ ಒಡ ಗೂಡಿಸಬೇಕು, ಎದೆಯಲ್ಲಿ ನೆಡಬೇಕು. ಕೈಕಾಲು ಕಣ್ಣಿನೊಳಗೆ ಜ್ಞಾನ ಚಿಮ್ಮಬೇಕು. ಜ್ಞಾನೇಂದ್ರಿಯಗಳೂ ಕರ್ಮೇಂದ್ರಿಯಗಳೂ ವಿಚಾರ ಪೂರ್ವಕವಾಗಿಯೆ ಕರ್ಮಮಾಡುತ್ತಿರುವಂತೆ ಆಗಬೇಕು. ಎಂತಲೇ ಹದಿಮೂರನೆ ಅಧ್ಯಾಯದಲ್ಲಿ ಭಗವಂತ ಜ್ಞಾನದ ವ್ಯಾಖ್ಯಾನವನ್ನು ಅಂದವಾಗಿ ಮಾಡಿದಾನೆ. ಸ್ಥಿತಪ್ರಜ್ಞನ ಲಕ್ಷಣಗಳಿದ್ದಂತೆಯೆ ಜ್ಞಾನದ ಲಕ್ಷಣಗಳೂ.

'ನಮ್ರತಾ ದಂಭಶೂನ್ಯತ್ವಂ ಅಹಿಂಸಾ ಋಜುತಾ ಕ್ಷಮಾ'

ಇತ್ಯಾದಿ ಇಪ್ಪತ್ತು ಗುಣಗಳ ಪಟ್ಟಿಯನ್ನು ಭಗವಂತ ಕೊಟ್ಟಿದಾನೆ. ಈ ಗುಣಗಳೇ ಜ್ಞಾನ ಎಂದು ಹೇಳಿ ಸುಮ್ಮನಾಗಲಿಲ್ಲ. ಇದಕ್ಕೆ ವಿರುದ್ಧ

ವಾದುದೆಲ್ಲ ಅಜ್ಞಾನ ಎಂದ, ನಿಚ್ಚಳವಾಗಿ. ಜ್ಞಾನಕ್ಕೆ ಸಾಧನೆ ಎಂದು ಹೇಳಿರುವುದೂ ಜ್ಞಾನವೆ. 'ಸದ್ಗುಣವೇ ಜ್ಞಾನ' ಎಂದ ಸಾಕ್ರಟೀಸ್. ಸಾಧನೆ, ಸಾಧ್ಯ ಎರಡೂ ಒಂದೇ.

ಗೀತೆಯೊಳಗಣ ಈ ಇಪ್ಪತ್ತು ಗುಣಗಳನ್ನು ಜ್ಞಾನದೇವರು ಹದಿನೆಂಟು ಮಾಡಿದಾರೆ. ಅವರು ಈ ಸಾಧನೆಯನ್ನು ಬಹಳ ಕಳಕಳಿ ಯಿಂದ ವರ್ಣಿಸಿದಾರೆ. ಈ ಸಾಧನೆ, ಈ ಗುಣಗಳ ಬಗ್ಗೆ ಗೀತೆಯಲ್ಲಿ ಐದೇ ಶ್ಲೋಕ ಇವೆ. ಆದರೆ ಜ್ಞಾನದೇವರು ಈ ಐದು ಶ್ಲೋಕಗಳನ್ನು ವಿಸ್ತರಿಸಿ ಏಳುನೂರು ಪದ್ಯಗಳನ್ನು ಬರೆದಿದಾರೆ. ಸಮಾಜದಲ್ಲಿ ಸದ್ಗುಣದ ವಿಕಾಸವಾಗಲಿ, ಸಮಾಜದಲ್ಲಿ ಸತ್ಯರೂಪಿ ಪರಮಾತ್ಮನ ಅರಿವು ಮೂಡಲಿ ಎಂದು ಜ್ಞಾನದೇವರಿಗೆ ತಳಮಳ. ಈ ವರ್ಣನೆಯಲ್ಲಿ ಅವರು ತಮ್ಮ ಸರ್ವ ಅನುಭವವನ್ನೂ ಹರಿಯಿಸಿದಾರೆ. ಇದು ಮರಾಠಿ ಮಾತಾಡುವವರಿಗೆ ಅವರು ಮಾಡಿದ ಅನಂತ ಉಪಕಾರ. ಜ್ಞಾನದೇವರ ರೋಮರೋಮದಲ್ಲಿ ಈ ಗುಣ ತುಂಬಿತ್ತು. ಕೋಣವನ್ನು ಹೊಡೆದರೆ ಆ ಏಟಿಗೆ ಅವರ ಮೈಮೇಲೆ ಬಾಸುಂಡೆ ಎದ್ದಿತು. ಭೂತಮಾತ್ರದ ಬಗ್ಗೆ ಅವರಿಗೆ ಅಷ್ಟು ಕಳವಳ. ಅಂಥ ಕಾರುಣ್ಯಪೂರ್ಣಹೃದಯದಿಂದ ಜ್ಞಾನ ದೇವರು ಜ್ಞಾನೇಶ್ವರಿಯನ್ನು ಹೊರಗೆಡವಿದರು. ಅದನ್ನು ಓದಿ ಮನನ ಮಾಡಬೇಕು. ಒಳಗೆ ನೆಲೆಗೊಳಿಸಬೇಕು. ಜ್ಞಾನದೇವರ ಸವಿನುಡಿ ನನಗೆ ಸವಿಯಲು ದೊರೆಯಿತು. ನಾನು ಧನ್ಯ. ಜ್ಞಾನದೇವರ ಸವಿನುಡಿ ನನ್ನ ನಾಲಗೆಯಲ್ಲಿ ನೆಲೆಸಲೆಂದು ನನಗೆ ಪುನರ್ಜನ್ಮ ಪ್ರಾಪ್ತವಾದರೂ ಧನ್ಯನೆಂದೇನು. ಇರಲಿ. ಉತ್ತರೋತ್ತರ ವಿಕಾಸಮಾಡಿಕೊಳ್ಳುತ್ತ, ಆತ್ಮದಿಂದ ದೇಹವನ್ನು ಬೇರೆ ಮಾಡುತ್ತ, ಎಲ್ಲರೂ ತಮ್ಮ ಇಡೀ ಬಾಳನ್ನು ಪರಮೇಶ್ವರಮಯವಾಗಿ ಮಾಡುವ ಪ್ರಯತ್ನ ಮಾಡಬೇಕು.

ಭಾನುವಾರ,
೨೨-೫-೧೯೩೨.

## ೭೫. ಪ್ರಕೃತಿಯ ವಿಮರ್ಶೆ

ತಮ್ಮದಿರೆ, ಒಂದು ಅರ್ಥದಲ್ಲಿ ಇದು ಹದಿಮೂರನೆ ಅಧ್ಯಾಯಕ್ಕೆ ಪೂರಕ ಅಧ್ಯಾಯ. ಆತ್ಮಕ್ಕೆ ನಿಜವಾಗಿ ಮಾಡಬೇಕಾದ್ದೇನೂ ಇಲ್ಲ. ಆತ್ಮವು ಸ್ವಯಂಪೂರ್ಣ. ಅದರ ಗತಿ ಸ್ವಾಭಾವಿಕವಾಗಿಯೇ ಊರ್ಧ್ವ ಗಾಮಿ. ಆದರೂ ಯಾವುದಾದರೂ ಪದಾರ್ಥಕ್ಕೆ ಭಾರವಾದ ವಸ್ತುವನ್ನು ತಳುಕು ಹಾಕಿದರೆ ಇದರ ತೂಕಕ್ಕೆ ಅದು ಕೆಳಕ್ಕೆ ಜಗ್ಗಿ ಬಾರದೆ? ಅದೇ ರೀತಿ, ಈ ದೇಹದ ಭಾರ ಆತ್ಮವನ್ನು ಕೆಳಕ್ಕೆ ಎಳೆಯುತ್ತಾ ಇರುತ್ತದೆ. ಹಿಂದಿನ ಅಧ್ಯಾಯದಲ್ಲಿ ನಾವು ನೋಡಿದೇವೆ. ಯಾವ ಬಗೆಯ ಉಪಾಯ ವಾದರೂ ಸರಿಯೆ; ದೇಹವನ್ನೂ ಆತ್ಮವನ್ನೂ ಪೃಥಕ್ಕಾಗಿ, ಬೇರೆ ಬೇರೆ ಯಾಗಿ ಮಾಡಲು ಸಾಧ್ಯವಾದರೆ ಅದು ಪ್ರಗತಿಗೆ ದಾರಿಯಾಗುತ್ತದೆ. ಈ ಕೆಲಸ ಬಹಳ ಕಷ್ಟ, ಕಠಿನ. ಆದರೆ ಅದರ ಫಲ ಮಾತ್ರ ಹೆಚ್ಚಿನದು. ಆತ್ಮದ ಕಾಲಿನಿಂದ ದೇಹದ ಬೇಡಿಯನ್ನು ನಾವು ಕಳಚಿಹಾಕಿದುದೇ ಆದರೆ, ಅತಿಶಯ ಆನಂದ ಲಭಿಸುತ್ತದೆ. ಆಗ ಮನುಷ್ಯನಿಗೆ ದೇಹದ ದುಃಖದಿಂದ ದುಃಖವಾಗದು, ಅವನು ಸ್ವತಂತ್ರನಾಗುತ್ತಾನೆ. ದೇಹ ವೆಂಬ ವಸ್ತುವೊಂದನ್ನು ಮನುಷ್ಯ ಗೆದ್ದನೋ, ಮತ್ತಾವುದು ತಾನೆ ಅವನ ಮೇಲೆ ಅಧಿಕಾರ ಮಾಡೀತು? ತನ್ನನ್ನು ತಾನು ಆಳಬಲ್ಲವನು ಇಡೀ ವಿಶ್ವವನ್ನೇ ಆಳಬಲ್ಲ. ಆತ್ಮದ ಮೇಲೆ ದೇಹದ ದಬ್ಬಾಳಿಕೆಯನ್ನು ತೊಡೆದು ಹಾಕಿ. ದೇಹದ ಸುಖ–ದುಃಖ ಪರಕೀಯ, ಪರದೇಶಿ. ಸುಖ–ದುಃಖಕ್ಕೂ ಆತ್ಮಕ್ಕೂ ಹುಲ್ಲುಕಡ್ಡಿಯಷ್ಟೂ ಸಂಬಂಧವಿಲ್ಲ.

ಈ ಸುಖ–ದುಃಖವನ್ನು ಎಷ್ಟುಮಟ್ಟಿಗೆ ಬೇರೆಗೊಳಿಸಬಹುದೋ ಯೇಸುಕ್ರಿಸ್ತನ ಉದಾಹರಣೆ ಕೊಟ್ಟು ಮೊದಲೇ ಹೇಳಿದೇನೆ. ದೇಹ ಹರಿದು ಕಳಚಿ ಬೀಳುತ್ತಿದ್ದಾಗಲೂ ಎಷ್ಟು ಆನಂದಮಯವಾಗಿ ಪ್ರಶಾಂತ ವಾಗಿ ಇರಬಹುದು ಎಂಬುದನ್ನು ಕ್ರಿಸ್ತ ತೋರಿಸಿದ, ದೇಹವನ್ನು ಆತ್ಮ ದಿಂದ ಬೇರೆ ಮಾಡುವುದು ಒಂದು ಕಡೆ ವಿವೇಕದ ಕೆಲಸವಾದರೆ,

ಮತ್ತೊಂದು ಕಡೆ ನಿಗ್ರಹದ ಕೆಲಸವೂ ಹೌದು. 'ವಿವೇಕ ಸಹಿತ ವೈರಾಗ್ಯದ ಬಲ' ಎಂದು ತುಕಾರಾಮರು ಹೇಳಿದಾರೆ. ವಿವೇಕ, ವೈರಾಗ್ಯ ಎರಡೂ ಬೇಕು. ವೈರಾಗ್ಯವೆಂದರೆ ಒಂದು ಬಗೆಯ ನಿಗ್ರಹ, ತಿತಿಕ್ಷೆ. ಈ ಹದಿನಾಲ್ಕನೆ ಅಧ್ಯಾಯದಲ್ಲಿ ನಿಗ್ರಹದ ದಿಶೆಯನ್ನು ತೋರಲಾಗಿದೆ. ದೋಣಿಯನ್ನು ನೀರಿನಲ್ಲಿ ಮುನ್ನಡೆಸುವ ಕೆಲಸ ಹುಟ್ಟಿನದು. ಆದರೆ ದಿಕ್ಕು ತೋರುವ ಕೆಲಸ ಚುಕ್ಕಾಣಿಯದು. ದೋಣಿಯನ್ನು ನಡೆಸಲು ಹುಟ್ಟೂ ಬೇಕು, ಚುಕ್ಕಾಣಿಯೂ ಬೇಕು ಅದರಂತೆ ದೇಹದ ಸುಖ–ದುಃಖದತ್ತಣಿಂದ ಆತ್ಮವನ್ನು ಬೇರೆ ಮಾಡುವ ಕೆಲಸಕ್ಕೆ ವಿವೇಕ, ನಿಗ್ರಹ ಎರಡೂ ಬೇಕು.

ದೇಹದ ಪ್ರಕೃತಿಯನ್ನು ಪರಿಶೀಲಿಸಿ ವೈದ್ಯ ಉಪಚಾರವನ್ನು ಸೂಚಿಸುತ್ತಾನೆ. ಹದಿನಾಲ್ಕನೆ ಅಧ್ಯಾಯದಲ್ಲಿ ಭಗವಂತ ಸರ್ವ ಪ್ರಕೃತಿಯನ್ನೂ ಪರಿಶೀಲಿಸಿ ಪೃಥಕ್ಕರಣಮಾಡಿ, ಯಾವ ರೋಗ ಹಿಡಿದಿದೆ ಎಂಬುದನ್ನು ತೋರಿಸಿದಾನೆ. ಇಲ್ಲಿ ಪ್ರಕೃತಿಯನ್ನು ಸ್ಪಷ್ಟವಾಗಿ ವಿಭಾಗ ಮಾಡಲಾಗಿದೆ. ವಿಭಾಗಿಸುವ ಭೇದೋಪಾಯ ರಾಜನೀತಿಶಾಸ್ತ್ರದಲ್ಲಿ ಬಹಳ ಮುಖ್ಯ ಸೂತ್ರ. ಇದಿರು ನಿಂತ ಶತ್ರುಸಮೂಹದಲ್ಲಿ ಭಾಗ–ಭೇದ ಮಾಡಲು ಸಾಧ್ಯವಾದರೆ ಶತ್ರುವನ್ನು ಕೆಳಗೆ ಬೀಳಿಸಿದಂತೆಯೇ. ಭಗವಾನ್ ಶ್ರೀ ಕೃಷ್ಣ ಇಲ್ಲಿ ಅದನ್ನೇ ಮಾಡಿದಾನೆ.

ನನ್ನ, ನಿಮ್ಮ, ಸಮಸ್ತ ಪ್ರಾಣಿಗಳ, ಸಕಲ ಚರಾಚರಗಳ ಪ್ರಕೃತಿಯಲ್ಲೂ ಮೂರು ಗುಣಗಳಿವೆ. ಆಯುರ್ವೇದದಲ್ಲಿ ಕಫ, ವಾತ, ಪಿತ್ತಗಳಿದ್ದಂತೆ ಪ್ರಕೃತಿಯಲ್ಲಿ ಸತ್ತ್ವ ರಜ, ತಮ ಎಂದು ಮೂರು ಗುಣಗಳು ತುಂಬಿವೆ. ಇರುವುದೆಲ್ಲವೂ ಈ ಮೂರು ವಸ್ತುಗಳ ಮಸಾಲೆಯೆ. ಒಂದೆಡೆ ಹೆಚ್ಚು, ಒಂದೆಡೆ ಕಡಮೆ; ಇಷ್ಟೇ ವ್ಯತ್ಯಾಸ. ಈ ಮೂರರಿಂದ ಆತ್ಮವನ್ನು ಎಷ್ಟೆಷ್ಟು ದೂರ ಇಟ್ಟರೆ ಅಷ್ಟಷ್ಟುಮಟ್ಟಿಗೆ ದೇಹದಿಂದ ಆತ್ಮವನ್ನು ದೂರವಿಡಲು ಸಾಧ್ಯ. ದೇಹದಿಂದ ಆತ್ಮವನ್ನು ಬೇರೆ ಮಾಡುವುದು ಎಂದರೆ ಈ ಮೂರು ಗುಣಗಳನ್ನು ಪರೀಕ್ಷಿಸಿ, ಅವನ್ನು ಗೆಲ್ಲುವುದು. ನಿಗ್ರಹದಿಂದ ಒಂದೊಂದು ವಸ್ತುವನ್ನೆ ಸೋಲಿಸುತ್ತ ಸೋಲಿಸುತ್ತ ಮುಖ್ಯ ವಸ್ತುವಿನ ಬಳಿಗೆ ಹೋಗಿ ಸೇರಬೇಕು.

## ೭೬. ತಮೋಗುಣ : ಅದರ ಉಪಾಯ : ಶರೀರಶ್ರಮ

ಮೊದಲು ತಮೋಗುಣವನ್ನು ನೋಡೋಣ. ಈಗಿನ ಸಮಾಜ ಸ್ಥಿತಿಯಲ್ಲಿ ತಮೋಗುಣದ ಶ್ರುತಿಗೆಟ್ಟ ಪರಿಣಾಮವೆ ಅತ್ಯಧಿಕವಾಗಿ ಕಾಣ ಬರುತ್ತದೆ. ತಮೋಗುಣದ ಮುಖ್ಯ ಪರಿಣಾಮ – ಸೋಮಾರಿತನ; ಅದರಿಂದ ನಿದ್ದೆ, ಪ್ರಮಾದ. ಈ ಮೂರನ್ನು ಗೆಲ್ಲಲು ಸಾಧ್ಯವಾದರೆ ತಮೋಗುಣವನ್ನು ಗೆದ್ದಂತೆ. ತಮೋಗುಣದ ಈ ಮೂರು ಬಗೆಗಳಲ್ಲಿ ಮೈಗಳ್ಳತನವೇ ಬಹಳ ಭಯಾನಕ. ಉತ್ತಮೋತ್ತಮ ಮನುಷ್ಯರು ಕೂಡ ಸೋಮಾರಿತನದಿಂದ ಭ್ರಷ್ಟರಾಗುತ್ತಾರೆ. ಸಮಾಜದ ಸಮಸ್ತ ಸುಖ ಶಾಂತಿಯನ್ನೂ ನಿರ್ನಾಮ ಮಾಡುವ ರಿಪು ಇದು. ಎಳಕರಿಂದ ಮುದುಕರ ವರೆಗೆ ಎಲ್ಲರನ್ನೂ ಹಾಳುಮಾಡುತ್ತದೆ. ಈ ಹಗೆ ಎಲ್ಲೆಲ್ಲೂ ವ್ಯಾಪಿಸಿದೆ. ನಮ್ಮನ್ನು ನುಂಗಲು ಹೊಂಚುಹಾಕಿ ಕುಳಿತಿದೆ. ಎಳ್ಳಿನ ಮೊನೆಯಷ್ಟು ಸಂದು ಸಿಕ್ಕಿತೋ ನುಗ್ಗಿತೇ ಒಳಗೆ! ಒಂದು ತುತ್ತು ಹೆಚ್ಚಾಗಿ ತಿಂದಿರೋ, ಶತ್ರು ಗಂಟಲೊಳಗೆ ಇಳಿದ. ಕೊಂಚ ಹೆಚ್ಚು ನಿದ್ದೆ ಮಾಡಿದಿರೋ ಸೋಮಾರಿತನ ಕಣ್ಣೊಳಗೇ ಹುಟ್ಟಿಬರುತ್ತದೆ. ಈ ಆಲಸ್ಯ ಗುಣ ಹೋಗುವವರೆಗೆ ಎಲ್ಲವೂ ವ್ಯರ್ಥ. ಆದರೆ ಸೋಮಾರಿತನವೆಂದರೆ ಎಲ್ಲರಿಗೂ ಆಸೆ. ಬೇಗ ಬೇಗ ಕೆಲಸಮಾಡಿ ಒಂದೇ ಸಲ ಹೆಚ್ಚು ಹಣ ಸಂಪಾದಿಸುವುದೆಂದರೆ ಆಮೇಲೆ ವಿಶ್ರಾಂತಿ ದೊರೆತೀತೆಂಬ ಆಸೆಯೇ ತಾನೆ? ವಿಶೇಷವಾಗಿ ಹಣ ಸಿಕ್ಕಬೇಕು ಎಂದರೆ ಆಮೇಲಿನ ಸೋಮಾರಿತನಕ್ಕೆ ಸರ್ವಸಿದ್ಧತೆ ಮಾಡಿಕೊಂಡಂತೆ! ಮುಪ್ಪಿನಲ್ಲಿ ನಮಗೆ ವಿಶ್ರಾಂತಿ ಬೇಕು ಎಂದು ನಾವೆಲ್ಲರೂ ತಿಳಿದಿದೇವೆ. ಇದು ತಪ್ಪು ತಿಳುವಳಿಕೆ. ನೀವು ಸರಿಯಾಗಿ ನಡೆದುಕೊಂಡರೆ ಮುಪ್ಪಿನಲ್ಲಿ ಅದರಿಂದ ಉಪಯೋಗವಾದೀತು. ಅನುಭವಸ್ಥರಾದುದರಿಂದ ಮುಪ್ಪಿನಲ್ಲಿ ಮತ್ತಷ್ಟು ಉಪಯೋಗಕರ ವಾದೀರಿ! ಆದರೆ ಆ ಕಾಲದಲ್ಲೆ ವಿಶ್ರಾಂತಿಯಂತೆ!

ಸೋಮಾರಿತನಕ್ಕೆ ಸಂದು ಕೊಡಬಾರದೆಂದರೆ ಅದಕ್ಕೆ ದಕ್ಷತೆ ಬೇಕು. ಎಂಥ ದೊಡ್ಡ ರಾಜ ನಳ ಚಕ್ರವರ್ತಿ. ಆತ ಕಾಲು ತೊಳೆದಾಗ ಎಲ್ಲೋ ಒಂದು ಚಿಕ್ಕೆಯಷ್ಟಗಲ ನೆನೆಯಲಿಲ್ಲ. ಸರಿ, ಅದೇ ಸಂಧಿ. ಅದರೊಳಗಿಂದ ಒಳಕ್ಕೆ ತೂರಿದ ಕಲಿ. ನಳರಾಜನೋ ಅತ್ಯಂತ ಶುದ್ಧ, ಸರ್ವತೋಪರಿ

ಸ್ವಚ್ಛ. ಸ್ವಲ್ಪ ಕಾಲು ನೆನೆಯಲಿಲ್ಲ. ಅಷ್ಟು ಆಲಸ್ಯಕ್ಕೇ ಒಳಗೆ ತೂರಿದನೇ ಕಲಿ. ನಿಮಗೋ ಸರ್ವಾಂಗವೂ ಅಶುಚಿ. ಎಲ್ಲಿಂದ ಬೇಕಾದರೂ ಮೈಗಳ್ಳತನದ ಕಲಿ ಒಳಹೋಗಬಹುದು. ಮೈ ಸೋಮಾರಿ ಯಾಯಿತೆಂದರೆ ಮನೋಬುದ್ಧಿಗಳೂ ಸೋಮಾರಿಗಳಾಗುತ್ತವೆ. ಇಂದು ಸಮಾಜದ ಕಟ್ಟಡ ಸೋಮಾರಿತನದ ತಳಹದಿಯ ಮೇಲೆ ನಿಂತಿದೆ. ಅದರಿಂದ ಅನಂತ ದುಃಖ ಪ್ರಾಪ್ತವಾಗಿದೆ. ಈ ಸೋಮಾರಿತನವನ್ನು ನಾವು ಕಿತ್ತೊಗೆಯಬಲ್ಲೆವಾದರೆ ಸಮಸ್ತವಲ್ಲದಿದ್ದರೂ ಬಹುಭಾಗ ದುಃಖ ದೂರವಾದೀತು.

ಈಚೆಗೆ ಎಲ್ಲೆಲ್ಲೂ ಸಮಾಜ ಸುಧಾರಣೆಯ ಮಾತು. ಸಾಮಾನ್ಯ ಮನುಷ್ಯನಿಗೆ ಕೂಡ ಕನಿಷ್ಠಪಕ್ಷ ಇಂತಿಷ್ಟು ಸುಖ ಸಿಗಬೇಕು, ಹಾಗೆ ಸಮಾಜ ರಚನೆಯಾಗಬೇಕು ಎಂಬ ಚರ್ಚೆ ನಡೆದಿದೆ. ಒತ್ತಟ್ಟಿಗೆ ಅತಿಶಯ ಸುಖ, ಒತ್ತಟ್ಟಿಗೆ ಅತ್ಯಂತ ದುಃಖ ಇವೆ. ಒಂದು ಕಡೆ ಐಶ್ವರ್ಯದ ರಾಶಿ, ಇನ್ನೊಂದು ಕಡೆ ಬಡತನದ ಆಳವಾದ ಕಂದಕ. ಈ ಸಾಮಾಜಿಕ ವಿಷಮತೆಯನ್ನು ಹೇಗೆ ದೂರಮಾಡಲಾದೀತು? ಅತ್ಯವಶ್ಯವಾದ ಸುಖ ಎಲ್ಲರಿಗೂ ಸಿಕ್ಕಲೇಬೇಕು. ಎಲ್ಲರೂ ಸೋಮಾರಿತನ ಬಿಟ್ಟು ಕೆಲಸ ಮಾಡುವುದೇ ಅದಕ್ಕೆ ಉಪಾಯ. ದುಃಖಕ್ಕೆ ಮುಖ್ಯ ಕಾರಣ ಸೋಮಾರಿತನ. ಎಲ್ಲರೂ ಶರೀರಶ್ರಮದ ವ್ರತ ಕೈಗೊಂಡರೆ, ಕೆಲಸ ಮಾಡುವ ಸಂಕಲ್ಪ ತೊಟ್ಟರೆ, ಈ ದುಃಖ ದೂರವಾಗುತ್ತದೆ.

ಆದರೆ ಸಮಾಜದಲ್ಲಿ ಏನು ಕಂಡುಬರುತ್ತದೆ? ಒಂದು ಕಡೆ ಮೂಲೆಗೆ ಬಿದ್ದು ತುಕ್ಕುಹಿಡಿದು ನಿರುಪಯೋಗಿಯಾದ ಜನ. ಶ್ರೀಮಂತರ ಮೈ ಉಪಯೋಗವೇ ಇಲ್ಲದೆ ತುಕ್ಕುಹಿಡಿದಿದೆ. ಇನ್ನೊಂದು ಕಡೆ ಮೈ ಸವೆ ಸವೆದು ಜೀರ್ಣವಾಗಿಹೋಗುವಷ್ಟು ವಿಪರೀತ ದುಡಿತ. ಎಲ್ಲಾ ಸಮಾಜಗಳಲ್ಲೂ ಮೈಯ ದುಡಿತವನ್ನು ತಪ್ಪಿಸಿಕೊಳ್ಳುವ ಪ್ರವೃತ್ತಿ ಇದೆ. ಸಾಯುವ ಗಳಿಗೆಯತನಕ ಯಾರು ಕೆಲಸ ಮಾಡಲೇಬೇಕಾಗಿದೆಯೋ ಅವರು ಅದನ್ನು ಸಂತೋಷದಿಂದ ಮಾಡುತ್ತಿಲ್ಲ. ಬಿಡದ ಕರ್ಮ ಎಂದು ಮಾಡುತ್ತಾರೆ. ಜಾಣರಾದವರು ಶರೀರಶ್ರಮ ತಪ್ಪಿಸಿಕೊಳ್ಳಲು ಸಾವಿರ ನೆಪ ಹೇಳುತ್ತಾರೆ. 'ವ್ಯರ್ಥವಾಗಿ ಶರೀರಶ್ರಮದಲ್ಲಿ ಕಾಲಹರಣ ಮಾಡಲೇಕೆ?' ಎನ್ನುತ್ತಾನೆ

ಒಬ್ಬ. ಈ ವ್ಯರ್ಥ ನಿದ್ದೆ ಏಕೆಂದು ಯಾರೂ ಹೇಳರು ! ಊಟಕ್ಕಾಗಿ ವ್ಯರ್ಥ ಕಾಲವ್ಯಯವೇಕೆ ಎನ್ನರು. ಹಸಿವಾಗುತ್ತದೆ ಎಂದು ಉಣ್ಣುತ್ತಾರೆ. ನಿದ್ದೆ ಬರುತ್ತದೆ ಎಂದು ನಿದ್ರಿಸುತ್ತಾರೆ. ಶರೀರಶ್ರಮದ ಮಾತು ಬಂದರೆ ಮಾತ್ರ ವ್ಯರ್ಥ ಕಾಲಹರಣವೇಕೆ ಎಂಬ ಪ್ರಶ್ನೆ. 'ನಾವೇಕೆ ದುಡಿತದಲ್ಲಿ ಹೊತ್ತು ಕಳೆಯಬೇಕು ? ಏಕೆ ಈ ಕೆಲಸ ಮಾಡಬೇಕು ? ನಾವು ಮಾನಸಿಕ ಕರ್ಮ ಮಾಡಿಕೊಂಡು ಇರುತ್ತೇವೆ.' ಒಳ್ಳೇದಯ್ಯ, ಮಾನಸಿಕ ಕರ್ಮತಾನೆ ನಿನ್ನದು. ಮಾನಸಿಕವಾಗಿಯೇ ಊಟಮಾಡು, ಮಾನಸಿಕವಾಗಿಯೇ ನಿದ್ದೆಮಾಡು. ಮನೋಮಯ ನಿದ್ರೆ, ಮನೋಮಯ ಅನ್ನಗಳ ವ್ಯವಸ್ಥೆ ಮಾಡಿಕೊ !

ಸಮಾಜದಲ್ಲಿ ಹೀಗೆ ಎರಡು ಭಾಗ ಇವೆ. ಒಂದು – ದುಡಿದುಡಿದು ಸತ್ತು ಸುಣ್ಣವಾಗುವ ಜನ, ಇನ್ನೊಂದು – ಇತ್ತಣ ಕಡ್ಡಿ ಅತ್ತ ಹಾಕದೆ ಇರುವ ಜನ. ನನ್ನ ಗೆಳೆಯನೊಬ್ಬ ಹೇಳುತ್ತಿದ್ದ — ಕೆಲವು ಬರೀ ಮೈ, ಕೆಲವು ಬರೀ ಬರುಡೆ ; ಒಂದು ಕಡೆ ಬರೀ ರುಂಡ, ಇನ್ನೊಂದು ಕಡೆ ಬರೀ ಮುಂಡ. ಮುಂಡ ದುಡಿದುಡಿದು ಸವೆದುಹೋಗಬೇಕು. ರುಂಡ ಬರೀ ವಿಚಾರಮಾಡಬೇಕು. ರಾಹು ಕೇತುಗಳಂತೆ ಹೀಗೆ ಬರೀ ರುಂಡ ಮುಂಡಗಳ ಗುಂಪಾಗಿದೆ ಈ ಸಮಾಜ. ಹಾಗೆ ನಿಜವಾಗಿಯೂ ಬರೀ ರುಂಡ ಮುಂಡಗಳೇ ಆಗಿದ್ದರೆ ಅದೂ ಒಳಿತೇ ಆಗುತ್ತಿತ್ತು. ಕುಂಟ – ಕುರುಡ ನ್ಯಾಯದಂತೆ ಏನಾದರೂ ವ್ಯವಸ್ಥೆ ಮಾಡಬಹುದಿತ್ತು. ಕುರುಡನಿಗೆ ಕುಂಟ ದಾರಿ ತೋರಿಸಲಿ, ಕುಂಟನನ್ನು ಕುರುಡ ಹೆಗಲಮೇಲೇರಿಸಿಕೊಳ್ಳಲಿ. ಹಾಗೆ ಈ ರುಂಡ ಮುಂಡಗಳನ್ನು ಜೋಡಿಸುವಂತಿಲ್ಲ ಪ್ರತಿಯೊಬ್ಬರಿಗೂ ರುಂಡವೂ ಇದೆ, ಮುಂಡವೂ ಇದೆ. ರುಂಡ ಮುಂಡಗಳು ಎಲ್ಲೆಲ್ಲೂ ಜೋಡಿಸಿಕೊಂಡು ಇವೆ. ಇದಕ್ಕೆ ಏನು ಮಾಡಬೇಕು ? ಪ್ರತಿಯೊಬ್ಬರೂ ಸೋಮಾರಿತನವನ್ನು ಬಿಡಬೇಕು.

ಸೋಮಾರಿತನ ಬಿಡುವುದೆಂದರೆ ಶರೀರಪರಿಶ್ರಮ ಮಾಡುವುದು. ಸೋಮಾರಿತನವನ್ನು ಗೆಲ್ಲಲು ಇದೇ ಉಪಾಯ. ಈ ಉಪಾಯವನ್ನು ಆಚರಿಸದಿದ್ದರೆ ಅದರ ಶಿಕ್ಷೆಯನ್ನು ಭೋಗಿಸದೆ ತಪ್ಪದು. ರೋಗವೋ ಮತ್ತೊಂದೋ ಅಂತೂ ಯಾವುದೋ ಒಂದು ರೂಪದಲ್ಲಿ ಶಿಕ್ಷೆ ಖಂಡಿತ.

ಶರೀರವನ್ನು ನಮಗೆ ಕೊಟ್ಟಿರುವುದೇ ಶ್ರಮಪಡಲಿಕ್ಕೆ. ಶರೀರಶ್ರಮದಲ್ಲಿ ಕಳೆದ ಕಾಲ ವ್ಯರ್ಥವಲ್ಲ. ಅದರ ಪ್ರತಿಫಲ ಸಿಗುತ್ತದೆ. ಆರೋಗ್ಯ ಉತ್ತಮವಾಗುತ್ತದೆ. ಬುದ್ಧಿ ತೇಜೋಪೂರ್ಣವೂ ತೀವ್ರವೂ ಆಗುತ್ತದೆ. ವಿಶೇಷ ವಿಚಾರವಂತರ ವಿಚಾರದಲ್ಲಿ, ಅವರ ಹೊಟ್ಟೆನೋವು ತಲೆನೋವಿನ ಪ್ರತಿಬಿಂಬ ಕಾಣುತ್ತದೆ. ವಿಚಾರವಂತರು ಗಾಳಿ ಬಿಸಿಲುಗಳಲ್ಲಿ, ಸೃಷ್ಟಿ ಸಾನ್ನಿಧ್ಯದಲ್ಲಿ ದುಡಿದರೆ ಅವರ ವಿಚಾರ ತೇಜಸ್ವಿಯಾಗುತ್ತದೆ. ಶರೀರದ ಅನಾರೋಗ್ಯದ ಪರಿಣಾಮ ಮನಸ್ಸಿನಮೇಲೆ ಆಗದೆ? ಅದೇ ರೀತಿ ಶರೀರದ ಆರೋಗ್ಯದ ಪರಿಣಾಮವೂ ಮನಸ್ಸಿನ ಮೇಲೆ ಆಗುತ್ತದೆ. ಇದು ಅನುಭವಸಿದ್ಧ ಸತ್ಯ. ಮುಂದೆ ಕ್ಷಯರೋಗ ಬಂದಾಗ ನಂದೀ ಬೆಟ್ಟದ ಗಾಳಿ ಸೇವಿಸಲು ಹೋಗುವುದಕ್ಕಿಂತ, ಆತಪಸ್ನಾನದ ಪ್ರಯೋಗಮಾಡು ವುದಕ್ಕಿಂತ, ಇವೊತ್ತೇ ಬಯಲಿನಲ್ಲಿ ಗುದ್ದಲಿ ಹಿಡಿದು ಅಗೆದರೆ, ಗಿಡಕ್ಕೆ ನೀರು ಹಾಕಿದರೆ, ಸೌದೆ ಸೀಳಿದರೆ ಏನು ತಪ್ಪು?

## ೭೭. ತಮೋಗುಣಕ್ಕೆ ಇನ್ನೂ ಉಪಾಯ

ಸೋಮಾರಿತನವನ್ನು ಗೆಲ್ಲುವುದು ಒಂದು. ಇನ್ನೊಂದು – ನಿದ್ದೆಯನ್ನು ಗೆಲ್ಲುವುದು. ನಿದ್ದೆ ನಿಜವಾಗಿ ಪವಿತ್ರವಾದುದು. ಸೇವೆ ಮಾಡಿ ಬಳಲಿದ ಸಾಧುಸಂತರ ನಿದ್ದೆಯೆಂದರೆ ಅದು ಯೋಗವೆ. ಅಂಥ ಶಾಂತ, ಗಾಢ ನಿದ್ರೆ ಪುಣ್ಯವಂತರಿಗೆ ಮಾತ್ರ ಲಭ್ಯ. ನಿದ್ದೆ ಗಾಢವಾಗಿರಬೇಕು. ನಿದ್ದೆಯ ಮಹತ್ವ ದೀರ್ಘಕಾಲದಲ್ಲಿಲ್ಲ. ಹಾಸಿಗೆ ಎಷ್ಟು ಉದ್ದ, ಮನುಷ್ಯ ಅದರ ಮೇಲೆ ಎಷ್ಟುಹೊತ್ತು ಮಲಗಿದ್ದ, ಇದಲ್ಲ ನಿದ್ದೆಯ ಲೆಕ್ಕ. ಬಾವಿ ಆಳವಾಗಿದ್ದಷ್ಟೂ ನೀರು ಸ್ವಚ್ಛ, ಸವಿ. ಅದೇ ರೀತಿ ನಿದ್ದೆ ಸ್ವಲ್ಪ ಹೊತ್ತೇ ಆದರೂ ಗಾಢವಾಗಿದ್ದರೆ ಉತ್ತಮ ಫಲ. ಚಂಚಲ ಮನಸ್ಸಿನಿಂದ ಮೂರು ಗಂಟೆ ಮಾಡಿದ ಅಭ್ಯಾಸಕ್ಕಿಂತ ನಿಶ್ಚಲ ಮನಸ್ಸಿನಿಂದ ಅರ್ಧ ಗಂಟೆ ಮಾಡಿದ ಅಭ್ಯಾಸವೇ ಉತ್ತಮ. ನಿದ್ದೆಯದೂ ಹಾಗೇ. ಬಹಳಹೊತ್ತು ಮಲಗಿದರೆ ಹಿತಪರಿಣಾಮವೇನಿಲ್ಲ. ರೋಗಿ ಇಪ್ಪತ್ತುನಾಲ್ಕು ಗಂಟೆಯೂ ಹಾಸಿಗೆಯ ಮೇಲೆ ಇರುತ್ತಾನೆ. ಹಾಸಿಗೆಗೇ ಅಂಟಿಕೊಂಡಿರುತ್ತಾನೆ. ಆದರೆ ನಿದ್ದೆಗೆ ಅಂಟಿಕೊಂಡಿರಲಾರ. ನಿಜವಾದ ನಿದ್ದೆ ಗಾಢ, ನಿಃಸ್ವಪ್ನ ನಿದ್ರೆ. ಸತ್ತ

ಮೇಲೆ ಏನೇ ಯಮಯಾತನೆಯಿರಲಿ, ನಿದ್ದೆ ಬಾರದ ಕೆಟ್ಟ ಕನಸು ಮುತ್ತಿಕೊಂಡವನ ಯಮಯಾತನೆಯೋ? ವೇದದಲ್ಲಿ ತ್ರಸ್ತರಾಗಿ ಋಷಿಗಳು ಹೇಳಿದಾರೆ—'ಪರಾ ದುಃಸ್ವಪ್ನ್ಯಂ ಸುವ.' 'ಇಂಥ ದುಷ್ಟ ನಿದ್ರೆ ಬೇಡವೇ ಬೇಡ.' ನಿದ್ದೆ ವಿಶ್ರಾಂತಿಗಾಗಿ. ನಿದ್ದೆಯಲ್ಲಿ ಕನಸಿನ ಸಾವಿರ ವಿಚಾರ ಬಂದು ಎದೆಯ ಮೇಲೆ ಕೂಡುವುದಾದರೆ ಅದೇತರ ವಿಶ್ರಾಂತಿ?

ಗಾಢನಿದ್ರೆ ಹೇಗೆ ಲಭಿಸಬೇಕು? ಸೋಮಾರಿತನಕ್ಕೆ ಹೇಳುವ ಮದ್ದೇ ಇದಕ್ಕೂ. ದೇಹವನ್ನು ನಿರಂತರವಾಗಿ ಉಪಯೋಗಿಸಬೇಕು. ಆಗ ನೆಲಕ್ಕೆ ಬಿದ್ದವನು ಸತ್ತಂತೆ ಬಿದ್ದಾನು. ನಿದ್ದೆ ಪುಟಾಣಿ ಮೃತ್ಯು. ಸೊಗಸಾಗಿ ನಿದ್ದೆ ಬರಬೇಕೆಂದರೆ ಹಲವು ದಿನದ ಸಿದ್ಧತೆ ಬೇಕು. ಮೈ ಬಳಲಬೇಕು. ಷೇಕ್ಸ್‌ಪಿಯರ್ ಹೇಳಿದಾನೆ—'ದೊರೆಗೆ ತಲೆಯ ಮೇಲೆ ಕಿರೀಟ, ತಲೆಯೊಳಗೆ ಮಾತ್ರ ನೂರು ಚಿಂತೆ.' ಅಂಥಾ ದೊರೆಗೆ ನಿದ್ದೆ ಬಾರದು. ಅದಕ್ಕೆ ಒಂದು ಕಾರಣ, ಅವನು ಶರೀರಶ್ರಮವನ್ನು ಮಾಡದುದು. ಎಚ್ಚರವಾಗಿರಬೇಕಾದಾಗ ನಿದ್ದೆ ಮಾಡುವವನು ನಿದ್ದೆ ಮಾಡುವಾಗ ಎದ್ದೇ ಇರುತ್ತಾನೆ. ಹಗಲುಹೊತ್ತು ಬುದ್ಧಿ ಶರೀರಗಳನ್ನು ದುಡಿಸದೆ ಇದ್ದರೆ ನಿದ್ದೆ ಮಾಡಿದಂತೆಯೇ. ರಾತ್ರಿ ನಿದ್ದೆಯಲ್ಲಿ ಬುದ್ಧಿ ಜಾಗೃತವಾಗಿದ್ದರೆ ನಿದ್ರಾಸುಖವೆಲ್ಲಿಯದು? ಸರಿ, ಎಷ್ಟು ಹೊತ್ತಾದರೂ ಏಳದೆ ಬಿದ್ದಿರುವುದು. ಪರಮಪುರುಷಾರ್ಥ ಗಳಿಸಬೇಕಾದ ಬಾಳನ್ನು ನಿದ್ದೆಯಲ್ಲಿ ಕಳೆದರೆ ಪುರುಷಾರ್ಥ ಗಳಿಸುವುದು ಯಾವಾಗ? ಅರ್ಧ ಆಯುಷ್ಯವೇ ನಿದ್ದೆಯಲ್ಲಿ ಕಳೆದರೆ ಏನನ್ನು ನಾವು ಗಳಿಸುವುದು?

ನಿದ್ದೆಯಲ್ಲೇ ಬಹಳ ಕಾಲ ಕಳೆದರೆ ತಮೋಗುಣದ ಮೂರನೆ ಲಕ್ಷಣವಾದ 'ಪ್ರಮಾದ' ಸಹಜವಾಗಿ ಬರುತ್ತದೆ. ನಿದ್ರಾಪರನಾದ ಮನುಷ್ಯನ ಚಿತ್ತ ದಕ್ಷವಾಗಿ ಇರದು. ಅದರಿಂದ ಅನವಧಾನ ಹುಟ್ಟುತ್ತದೆ. ಅತಿ ನಿದ್ರೆಯಿಂದ ಸೋಮಾರಿತನ, ಸೋಮಾರಿತನದಿಂದ ವಿಸ್ಮರಣ (ಮರೆವು) ಹುಟ್ಟುತ್ತವೆ. ಪರಮಾರ್ಥವನ್ನು ನಾಶಮಾಡುವ ವಸ್ತು ವಿಸ್ಮರಣ. ವ್ಯವಹಾರದಲ್ಲೇ ಮರೆವಿನಿಂದ ಹಾನಿಯಾಗುತ್ತದೆ. ಆದರೆ ನಮ್ಮ ಸಮಾಜದಲ್ಲಿ ಮರೆವು ಸ್ವಾಭಾವಿಕವಾಗಿಹೋಗಿದೆ. ಅದೊಂದು ಮಹಾ ದೋಷ ಎಂದು ಯಾರಿಗೂ ಅನಿಸುವುದೇ ಇಲ್ಲ. ಯಾರನ್ನೋ ನೋಡಲು

ಹೋಗಬೇಕು ಎಂದು ಏರ್ಪಾಡಾಗಿರುತ್ತದೆ. ಆದರೆ ಹೋಗುವುದಿಲ್ಲ. ಹೀಗೇಕೆ ಎಂದು ಕೇಳಿದರೆ 'ಅಯ್ಯೋ, ಮರೆತೇಹೋಯಿತು' ಎನ್ನುತ್ತೇವೆ. ಹೀಗೆನ್ನುವುದು ದೊಡ್ಡ ತಪ್ಪು ಎನಿಸುವುದೇ ಇಲ್ಲ. ಇಷ್ಟು ಉತ್ತರ ಬಂದರೆ ಸಮಾಧಾನಗೊಳ್ಳುತ್ತೇವೆ. ಮರೆವಿಗೆ ಮದ್ದೇ ಇಲ್ಲವೆಂದು ತಿಳಿದಂತಿದೆ ಸಮಾಜ. ಈ ಮೈಮರೆವಿನಿಂದ ಪರಮಾರ್ಥದಲ್ಲೂ, ವ್ಯವಹಾರದಲ್ಲೂ ಎರಡರಲ್ಲೂ ಹಾನಿಯೇ. ಮರೆವು ಮಹಾರೋಗ. ಅದರಿಂದ ಬುದ್ಧಿಗೆ ಹುಳು ಹಿಡಿಯುತ್ತದೆ. ಬದುಕು ಬೀಳಾಗುತ್ತದೆ.

ಮರೆವಿಗೆ ಕಾರಣ ಮನಸ್ಸಿನ ಸೋಮಾರಿತನ. ಮನಸ್ಸು ಜಾಗರೂಕವಾಗಿದ್ದರೆ ಮರೆವು ಬಾರದು. ಸೋಮಾರಿ ಮನಸ್ಸಿಗೆ ಮರೆವಿನ ರೋಗ ತಪ್ಪಿದುದೇ ಅಲ್ಲ. ಅಂತೇ ಭಗವಾನ್ ಬುದ್ಧ ಹೇಳಿದ:

"ಪ್ರಮಾದೋ ಮಚ್ಚುನೋ ಪದಂ"

ಮರೆವು ಎಂದರೆ ಸಾವೇ ಸರಿ. ಪ್ರಮಾದವನ್ನು ಗೆಲ್ಲಬೇಕೆಂದರೆ ಸೋಮಾರಿತನ, ನಿದ್ದೆಗಳನ್ನು ಗೆದ್ದುಕೊ. ಶರೀರಶ್ರಮ ಗೆಯ್, ಸಂತತ ಸಾವಧಾನಶೀಲನಾಗು. ಏನೇನು ಮಾಡಬೇಕೋ ಎಲ್ಲವನ್ನೂ ವಿಚಾರಪೂರ್ವಕ ಮಾಡು. ವಿಚಾರ ಮಾಡದೆ ಸುಮ್ಮನೆ ಸಹಜವಾದ ಕೆಲಸ ಬೇಡ. ಕೆಲಸಕ್ಕೆ ಮೊದಲಲ್ಲೂ ವಿಚಾರ, ಕಡೆಯಲ್ಲೂ ವಿಚಾರ. ಮೊದಲೂ ಕೊನೆಗೂ ಸರ್ವತ್ರ ವಿಚಾರರೂಪಿ ಪರಮೇಶ್ವರ ನಿಂತಿರಲಿ. ಹಾಗೆ ಮಾಡುತ್ತಹೋದರೆ ಅನವಧಾನದ ರೋಗ ದೂರವಾದೀತು. ಇಡೀ ಕಾಲವನ್ನು ಸರಿಯಾಗಿ ಬಳಸು, ಗಳಿಗೆಗಳಿಗೆಯ ಲೆಕ್ಕ ಇಡು. ಹಾಗಾದರೆ ಸೋಮಾರಿತನದ ಕಲಿಯ ಪ್ರವೇಶಕ್ಕೆ ಎಡೆಯಿಲ್ಲವಾದೀತು. ಹೀಗೆ ತಮೋಗುಣವನ್ನು ಗೆಲ್ಲುವ ಪ್ರಯತ್ನ ಮಾಡಬೇಕು.

## ೭೮. ರಜೋಗುಣಕ್ಕೆ ಉಪಾಯ: ಸ್ವಧರ್ಮ – ಮರ್ಯಾದೆ

ಅನಂತರ ರಜೋಗುಣದ ಕಡೆ ತಿರುಗಬೇಕು. ರಜೋಗುಣ ಭಯಾನಕ ಶತ್ರು. ತಮೋಗುಣದ್ದೇ ಎರಡನೆ ಮುಖ ಇದು. ಎರಡೂ ಒಂದೇ. ಮಾತು ಎರಡು, ವಸ್ತು ಒಂದೇ ಎನ್ನಬೇಕು. ಮಲಗಿಯೇ ಇದ್ದವರಿಗೆ ಎದ್ದು ಓಡಾಡುವ ಬಯಕೆ. ಎದ್ದು ಓಡಾಡುವವರಿಗೆ ಮಲಗುವ ಇಚ್ಛೆ.

ತಮೋಗುಣದಿಂದ ರಜೋಗುಣದ ದರ್ಶನವಾಗುತ್ತದೆ. ರಜೋಗುಣದಿಂದ ತಮೋಗುಣಕ್ಕೆ ಬರುತ್ತೇವೆ. ಒಂದು ಇದ್ದಲ್ಲಿ ಎರಡನೆಯದೂ ಇರುತ್ತದೆ. ರೊಟ್ಟಿಗೆ ಇತ್ತ ಕಾದ ಕಾವಲಿ, ಅತ್ತ ಕೆಂಡ. ಮನುಷ್ಯನಿಗೆ ಇತ್ತ ತಿರುಗಿದರೆ ತಮೋಗುಣ, ಅತ್ತ ತಿರುಗಿದರೆ ರಜೋಗುಣ. 'ಇತ್ತ ಬಾ, ನಿನ್ನನ್ನು ತಮೋಗುಣದ ಕಡೆ ಹಾರಿಸುತ್ತೇನೆ' ಎನ್ನುತ್ತದೆ ರಜೋಗುಣ. 'ನನ್ನ ಕಡೆ ಬಾ, ರಜೋಗುಣದ ಕಡೆ ಎಸೆಯುತ್ತೇನೆ' ಎನ್ನುತ್ತದೆ ತಮೋಗುಣ. ಹೀಗೆ ಪರಸ್ಪರ ನೇರವಾಗಿ ರಜೋಗುಣ ತಮೋಗುಣಗಳು ಮನುಷ್ಯನನ್ನು ನಾಶಮಾಡುತ್ತವೆ. ಕಾಲ್ಚೆಂಡಿನ ಹಣೆಯಬರಹ ಏಟು ತಿನ್ನುವುದು. ಹೀಗೆ ರಜೋಗುಣ ತಮೋಗುಣಗಳ ಏಟು ತಿಂದು ಮನುಷ್ಯ ಜನ್ಮ ಕಳೆಯುತ್ತದೆ.

ರಜೋಗುಣದ ಪ್ರಧಾನ ಲಕ್ಷಣ ನಾನಾ ಕಾರ್ಯಕಲಾಪ ಮಾಡುವ ಹವ್ಯಾಸ. ಅಮಾನುಷ ಕರ್ಮದಲ್ಲಿ ಅಪಾರ ಆಸಕ್ತಿ. ರಜೋಗುಣದಿಂದ ಅಪರಂಪಾರ ಕರ್ಮಸಂಗ ಹೆಣೆದುಕೊಳ್ಳುತ್ತದೆ. ಲೋಭಾತ್ಮಕ ಕರ್ಮಾಸಕ್ತಿ ಹುಟ್ಟುತ್ತದೆ. ಆಗ ವಾಸನಾವಿಕಾರದ ವೇಗವನ್ನು ತಡೆಯಲು ಅಸಾಧ್ಯ. ಇತ್ತಣ ಗುಡ್ಡ ಕಡಿದು, ಅತ್ತಣ ಕಂದಕ ತುಂಬು. ಸಮುದ್ರಕ್ಕೆ ಮಣ್ಣು ಹೊತ್ತು ಅದನ್ನು ಮುಚ್ಚು. ಸಹಾರಾ ಮರುಭೂಮಿಯಲ್ಲಿ ಸಮುದ್ರ ತೋಡು. ಇಲ್ಲಿ ಸೂಯೇಜ್ ಕಾಲುವೆ ತೋಡು, ಅಲ್ಲಿ ಪನಾಮಾ ಕಟ್ಟು. ಇಂಥ ನಿಲ್ಲದ ಗೊಂದಲದ ಹವ್ಯಾಸ. ಇದನ್ನು ಮುರಿ, ಅದನ್ನು ಕಟ್ಟು. ಮಗು ಕಾಗದ ತೆಗೆದುಕೊಳ್ಳುತ್ತದೆ, ಹರಿಯುತ್ತದೆ; ಮತ್ತೇನಾದರೂ ಮಾಡುತ್ತದೆ. ಇದೂ ಹಾಗೆಯೇ. ಅದನ್ನು ಇದರಲ್ಲಿ ಸೇರಿಸು. ಇದನ್ನು ಅದರಲ್ಲಿ ಸೇರಿಸು. ಅದನ್ನು ಮುಳುಗಿಸು, ಇದನ್ನು ಹಾರಿಸು. ಹೀಗೆ ರಜೋಗುಣದ ಅನಂತ ಕ್ರೀಡೆ. ಹಕ್ಕಿ ಮುಗಿಲಲ್ಲಿ ಹಾರುತ್ತದೆ. ನಾವೂ ಹಾರಬೇಕು. ಮೀನು ನೀರಿನೊಳಗೆ ಇರುತ್ತದೆ. ನಾವೂ ನೀರಿನಲ್ಲಿ ಮುಳುಗಿ ಅದರಂತೆ ಇರಬೇಕು. ನರದೇಹದಲ್ಲಿ ಬಂದು ಹಕ್ಕಿಯಂತೆ, ಮೀನಿನಂತೆ ಮಾಡುವುದು ಕೃತಾರ್ಥತೆ ಎಂದು ತಿಳಿಯುತ್ತಾರೆ. ಪರಕಾಯ ಪ್ರವೇಶದ, ಮತ್ತೊಂದು ದೇಹದ ಕೌತುಕವನ್ನು ಅನುಭವಿಸುವ, ಬಯಕೆ ನರದೇಹದಲ್ಲಿ ಹುಟ್ಟುತ್ತದೆ. ಮಂಗಳಗ್ರಹಕ್ಕೆ ಹಾರಿಹೋಗಬೇಕು, ಅಲ್ಲಿನ ವಸತಿಯನ್ನು ನೋಡಬೇಕು

ಎಂದು ಒಬ್ಬನಿಗೆ ಚಪಲ. ಚಿತ್ತವು ಸದಾ ಭ್ರಮಣಮಾಡುತ್ತಿರುತ್ತದೆ. ನಾನಾ ವಾಸನಾಭೂತಗಳು ಮೈಯೊಳಗೆ ಹೋಗುತ್ತವೆ. ಏನಾದರೊಂದು ಕೆಲಸ. ಇಷ್ಟು ದೊಡ್ಡವನು, ಮನುಷ್ಯ ನಾನು ಇರುತ್ತಿರಲು ಸೃಷ್ಟಿ ಇದ್ದಂತೆಯೆ ಹೇಗೆ ಇರಬೇಕು? ಪೈಲ್ವಾನನಿಗೆ ಮೈಯೊಳಗೆ ತೀಟೆ. ಕಂಬವನ್ನು ಹಾಯುತ್ತಾನೆ. ಮರವನ್ನು ಗುದ್ದುತ್ತಾನೆ. ಹೀಗಿರುತ್ತದೆ ರಜೋಗುಣದ ತುಳುಕು. ಈ ಬೆದೆ ಬಂದರೆ ನೆಲ ತೋಡಿ ಕಲ್ಲು ತೆಗೆಯುತ್ತಾನೆ. ಅದಕ್ಕೆ ವಜ್ರ ವೈಢೂರ್ಯ ಎಂದು ಹೆಸರಿಡುತ್ತಾನೆ. ಸಮುದ್ರದೊಳಗೆ ಮುಳುಗುತ್ತಾನೆ. ತಳದ ಕಸವನ್ನು ದಡಕ್ಕೆ ತಂದುಹಾಕಿ ಅದನ್ನು ಮುತ್ತು ಎನ್ನುತ್ತಾನೆ. ಆ ಮುತ್ತಿಗೆ ತೂತು ಇಲ್ಲ. ಅದಕ್ಕೆ ತೂತು ಕೊರೆಯುತ್ತಾನೆ. ಅದನ್ನು ಎಲ್ಲಿಡಬೇಕು. ಅಕ್ಕಸಾಲಿಗನಿಂದ ಕಿವಿ– ಮೂಗಿಗೆ ತೂತು ಮಾಡಿಸುತ್ತಾನೆ. ಹೀಗೇಕೆ ಈ ರೀತಿ ಮಾಡುತ್ತಾನೋ ಮನುಷ್ಯ? ಎಲ್ಲವೂ ರಜೋಗುಣದ ಪ್ರಭಾವ.

ರಜೋಗುಣದ ಇನ್ನೊಂದು ಪ್ರಭಾವ ಅಸ್ಥಿರತೆ. ರಜೋಗುಣಕ್ಕೆ ಆಗಿಂದಾಗಲೆ ಫಲ ಬೇಕು. ಆದುದರಿಂದ, ಅಡ್ಡಿಬಂತೋ ಮನುಷ್ಯ ಬೇರೆ ಹಾದಿ ಹಿಡಿಯುತ್ತಾನೆ. ರಜೋಗುಣಿಯಾದವ ಇದನ್ನು ಬಿಟ್ಟು, ಅದನ್ನು ಹಿಡಿದ; ಅಂತೂ ದಿನವೂ ಹೊಸದು. ಕಟ್ಟಕಡೆಗೆ ಕೈಯಲ್ಲಿ ಒಂದೂ ಉಳಿಯದು.

### 'ರಾಜಸಂ ಚಲಂ ಅಧ್ರುವಂ'

ರಜೋಗುಣದ ಕೃತಿ ಚಂಚಲ, ಅನಿಶ್ಚಿತ. ಮಕ್ಕಳು ಜೋಳ ಬಿತ್ತಿ, ಕೂಡಲೆ ಮೊಳಕೆಗಾಗಿ ಹುಡುಕುತ್ತವೆ. ರಜೋಗುಣಿಯ ಸ್ವಭಾವ ಹೀಗೆ. ಎಲ್ಲವೂ ಒಡನೆಯೆ ಮಡಿಲಲ್ಲಿ ಬೀಳಬೇಕು. ಅಧೀರನಾಗುತ್ತಾನೆ. ಅವನಿಗೆ ಸಂಯಮವಿರುವುದಿಲ್ಲ. ಒಂದೇ ಕಡೆ ಕಾಲು ಊರುವುದು ಅವನಿಗೆ ತಿಳಿಯದು. ಇಲ್ಲಿ ಸ್ವಲ್ಪ ಕೆಲಸ ಮಾಡಿದ, ಸ್ವಲ್ಪ ಹೆಸರಾಯಿತು. ಅಲ್ಲಿಂದ ಎದ್ದು ಮತ್ತೊಂದು ಕಡೆಗೆ ಹೋದ. ಇವೊತ್ತು ಮದರಾಸಿನಲ್ಲಿ ಮಾನಪತ್ರ. ನಾಳೆ ಕಲ್ಕತ್ತೆ. ನಾಡಿದ್ದು ಬೊಂಬಾಯಿ. ಆಮೇಲೆ ನಾಗಪುರ. ಎಷ್ಟು ಪೌರಸಭೆಗಳು ಇವೆಯೋ ಅಷ್ಟು ಮಾನಪತ್ರ ಬೇಕು. ಮಾನ ಒಂದೇ ಅವನ ಕಣ್ಣಿಗೆ ಕಾಣುವ ವಸ್ತು. ಒಂದೇ ಕಡೆ ಸ್ಥಿರವಾಗಿದ್ದು ಕೆಲಸ

ಮಾಡುವುದು ಅವನಿಗೆ ರೂಢಿಯೇ ಇಲ್ಲ ಇದರಿಂದ ರಜೋಗುಣಿ ಮನುಷ್ಯನ ಸ್ಥಿತಿ ಭಯಾನಕವಾಗುತ್ತದೆ.

ರಜೋಗುಣದಿಂದ ಮನುಷ್ಯ ನಾನಾ ಉದ್ಯೋಗಗಳಲ್ಲಿ ಕೈಯಾಡಿಸುತ್ತಾನೆ ಅವನಿಗೆ ಸ್ವಧರ್ಮ ಯಾವುದೂ ಇರದು. ಸ್ವಧರ್ಮಾಚರಣೆಯೆಂದರೆ ನಿಜವಾಗಿ ಇತರ ನಾನಾ ಕರ್ಮಗಳ ತ್ಯಾಗ. ಗೀತೆಯ ಕರ್ಮ ರಜೋಗುಣಕ್ಕೆ ಕೊಡಲಿಯೇಟು. ರಜೋಗುಣದಲ್ಲಿ ಎಲ್ಲವೂ ಚಂಚಲ. ಗುಡ್ಡದ ಮೇಲೆ ಬಿದ್ದ ನೀರು ಎಲ್ಲಾ ಕಡೆಗೂ ಹರಿದರೆ ಒಂದು ಕಡೆಯೂ ನಿಲ್ಲದು. ಅದೇ ನೀರು ಒಂದು ಕಡೆ ಹರಿದರೆ ಹೊಳೆಯಾದೀತು. ಅದರಲ್ಲಿ ಶಕ್ತಿ ಹುಟ್ಟೀತು. ಅದರಿಂದ ದೇಶಕ್ಕೆ ಉಪಯೋಗವಾದೀತು. ಹಾಗೇ ಮನುಷ್ಯನೂ ತನ್ನ ಶಕ್ತಿಯನ್ನು ನಾನಾ ಕಾರ್ಯಗಳಲ್ಲಿ ವ್ಯರ್ಥವಾಗಿ ಕಳೆಯದೆ ಒಂದೇ ಕಾರ್ಯದಲ್ಲಿ ವಿನಿಯೋಗಿಸಿದರೆ ಏನಾದರೂ ಕೆಲಸವಾದೀತು. ಅಂತೆಯೇ ಸ್ವಧರ್ಮದ ಮಹತ್ವ.

ಸಂತತವಾಗಿ ಸ್ವಧರ್ಮಚಿಂತನೆ ಮಾಡುತ್ತ ಅದಕ್ಕಾಗಿಯೆ ಸರ್ವ ಶಕ್ತಿಯನ್ನೂ ವಿನಿಯೋಗಿಸಬೇಕು. ಬೇರೆ ಕಡೆ ಲಕ್ಷ್ಯವೇ ಹೋಗಬಾರದು. ಇದೇ ಸ್ವಧರ್ಮದ ಒರೆಗಲ್ಲು. ಕರ್ಮಯೋಗವೆಂದರೆ ಅತಿ ಕರ್ಮವೂ ಅಲ್ಲ, ಅಮಾನುಷ ಕರ್ಮವೂ ಅಲ್ಲ. ಸುಮ್ಮನೆ ಹತ್ತಾರು ಕೆಲಸ ಮಾಡಿದರೆ ಅದು ಕರ್ಮಯೋಗವಲ್ಲ. ಗೀತೆಯ ಕರ್ಮಯೋಗ ಬೇರೆ. ಫಲದ ಕಡೆ ಗಮನ ಕೊಡದೆ, ಕೇವಲ ಸ್ವಭಾವಪ್ರಾಪ್ತ ಅಪರಿಹಾರ್ಯ ಸ್ವಧರ್ಮವನ್ನು ನಡೆಸುವುದು, ತದ್‌ದ್ವಾರಾ ಚಿತ್ತಶುದ್ಧಿ ಮಾಡಿಕೊಳ್ಳುವುದು – ಕರ್ಮಯೋಗದ ವೈಶಿಷ್ಟ್ಯ. ಕರ್ಮವನ್ನು ಮಾಡುವುದೇನು, ಸೃಷ್ಟಿಯಲ್ಲಿ ಸರ್ವತ್ರ ಇದ್ದೇ ಇದೆ. ಕರ್ಮಯೋಗವೆಂದರೆ ವಿಶಿಷ್ಟ ಮನೋವೃತ್ತಿಯಿಂದ ಎಲ್ಲವನ್ನೂ ಮಾಡುವುದು. ಹೊಲದಲ್ಲಿ ಬೀಜ ಬಿತ್ತುವುದಕ್ಕೂ, ಹಿಡಿ ತುಂಬಾ ಕಾಳು ತೆಗೆದುಕೊಂಡು ಎತ್ತಲೊ ಚೆಲ್ಲುವುದಕ್ಕೂ ಬಹಳ ಅಂತರವಿದೆ. ಬಿತ್ತಿದರೆ ಫಲ, ಬಿಸುಟರೆ ನಷ್ಟ. ಗೀತೆ ಹೇಳುವ ಕರ್ಮ, ಬೀಜ ಬಿತ್ತಿದಂತೆ. ಅಂಥ ಸ್ವಧರ್ಮರೂಪ ಕರ್ತವ್ಯದಲ್ಲಿ ಬಹಳ ಶಕ್ತಿ ಇದೆ. ಅದಕ್ಕೆ ಎಷ್ಟು ಪರಿಶ್ರಮ ಮಾಡಿದರೂ ಕಡಿಮೆಯೆ. ಅದರಲ್ಲಿ ಪರದಾಟಕ್ಕೆ ಅವಕಾಶವೇ ಇಲ್ಲ.

## ೭೯. ಸ್ವಧರ್ಮವನ್ನು ನಿರ್ಧರಿಸುವುದು ಹೇಗೆ?

ಈ ಸ್ವಧರ್ಮವನ್ನು ನಿರ್ಧರಿಸುವುದು ಹೇಗೆ ಎಂದು ಕೇಳಿದರೆ 'ಅದು ಸ್ವಾಭಾವಿಕ' ಎಂಬುದೇ ಉತ್ತರ. ಸ್ವಧರ್ಮ ಸಹಜವಾಗಿ ಇರುತ್ತದೆ. ಅದನ್ನು ಹುಡುಕಬೇಕೆಂಬ ವಿಚಾರವೇ ಆಶ್ಚರ್ಯಕರ. ಮನುಷ್ಯ ಹುಟ್ಟಿದಾಗ ಅವನ ಸ್ವಧರ್ಮವೂ ಹುಟ್ಟಿತು. ಮಗು ತಾಯಿಯನ್ನು ಹುಡುಕಬೇಕಾದುದಿಲ್ಲ. ಹಾಗೇ ಸ್ವಧರ್ಮವನ್ನೂ ಹುಡುಕಬೇಕಾದುದಿಲ್ಲ. ಅದು ಮುಂಗಡವಾಗಿಯೇ ಬರುತ್ತದೆ. ನಮಗಿಂತ ಮೊದಲು ಜಗತ್ತು ಇತ್ತು. ನಾವು ಹೋದ ಮೇಲೂ ಇರುತ್ತದೆ. ನಮ್ಮ ಹಿಂದೆ ದೊಡ್ಡ ಪ್ರವಾಹ ಹರಿಯುತ್ತಿತ್ತು. ಮುಂದೆಯೂ ಹರಿಯುತ್ತದೆ. ಅಂಥ ಪ್ರವಾಹದಲ್ಲಿ ನಾವು ಹುಟ್ಟಿ ಬಂದಿದೇವೆ ಯಾರ ಹೊಟ್ಟೆಯಲ್ಲಿ ಹುಟ್ಟಿದೆವೋ ಆ ತಂದೆ ತಾಯಿಗಳ ಸೇವೆ, ಯಾರ ನಡುವೆ ಹುಟ್ಟಿದೆವೋ ಆ ರೈತರ ಸೇವೆ, ಇವು ನಮಗೆ ನಿಸರ್ಗಪ್ರಾಪ್ತ ಸಂದೇಶ. ನನ್ನ ವೃತ್ತಿ ನನ್ನ ಅನುಭವದ್ದೇ ತಾನೆ. ನನಗೆ ಹಸಿವಾಗುತ್ತದೆ, ನೀರಡಸುತ್ತದೆ. ಹಸಿದವರಿಗೆ ಅನ್ನ ನೀಡುವ, ನೀರಡಸಿದವರಿಗೆ ನೀರು ಹನಿಸುವ, ಧರ್ಮ ನನಗೆ ಆದರಿಂದ ದೊರೆಯಿತು. ಸೇವಾರೂಪದ, ಭೂತದಯಾರೂಪದ ಸ್ವಧರ್ಮವನ್ನು ಹುಡುಕಬೇಕಾದುದಿಲ್ಲ. ಸ್ವಧರ್ಮದ ಶೋಧನೆ ನಡೆಸಿದ ಕಡೆ, ಪರಧರ್ಮ ಅಥವಾ ಅಧರ್ಮ ಇದ್ದಿರಬೇಕೆಂದು ನಿಶ್ಚಯವಾಗಿ ತಿಳಿಯಬೇಕು.

ಸೇವಕನಿಗೆ ಸೇವೆಯನ್ನು ಹುಡುಕುವ ಅಗತ್ಯವೇನು? ಅದು ತಾನೇ ಅವನ ಬಳಿಗೆ ಬರುತ್ತದೆ. ಆದರೆ ಒಂದು ಮಾತು: ಅನಾಯಾಸವಾಗಿ ಲಭಿಸಿದ್ದೆಲ್ಲ ಧರ್ಮವಲ್ಲ. ಒಬ್ಬ ರೈತ ಬಂದು 'ರಾತ್ರಿ ಸ್ವಲ್ಪ ನಮ್ಮ ಬೇಲಿಯನ್ನು ಹತ್ತುಮೂರು ಮುಂದಕ್ಕೆ ಹಾಕೋಣ ಬಾ. ಗದ್ದಲವಿಲ್ಲದೆ ನನ್ನ ಹೊಲ ವಿಸ್ತಾರವಾಗುತ್ತದೆ' ಎಂದು ನನಗೆ ಹೇಳಿದರೆ, ಅದು ಅಧರ್ಮವಾದುದರಿಂದ ನನ್ನ ಕರ್ತವ್ಯವಾಗದು.

ಚಾತುರ್ವರ್ಣ್ಯದಲ್ಲಿ ಸ್ವಾಭಾವಿಕತೆ, ಧರ್ಮ ಇವೆ. ಆದರಿಂದ ನನಗದು ರುಚಿಸುತ್ತದೆ. ಈ ಸ್ವಧರ್ಮವನ್ನು ತಪ್ಪಿಸಲು ಸಾಧ್ಯವಿಲ್ಲ. ಯಾರು ನನ್ನನ್ನು ಪಡೆದರೋ ಅವರೇ ನನ್ನ ತಾಯಿತಂದೆ. ಅವರು ನನಗೆ

ಇಷ್ಟವಿಲ್ಲ ಎಂದರೆ ಹೇಗೆ? ತಾಯಿತಂದೆಗಳ ಕಸಬು ಮಕ್ಕಳಿಗೆ ಸ್ವಾಭಾವಿಕವಾಗಿಯೆ ಪ್ರಾಪ್ತವಾಗುತ್ತದೆ. ಹಿಂದಿನಿಂದ ಬಂದ ಕಸಬು ನೀತಿವಿರುದ್ಧವಲ್ಲದಿದ್ದರೆ ಅದನ್ನು ಮಾಡುವುದು, ಮುಂಬರಿಸುವುದು ಚಾತುರ್ವರ್ಣ್ಯದ ಮುಖ್ಯ ವಿಶೇಷ. ಇವೊತ್ತು ಚಾತುರ್ವರ್ಣ್ಯ ಕೆಟ್ಟಿದೆ. ಅದನ್ನು ಆಚರಿಸುವುದು ಕಠಿನವಾಗಿದೆ. ಅದರ ಮಡಿಕೆಯನ್ನು ಅಚ್ಚುಕಟ್ಟಾಗಿ ಇಡಲು ಸಾಧ್ಯವಾದರೆ ಬಹಳ ಅಂದವಾದುದು. ಅದು ಇಲ್ಲವಾದರೆ ಹೊಸ ಕಸಬು ಕಲಿಯುವುದರಲ್ಲೇ ಮನುಷ್ಯ ಮೊದಲನೆ ಇಪ್ಪತ್ತೈದು ಮೂವತ್ತು ವರ್ಷ ಕಳೆಯುತ್ತಾನೆ. ಕಲಿತಮೇಲೆ ಸೇವಾಕ್ಷೇತ್ರದ ಶೋಧನೆ. ಹೀಗೆ ಮೊದಲಿನ ಇಪ್ಪತ್ತೈದು ವರ್ಷ ಶಿಕ್ಷಣದಲ್ಲೆ ಕಳೆಯಿತು. ಆ ಶಿಕ್ಷಣ ಬಾಳಿಗೆ ಸಂಬಂಧಿಸಿದುದಲ್ಲ. ಇದು ಮುಂದಿನ ಬಾಳಿಗೆ ಸಿದ್ಧತೆ ಎಂದರೆ, ಕಲಿಯುವಾಗ ಯಾರೂ ಬದುಕುವ ಮಾತಿಲ್ಲ. ಏನಿದ್ದರೂ ಅನಂತರ. ಮೊದಲು ಬರೀ ಕಲಿಕೆ, ಆಮೇಲೆ ಬದುಕು. ಶಿಕ್ಷಣ ಬೇರೆ, ಬದುಕು ಬೇರೆ — ಹೀಗಾಗಿದೆ. ಆದರೆ ಯಾವುದಕ್ಕೆ ಜೀವನದ ಸಂಬಂಧವಿಲ್ಲವೋ ಅದು ಸಾವು. ಹಿಂದುಸ್ಥಾನದ ಸರಾಸರಿ ಆಯುಸ್ಸು ೨೩ ವರ್ಷ. ಅದರಲ್ಲಿ ೨೫ ವರ್ಷದವರೆಗೆ ಈ ಸಿದ್ಧತೆ! ಹೊಸ ಕಸಬನ್ನು ಕಲಿಯಲು ಬಹಳ ಕಾಲ ಹಿಡಿಯುತ್ತದೆ. ಆಮೇಲೆ ಎಲ್ಲಾದರೂ ಕಸಬು ನಡಸಬೇಕು. ಅದರಲ್ಲಿ ಉತ್ಸಾಹದ ಎಷ್ಟೋ ಕಾಲ ವ್ಯರ್ಥವಾಗುತ್ತದೆ. ಆ ಹುರುಪು, ಹುಮ್ಮಸ್ಸು, ಸೇವೆಯಿಂದ ದೇಹ ಸಾರ್ಥಕ ಮಾಡುವುದು, ಎಲ್ಲವೂ ವ್ಯರ್ಥ. ಬಾಳು ಆಟವಲ್ಲ. ಆದರೆ ಬಾಳಿನ ಕಸಬನ್ನು ಹುಡುಕುವುದರಲ್ಲೇ ಹುಡುಗನ ಆಯುಷ್ಯ ಪೂರ್ಣವಾಗುತ್ತದಲ್ಲ. ಎಂಥ ದುಃಖದ ಸಂಗತಿ? ಇದಕ್ಕಾಗಿಯೇ ಹಿಂದೂಧರ್ಮ ವರ್ಣಧರ್ಮದ ಯುಕ್ತಿ ಮಾಡಿತು.

ಚಾತುರ್ವರ್ಣ್ಯದ ಕಲ್ಪನೆಯನ್ನು ಬದಿಗಿಡೋಣ. ಆದರೂ ಎಲ್ಲ ರಾಷ್ಟ್ರಗಳಲ್ಲೂ, ಎಲ್ಲೆಡೆಯಲ್ಲೂ, ಚಾತುರ್ವರ್ಣ್ಯವಿಲ್ಲದಕಡೆಯೂ, ಎಲ್ಲರಿಗೂ ಸ್ವಧರ್ಮ ಪ್ರಾಪ್ತವಾಗಿದೆ. ನಾವೆಲ್ಲರೂ ಒಂದೇ ಪ್ರವಾಹದಲ್ಲಿ, ಹೆಚ್ಚು ಕಡಮೆ ಒಂದೇ ಪರಿಸ್ಥಿತಿಯಲ್ಲಿ ಹುಟ್ಟಿಬಂದವರು. ಆದುದರಿಂದ ಸ್ವಧರ್ಮಾಚರಣರೂಪಿ ಕರ್ತವ್ಯ ತಾನಾಗಿಯೆ ಪ್ರಾಪ್ತವಾಗುತ್ತದೆ.

ಅಂತೆಯೇ ದೂರದ ಕರ್ತವ್ಯ — ಎಷ್ಟಾದರೂ ಅದು ಗೌಣವೇ. ಎಷ್ಟೇ ಸೊಗಸಾಗಿದ್ದರೂ ಅದನ್ನು ಹಿಡಿದರೆ ಪ್ರಯೋಜನವಿಲ್ಲ. ಅನೇಕ ಸಲ ದೂರದ್ದು ಅಂದವಾಗಿಯೆ ಕಾಣುತ್ತದೆ. ಮನುಷ್ಯ ದೂರದ್ದಕ್ಕೆ ಬೆರಗಾಗುತ್ತಾನೆ. ನಿಂತಲ್ಲೆ ಮನುಷ್ಯನ ಸುತ್ತಲೂ ಮಂಜು ಕವಿದಿರುತ್ತದೆ. ಆದರೆ ಹತ್ತಿರದ ಮಂಜು ಅವನಿಗೆ ಕಾಣದು. ದೂರ ಬೊಟ್ಟುಮಾಡಿ 'ಅಲ್ಲಿ ಮಂಜು ಇದೆ' ಎನ್ನುತ್ತಾನೆ. ಅಲ್ಲಿಯವನು 'ಇಲ್ಲಿ ಮಂಜಿದೆ' ಎನ್ನುತ್ತಾನೆ. ಮಂಜು ಎಲ್ಲೆಡೆಯಲ್ಲೂ ಇದೆ. ಆದರೆ ಹತ್ತಿರದ್ದು ಕಾಣದು. ಮನುಷ್ಯನಿಗೆ ದೂರದ್ದರ ಸೆಳೆತ ಹೆಚ್ಚು. ಹತ್ತಿರದ್ದು ತಲೆಗೆ ಹತ್ತುತ್ತದೆ. ದೂರದ್ದು ಕನಸಿನಲ್ಲಿ ಕಾಣುತ್ತದೆ. ಇದು ಮೋಹ. ಇದನ್ನು ತಪ್ಪಿಸಿಕೊಳ್ಳಲೇಬೇಕು. ಸಹಜಪ್ರಾಪ್ತ ಸ್ವಧರ್ಮ ಸರಳವಾದರೂ, ಕೊರೆ ಎನಿಸಿದರೂ, ನೀರಸವಾಗಿ ತೋರಿದರೂ, ನನಗೆ ಯಾವುದು ಸಹಜಪ್ರಾಪ್ತವೋ ಅದೇ ಹಿತ, ಅದೇ ಸುಂದರ. ಸಮುದ್ರದಲ್ಲಿ ಮುಳುಗುತ್ತಿರುವವನಿಗೆ ಸೊಟ್ಟೋ ಡೊಂಕೋ ಅಂತೂ ಒಂದು ಕಟ್ಟಿಗೆ ಸಿಕ್ಕರೆ, ಅದು ನಯವಾಗಿ ಪಾಲಿಷ್‌ಮಾಡಿದುದಲ್ಲದಿದ್ದರೂ ಅದು ಅವನನ್ನು ಪಾರುಮಾಡೀತು. ಬಡಗಿಯ ಅಂಗಳದಲ್ಲಿ ಅಂದವಾದ ಕೆತ್ತನೆ ಸಾಮಾನು ಬಹಳ ಇದ್ದಾವು. ಅವು ಅಲ್ಲಿದ್ದರೆ ಈ ಮುಳುಗುವವನಿಗೆ ಏನು ಲಾಭ ? ಅವನಿಗೆ ಆ ಸೊಟ್ಟ ತುಂಡೇ ತಾರಕವಾದಂತೆ, ನನಗೆ ಸಹಜವಾಗಿ ಬಂದ ಧರ್ಮ ಹೇಗೇ ಇರಲಿ, ಅದೇ ನನಗೆ ತಾರಕ. ಅದರಲ್ಲಿ ಮಗ್ನನಾಗುವುದೇ ನನಗೆ ಶೋಭಾಯಮಾನ ಅದರಿಂದಲೇ ನನಗೆ ಉದ್ಧಾರ. ಬೇರೆ ಸೇವೆಗಾಗಿ ಅರಸುತ್ತಾ ಹೋದರೆ ಅದು ಸಿಗದು, ಇದು ಉಳಿಯದು. ಹೀಗಾಗಿ ಕಡೆಗೆ ಸೇವಾವೃತ್ತಿಯೇ ದೂರವಾಗುತ್ತದೆ. ಅಂತೇ, ಸ್ವಧರ್ಮರೂಪಿ ಕರ್ತವ್ಯದಲ್ಲಿ ಮಗ್ನನಾಗಿರಬೇಕು.

ಸ್ವಧರ್ಮದಲ್ಲಿ ಮಗ್ನನಾದರೆ ರಜೋಗುಣ ಬಾಡುತ್ತದೆ. ಚಿತ್ತ ಏಕಾಗ್ರವಾಗುತ್ತದಲ್ಲ. ಆದುದರಿಂದ ಸ್ವಧರ್ಮಕ್ಕೆ ವ್ಯತಿರಿಕ್ತ ಅದು ಓಡದು. ಅದರಿಂದ ಚಂಚಲ ರಜೋಗುಣದ ರಭಸ ಕರಗಿಹೋಗುತ್ತದೆ. ಶಾಂತವೂ ಆಳವೂ ಆಗಿದ್ದರೆ, ಎಷ್ಟೇ ನೀರು ಹರಿದುಬರಲಿ, ಅದನ್ನು ಹೊಳೆ ತನ್ನ ಗರ್ಭದಲ್ಲಿ ಒಳಗಿಳಿಸಿಕೊಳ್ಳುತ್ತದೆ. ಮನುಷ್ಯನ ಸರ್ವಬಲ,

ಸಮಸ್ತ ವೇಗ, ಸಕಲ ಶಕ್ತಿಯನ್ನೂ ಸ್ವಧರ್ಮದ ನದಿ ಧರಿಸಬಲ್ಲದು. ಸ್ವಧರ್ಮದಲ್ಲಿ ಎಷ್ಟು ಶಕ್ತಿ ತುಂಬಿದರೂ ಕಡಮೆಯೇ. ಸ್ವಧರ್ಮದಲ್ಲಿ ಶಕ್ತಿ ತುಂಬಿದರೆ ರಜೋಗುಣದ ಹಾರಾಟ ಮುಗಿಯುತ್ತದೆ. ಚಂಚಲತೆಯ ಕೊಂಡಿ ಮುರಿದಂತಾಗುತ್ತದೆ. ಹೀಗೆ ರಜೋಗುಣವನ್ನು ಸೋಲಿಸಬೇಕು.

## ೮೦. ಸತ್ವಗುಣ — ಅದಕ್ಕೆ ಉಪಾಯ

ಇನ್ನುಳಿಯಿತು ಸತ್ವಗುಣ. ಅದರ ಬಗ್ಗೆ ಎಚ್ಚರದಿಂದ ನಡೆಯಬೇಕು. ಇದರಿಂದ ಆತ್ಮವನ್ನು ಬೇರೆ ಮಾಡುವುದು ಹೇಗೆ? ಇದು ಸೂಕ್ಷ್ಮ ವಿಚಾರದ ಸಂಗತಿ. ಸತ್ವಗುಣವನ್ನು ಸಂಪೂರ್ಣ ಕಳೆಯಲಾಗದು. ರಜಸ್ಸು ತಮಸ್ಸುಗಳನ್ನು ಪೂರಾ ಕತ್ತರಿಸಬೇಕು. ಸತ್ವಗುಣದ ಭೂಮಿಕೆ ಬೇರೆ ಬಗೆಯದು. ಗುಂಪು ಹೆಚ್ಚಾಗಿದ್ದು ಅವರನ್ನು ಓಡಿಸಬೇಕಾಗಿದ್ದಲ್ಲಿ ಸೊಂಟದ ಮೇಲಕ್ಕೆ ಗುಂಡು ಹಾರಿಸದೆ ಕಾಲಿನ ಮಟ್ಟಕ್ಕೆ ಹಾರಿಸಿ ಎಂದು ಸಿಪಾಯಿಗೆ ಅಪ್ಪಣೆ ಕೊಡುತ್ತಾರೆ ಅದರಿಂದ ಮನುಷ್ಯ ಸಾಯುವುದಿಲ್ಲ. ಗಾಯಗೊಳ್ಳುತ್ತಾನೆ. ಸತ್ವಗುಣವನ್ನು ಹೀಗೆ ಗಾಸಿಗೊಳಿಸಬೇಕೇ ವಿನಾ ಕೊಲ್ಲಬಾರದು. ರಜೋಗುಣ ತಮೋಗುಣಗಳು ಕಳೆದಮೇಲೆ ಶುದ್ಧ ಸತ್ವಗುಣ ಇರುತ್ತದೆ. ಶರೀರ ಇರುವವರೆಗೆ ಯಾವುದಾದರೊಂದು ಭೂಮಿಕೆ ಅಗತ್ಯ. ರಜ, ತಮಗಳು ಹೋದಮೇಲೆ ಶುದ್ಧ ಸತ್ವದಿಂದಲೂ ಬೇರೆಯಾಗುವುದೆಂದರೇನು?

ಸತ್ವಗುಣದ ಅಭಿಮಾನ ಅಂಟುತ್ತದೆ. ಶುದ್ಧ ಸ್ವರೂಪದಿಂದ ಆತ್ಮವನ್ನು ಕೆಳಗೆ ನೂಕುತ್ತದೆ ಅಭಿಮಾನ. ದೀಪದ ಬೆಳಕು ಹೊರಗೆ ಪ್ರಕಾಶಮಾನವಾಗಿ ಬೀಳಬೇಕಾದರೆ ಒಳಗಿನ ಕಾಡಿಗೆಯನ್ನು ತೆಗೆಯಬೇಕು. ಅದನ್ನು ಒರೆಸಿದ ಮೇಲೂ ಗಾಜಿನ ಮೇಲೆ ಧೂಳು ಇದ್ದರೆ ಅದನ್ನೂ ಒರೆಸಬೇಕು. ಆತ್ಮಪ್ರಭೆಗೆ ತಮೋಗುಣದ ಕಾಡಿಗೆಯನ್ನು ತೆಗೆಯಬೇಕು. ಆಮೇಲೆ ರಜೋಗುಣದ ಧೂಳನ್ನು ಒರೆಸಬೇಕು. ತಮೋಗುಣವನ್ನು ತೆಗೆಯಬೇಕು. ರಜೋಗುಣವನ್ನು ಒರೆಸಬೇಕು. ಆಗ ಶುದ್ಧ ಸತ್ವಗುಣದ ಗಾಜು ಉಳಿಯುತ್ತದೆ. ಸತ್ವಗುಣವನ್ನು

ಕಳೆಯಬೇಕು ಎಂದರೆ ಗಾಜನ್ನೆ ಒಡೆಯಬೇಕೆ? ಇಲ್ಲ, ಗಾಜನ್ನು ಒಡೆದರೆ ದೀಪ ಬೆಳಗದು, ದೀಪದ ಬೆಳಕು ಹರಡಲು ಗಾಜು ಬೇಕು. ಈ ಶುದ್ಧವಾದ ಹೊಳಹೊಳೆವ ಗಾಜನ್ನು ಒಡೆಯದೆ ಕಣ್ಣಿಗೆ ಬಾಧಕವಾಗದಂತೆ ಸಣ್ಣ ಕಾಗದದ ಚೂರು ಒಂದನ್ನು ಅಡ್ಡ ಇಡಬೇಕು. ಕಣ್ಣು ಕುಕ್ಕಬಾರದು. ಸತ್ವಗುಣವನ್ನು ಗೆಲ್ಲುವುದು ಎಂದರೆ ಅದರ ಅಭಿಮಾನ, ಆಸಕ್ತಿಗಳನ್ನು ಸೋಲಿಸುವುದು. ಸತ್ವಗುಣದಿಂದ ಕೆಲಸ ಮಾಡಿಸಿಕೊಳ್ಳಬೇಕು. ಎಚ್ಚರದಿಂದ ಯುಕ್ತಿಯಿಂದ ಮಾಡಿಸಿಕೊಳ್ಳಬೇಕು. ಸತ್ವಗುಣವನ್ನು ನಿರಹಂಕಾರಿಯಾಗಿ ಮಾಡಬೇಕು.

ಸತ್ವಗುಣದ ಅಹಂಕಾರವನ್ನು ಗೆಲ್ಲುವುದು ಹೇಗೆ? ಇದಕ್ಕೆ ಒಂದು ಉಪಾಯವಿದೆ. ಸತ್ವಗುಣವನ್ನು ನಮ್ಮೊಳಗೆ ಭದ್ರಗೊಳಿಸಬೇಕು. ಸತ್ವಗುಣದ ಅಭಿಮಾನ ಸಾತತ್ಯದಿಂದ ಹೋಗುತ್ತದೆ. ಸತ್ವಗುಣದ ಕರ್ಮಗಳನ್ನು ಸತತವಾಗಿ ಎಸಗಿ, ಅದನ್ನು ಸ್ವಭಾವವಾಗಿಯೇ ಮಾಡಬೇಕು. ಸತ್ವಗುಣ ಮೂರು ಗಳಿಗೆಯ ಅತಿಥಿಯಾಗಬಾರದು, ಮನೆಯವನಾಗಬೇಕು. ಯಾವಾಗಲಾದರೂ ಒಮ್ಮೆ ನಮ್ಮಿಂದ ಆಗುವ ಕೃತಿಯ ಬಗ್ಗೆ ನಮಗೆ ಅಭಿಮಾನ ಹುಟ್ಟುತ್ತದೆ. ದಿನವೂ ನಿದ್ದೆ ಮಾಡುತ್ತೇವಲ್ಲ. ಅದನ್ನು ಯಾರಿಗೂ ಹೇಳುವುದಿಲ್ಲ. ಅದೇ ರೋಗಿಯೊಬ್ಬನಿಗೆ ಹದಿನೈದು ದಿನದಿಂದ ನಿದ್ದೆಯಿಲ್ಲದೆ ಒಂದು ದಿನ ಸ್ವಲ್ಪ ನಿದ್ದೆ ಹತ್ತಲಿ, ಇವೊತ್ತು ನನಗೆ ನಿದ್ದೆ ಬಂತು ಎಂದು ಎಲ್ಲರಿಗೂ ಹೇಳುತ್ತಾನೆ. ಅವನಿಗೆ ಅದು ಮಹತ್ವದ ಸುದ್ದಿ. ನಮ್ಮ ಶ್ವಾಸೋಚ್ಛ್ವಾಸವೂ ಒಂದು ದೃಷ್ಟಾಂತ. ಇಪ್ಪತ್ತುನಾಲ್ಕು ತಾಸು ಉಸಿರಾಡುತ್ತೇವೆ. ಬರಹೋಗುವವರಿಗೆಲ್ಲ ಅದನ್ನು ಹೇಳುತ್ತೇವೆಯೇ? ನಾನು ಉಸಿರಾಡುವ ಪ್ರಾಣಿ ಎಂದು ಯಾರೂ ಪ್ರೌಢರು ಹೇಳರು. ಹರಿದ್ವಾರದಲ್ಲಿ ತೇಲಿಬಿಟ್ಟ ಕಡ್ಡಿ ಕಲ್ಕತ್ತೆಯವರೆಗೆ ೧,೫೦೦ ಮೈಲಿ ಹರಿದುಬಂದರೂ ಅದು ಬಡಾಯಿ ಕೊಚ್ಚದು. ಸಹಜ ಪ್ರವಾಹದಲ್ಲಿ ಹರಿದು ಬಂತು. ಯಾರಾದರೂ ಪ್ರವಾಹಕ್ಕೆ ಅಡ್ಡಹೋದರೆ, ಇದಿರು ಈಸಿ ಹತ್ತುಮಾರು ಹೋದರೆ-ಎಷ್ಟು ಜಂಬ ಕೊಚ್ಚಿಯಾನೋ! ಸ್ವಾಭಾವಿಕವಾದುದರಲ್ಲಿ ಅಹಂಕಾರ ಕಾಣದು.

ಒಂದು ಒಳ್ಳೇ ಕೆಲಸ ಮಾಡಿದಾಗ ಅಹಂಕಾರವೆನಿಸುತ್ತದೆ. ಯಾಕೆ? ಅದು ಸ್ವಾಭಾವಿಕವಲ್ಲ ಎಂತ. ಮಗು ಒಂದು ಒಳ್ಳೆ ಕೆಲಸ ಮಾಡಿದರೆ ತಾಯಿ ಅವನ ಬೆನ್ನು ತಡವುತ್ತಾಳೆ. ಇಲ್ಲದಿದ್ದರೆ ಅವನ ಬೆನ್ನಿಗೂ ಆಕೆಯ ಕೈಯ ಬೆತ್ತಕ್ಕೂ ಗಂಟು. ರಾತ್ರಿಯ ಗಾಢಾಂಧಕಾರದಲ್ಲಿ ಒಂದು ಮಿಣುಕು ಹುಳು. ಆಗ ಅದರ ಬಡಾಯಿ ಏನು ಕೇಳೀರಿ. ಒಮ್ಮೆಗೇ ಪೂರಾ ಮಿಂಚನ್ನು ತೋರದು. ಸ್ವಲ್ಪ ಮಿಣುಮಿಣು, ಸ್ವಲ್ಪ ತಡೆ, ಮತ್ತೆ ಮಿಣುಮಿಣು. ಅದರ ಬೆಳಕು ಸತತವಾಗಿದ್ದರೆ ಈ ಜಂಬ ಇರುತ್ತಿರಲಿಲ್ಲ. ಸಾತತ್ಯದಿಂದ ವಿಶೇಷ ಭಾವನೆ ಹೋಗುತ್ತದೆ. ಸತ್ವಗುಣ ನಮ್ಮ ಕ್ರಿಯೆಯಲ್ಲಿ ಸತತವಾಗಿ ಪ್ರಕಟವಾದರೆ ಅದೇ ಸ್ವಭಾವವಾಗುತ್ತದೆ. ಸಿಂಹಕ್ಕೆ ತನ ಶೌರ್ಯದ ಅಭಿಮಾನವಿಲ್ಲ. ಅದಕ್ಕೆ ಅದರ ಅರಿವೇ ಇಲ್ಲ. ಇದೇ ರೀತಿ ನಾವು ಸಾತ್ವಿಕರೆಂಬ ನೆನಪೂ ಆಗದಷ್ಟು ಸಹಜವಾಗಬೇಕು ಸಾತ್ವಿಕತೆ. ಬೆಳಕನ್ನು ಬೀರುವುದು ಸೂರ್ಯನ ನೈಸರ್ಗಿಕ ಕ್ರಿಯೆ. ಅದರಲ್ಲಿ ಅವನಿಗೆ ಅಭಿಮಾನವಿಲ್ಲ. ಈ ಬಗ್ಗೆ ಸೂರ್ಯನಿಗೆ ಮಾನಪತ್ರ ಕೊಡಹೋದರೆ—'ನಾನು ವಿಶೇಷ ಏನು ಮಾಡಿವೆ? ನಾನು ಬೆಳಕು ಕೊಡುತ್ತೇನೆ ಎಂದರೇನು? ಬೆಳಕು ಕೊಡುವುದು ಎಂದರೆ ನಾನು ಬದುಕಿರುವುದು. ಕೊಡದಿದ್ದರೆ ನಾನು ಸತ್ತೆ ಎಂತಲೇ. ನನಗೆ ಬೇರೆ ತಿಳಿಯದು' ಎಂದಾನು. ಸೂರ್ಯನ ಈ ಮಾತು ಇದ್ದಂತೆ ಸಾತ್ವಿಕ ಮನುಷ್ಯನದೂ ಆಗಬೇಕು. ಸತ್ವಗುಣ ರೋಮರೋಮದಲ್ಲೂ ತುಂಬಿರ ಬೇಕು. ಹೀಗೆ ಅದು ಸ್ವಭಾವವಾದರೆ ಆಗ ಅಹಂಕಾರ ಎನಿಸದು. ಸತ್ವಗುಣವನ್ನು ಸಪ್ಪೆಮಾಡಲು, ಸೋಲಿಸಲು ಇದು ಒಂದು ಉಪಾಯ.

ಇನ್ನೊಂದು ಉಪಾಯ – ಸತ್ವಗುಣದ ಆಸಕ್ತಿಯನ್ನು ಬಿಡುವುದು. ಅಹಂಕಾರ ಬೇರೆ, ಆಸಕ್ತಿ ಬೇರೆ. ಇದು ಸೂಕ್ಷ್ಮ ವಿಚಾರ. ದೃಷ್ಟಾಂತದಿಂದ ತಿಳಿದೀತು. ಸತ್ವಗುಣದ ಅಹಂಕಾರ ಹೋದರೂ ಆಸಕ್ತಿ ಇರುತ್ತದೆ. ಶ್ವಾಸೋಚ್ಛ್ವಾಸದ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಅದರ ಅಭಿಮಾನವಿಲ್ಲ. ಆದರೆ ಅದರಲ್ಲಿ ಬಹಳ ಆಸಕ್ತಿಯಿದೆ. ಐದೇ ನಿಮಿಷ ಉಸಿರಾಡಬೇಡ ಎಂದರೆ ಸಾಧ್ಯವಿಲ್ಲ. ಮೂಗಿಗೆ ಉಸಿರಾಟದ ಅಭಿಮಾನವಿಲ್ಲ. ಆದರೆ ಗಾಳಿಯನ್ನೇನೋ ಸೆಳೆಯುತ್ತಲೇ ಇರುತ್ತದೆ. ಸಾಕ್ರಟೀಸನದೊಂದು

ಸಂಗತಿಯಿದೆ. ಅವನ ಮೂಗು ಸೊಂಡು, ಅದನ್ನು ನೋಡಿ ಜನ ನಗುತ್ತಿದ್ದರು. ಆದರೆ ವಿನೋದಿ ಸಾಕ್ರಟೀಸ್ 'ನನ್ನ ಮೂಗು ಬಲು ಅಂದ' ಎನ್ನುತ್ತಿದ್ದ. ದೊಡ್ಡ ಮೂಗಿನಿಂದ ತುಂಬಾ ಗಾಳಿ ಒಳಗೆ ಹೋಗುತ್ತದೆ. ಅದೇ ಅಂದ. ಮೂಗಿಗೆ ಉಸಿರಾಟದ ಅಹಂಕಾರವಿಲ್ಲ. ಆಸಕ್ತಿಯಿದೆ. ಸತ್ವಗುಣದ ಆಸಕ್ತಿಯೂ ಇಂಥದೇ. ಭೂತದಯೆ ಅತ್ಯಂತ ಉಪಯುಕ್ತ ಗುಣ. ಆದರೆ ಅದರಲ್ಲೂ ಆಸಕ್ತಿ ಕೂಡದು. ಭೂತದಯೆಯಿರಲಿ. ಆಸಕ್ತಿ ಬೇಡ.

ಸತ್ವಗುಣದ ಮೂಲಕ ಸಾಧುಗಳು ಇತರರಿಗೆ ಮಾರ್ಗದರ್ಶಕರಾಗುತ್ತಾರೆ. ಅವರ ದೇಹ ಭೂತದಯೆಯ ಮೂಲಕ ಸಾರ್ವಜನಿಕವಾಗುತ್ತದೆ. ಬೆಲ್ಲಕ್ಕೆ ನೊಣ ಮುತ್ತುವಂತೆ ಇಡೀ ಲೋಕ ಸಾಧುವನ್ನು ಮುತ್ತುತ್ತದೆ. ಸಾಧು ಪ್ರಕಟಿಸುವ ಅಪಾರ ಪ್ರೇಮದಿಂದ ವಿಶ್ವವೇ ಅವನನ್ನು ಪ್ರೇಮಿಸುತ್ತದೆ. ಸಾಧು ತನ್ನ ದೇಹದ ಆಸಕ್ತಿಯನ್ನು ಬಿಡುತ್ತಾನೆ. ಇಡೀ ಜಗತ್ತಿನ ಆಸಕ್ತಿ ಕಟ್ಟಿಕೊಳ್ಳುತ್ತಾನೆ. ಇಡೀ ಲೋಕ ಅವನ ದೇಹವನ್ನು ನೋಡಿಕೊಳ್ಳುತ್ತದೆ. ಈ ಆಸಕ್ತಿಯನ್ನು ಸಾಧುಗಳು ದೂರ ಮಾಡಬೇಕು. ಈ ಜಗತ್ಪ್ರೇಮ, ಈ ಮಹತ್‌ಫಲದಿಂದ ಆತ್ಮವನ್ನು ದೂರಮಾಡಬೇಕು. ಎಂದೂ ನಾನು ಸ್ವಲ್ಪ ಹೆಚ್ಚು ವಿಶೇಷ ಎನಿಸಲಾಗದು. ಹೀಗೆ ಸತ್ವಗುಣವನ್ನು ವೈಗೂಡಿಸಿಕೊಳ್ಳಬೇಕು.

ಮೊದಲು ಅಹಂಕಾರವನ್ನು ಗೆಲ್ಲಬೇಕು. ಆಮೇಲೆ ಆಸಕ್ತಿಯನ್ನು. ಸಾತತ್ಯದಿಂದ ಅಹಂಕಾರವನ್ನು ಗೆಲ್ಲಬಹುದು. ಫಲಾಸಕ್ತಿಯನ್ನು ಬಿಟ್ಟು ಸತ್ವಗುಣದಿಂದ ದೊರೆವ ಫಲವನ್ನು ಈಶ್ವರಾರ್ಪಣ ಮಾಡಿ ಆಸಕ್ತಿಯನ್ನು ಗೆಲ್ಲಬೇಕು. ಬಾಳಿನಲ್ಲಿ ಸತ್ವಗುಣ ಸ್ಥಿರವಾದ ಮೇಲೆ ಒಮ್ಮೆ ಕೀರ್ತಿಯ ರೂಪದಲ್ಲಿ, ಒಮ್ಮೆ ಸಿದ್ಧಿಯ ರೂಪದಲ್ಲಿ ಫಲ ಬರುತ್ತದೆ. ಆ ಫಲ ತುಚ್ಛವೆಂದು ತಿಳಿಯಿರಿ. ಮಾವಿನ ಮರ ಒಂದಾದರೂ ಹಣ್ಣನ್ನು ತಿಂದೀತೆ? ಎಷ್ಟೇ ಮೋಹಕವಾಗಲಿ, ರಸಾಲವಾಗಿರಲಿ, ಆ ಹಣ್ಣನ್ನು ತಿನ್ನುವುದಕ್ಕಿಂತ ತಿನ್ನದಿರುವುದರಲ್ಲೇ ಅದಕ್ಕೆ ಸವಿ. ಉಪಭೋಗಕ್ಕಿಂತ ತ್ಯಾಗ ಸವಿ, ಇಡೀ ಜೀವನದಲ್ಲಿ ದೊರಕಿಸಿಕೊಂಡ ಮಹಾ ಫಲವಾದ ಸ್ವರ್ಗಸುಖವನ್ನು ಕಡೆಯಲ್ಲಿ ಧರ್ಮರಾಯ ಬಿಟ್ಟ. ಜೀವನದ ಸರ್ವ ತ್ಯಾಗಗಳ ಮೇಲೆ

ಕಲಶವೇರಿಸಿದ. ಆ ಮಧುರಫಲ ಸವಿಯಲು ಅವನಿಗೆ—ಅಧಿಕಾರವಿತ್ತು. ಅದನ್ನು ಸವಿದಿದ್ದರೆ ಮುಗಿಯುತ್ತಿತ್ತು. 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ.' ಈ ಚಕ್ರ ಅವನ ಹಿಂದೆಯೇ ಇರುತ್ತಿತ್ತು. ಧರ್ಮರಾಯನದು ಎಂಥ ತ್ಯಾಗ! ಅದು ಸರ್ವದಾ ನನ್ನ ಕಣ್ಣಿಗೆ ಕಟ್ಟಿದೆ. ಹೀಗೆ ಸತತ ಸತ್ವಾಚರಣೆ ಮಾಡಿ ಅದರ ಅಹಂಕಾರವನ್ನು ಸೋಲಿಸಬೇಕು. ತಟಸ್ಥನಾಗಿ, ಅದರ ಫಲವನ್ನು ಈಶ್ವರನಿಗೆ ಅರ್ಪಿಸಿ, ಆಸಕ್ತಿಯನ್ನು ಗೆಲ್ಲಬೇಕು. ಆಗ ಸತ್ವಗುಣವನ್ನು ಗೆದ್ದಂತೆ.

## ೮೧. ಕಡೆಯ ಮಾತು : ಆತ್ಮಜ್ಞಾನ – ಭಕ್ತಿಯ ಆಶ್ರಯ

ಇನ್ನು ಕೊನೆಯ ಮಾತು ಸತ್ವಗುಣಿಯಾದರೂ, ಅಹಂಕಾರವನ್ನು ಗೆದ್ದರೂ, ಫಲಾಸಕ್ತಿಯನ್ನು ಬಿಟ್ಟರೂ, ಈ ದೇಹ ಕಚ್ಚಿಕೊಂಡಿರುವ ವರೆಗೆ ನಡುನಡುವೆ ರಜ-ತಮಗಳ ಧಾಳಿ ಇದ್ದೇ ಇರುತ್ತದೆ. ಇವು ಸೋತವು ಎಂದು ಒಂದು ಗಳಿಗೆ ಅನಿಸೀತು. ಮತ್ತೆ ಅವು ದ್ವಿಗುಣ ವೇಗದಿಂದ ಬಂದಾವು. ಆದುದರಿಂದ ಸತತವೂ ಜಾಗರೂಕರಾಗಿರಬೇಕು. ಸಮುದ್ರದ ನೀರು ವೇಗವಾಗಿ ಬಂದು ದಡದಲ್ಲಿ ಆಖಾತವನ್ನು ಕೊರೆವ ಹಾಗೆ ರಜ-ತಮಗಳು ವೇಗವಾಗಿ ಬಂದು ಮನದಲ್ಲಿ ಆಖಾತ ತೋಡುತ್ತವೆ. ಸ್ವಲ್ಪವೂ ಸಂದು ಕೊಡಬೇಡಿ. ಕಡು ಕಟ್ಟು ಕಾವಲು ಇಡಿ. ಎಷ್ಟೇ ದಕ್ಷತೆಯಿದ್ದರೂ ಆತ್ಮ ಜ್ಞಾನವಾಗದೆ, ಆತ್ಮ ದರ್ಶನವಾಗದೆ ವಿಪತ್ತೇ. ಅಂತೇ ಏನಾದರೂ ಮಾಡಿ ಆತ್ಮಜ್ಞಾನ ಪಡೆಯಿರಿ.

ಕೇವಲ ಜಾಗೃತಿಯ ಕಸರತ್ತಿನಿಂದ ಇದು ಆಗದು. ಹಾಗಾದರೆ ಹೇಗೆ? ಅಭ್ಯಾಸದಿಂದ ಆದೀತೆ? ಇಲ್ಲ. ಒಂದೇ ಉಪಾಯ. 'ಭಗವಂತನಲ್ಲಿ ಅತ್ಯಂತ ಕಳಕಳಿಯಿಂದ ಭಕ್ತಿಯಿಡುವುದು.' ರಜಸ್ತಮೋ ಗುಣಗಳನ್ನು ಗೆದ್ದರೆ ಸತ್ವಗುಣವನ್ನು ಸ್ಥಿರಗೊಳಿಸಿ ಅದರ ಫಲಾಸಕ್ತಿಯನ್ನು ಗೆಲ್ಲಬಹುದು. ಆದರೆ ಅಷ್ಟರಿಂದ ಮುಗಿಯದು. ಆತ್ಮಜ್ಞಾನವಾಗದೆ ಇದು ಅಸಾಧ್ಯ. ಕಟ್ಟಕಡೆಗೆ ದೇವರ ದಯೆ ಬೇಕು. ಭಕ್ತಿಯಿಂದ ಆ ದಯೆಗೆ ಪಾತ್ರರಾಗಬೇಕು. ಇದನ್ನು ಬಿಟ್ಟು ಬೇರೆ ಉಪಾಯ ನನಗೆ ತೋರಲಿಲ್ಲ. ಈ ಅಧ್ಯಾಯದ ಕೊನೆಯಲ್ಲಿ ಅರ್ಜುನ ಇದನ್ನು ಕೇಳಿದ.

ಭಗವಂತ ಉತ್ತರ ಕೊಟ್ಟ: 'ಅತ್ಯಂತ ಏಕಾಗ್ರಚಿತ್ತದಿಂದ ನಿಷ್ಕಾಮ ದಿಂದ ನನ್ನನ್ನು ಭಜಿಸು, ನನ್ನ ಸೇವೆ ಮಾಡು. ಹಾಗೆ ಸೇವೆ ಮಾಡಿದವನು ಮಾಯೆಯನ್ನು ದಾಟಿ ಹೋಗುತ್ತಾನೆ. ಸಾಮಾನ್ಯವಾಗಿ ಈ ಗಹನ ಮಾಯೆಯನ್ನು ದಾಟಲು ಸಾಧ್ಯವಿಲ್ಲ.' ಭಕ್ತಿಯೇ ಅದಕ್ಕೆ ಸುಲಭೋಪಾಯ. ಇದೊಂದೇ ದಾರಿ.

ಗುರುವಾರ,
೨೬-೫-೧೯೩೨.

## ೮೨. ಪ್ರಯತ್ನ ಮಾರ್ಗ – ಭಕ್ತಿ ಬೇರೆ ಅಲ್ಲ

ಒಂದು ಅರ್ಥದಲ್ಲಿ ಇಂದು ನಾವು ಗೀತೆಯ ತುದಿಗೆ ಮುಟ್ಟಿದೇವೆ. ೧೫ ನೆ ಅಧ್ಯಾಯದಲ್ಲಿ ಎಲ್ಲಾ ವಿಚಾರಗಳೂ ಪರಿಪೂರ್ಣತೆ ಪಡೆದಿವೆ. ೧೬ ನೆ, ೧೭ ನೆ ಅಧ್ಯಾಯಗಳು ಪರಿಶಿಷ್ಟವಿದ್ದಂತೆ. ೧೮ ನೆಯದು ಉಪಸಂಹಾರ. ಅದರಿಂದಲೇ ಭಗವಂತ ಈ ಅಧ್ಯಾಯದ ಕೊನೆಯಲ್ಲಿ ಶಾಸ್ತ್ರ ಎಂಬ ಸಂಜ್ಞೆಯನ್ನು ಇದಕ್ಕೆ ಕೊಟ್ಟಿದಾನೆ.

**ಇತಿ ಗುಹ್ಯತಮಂ ಶಾಸ್ತ್ರಂ ಇದಮುಕ್ತಂ ಮಯಾನಘ**

ಹೀಗೆ ಹೇಳಿದಾನೆ ಭಗವಂತ ಕಡೆಯಲ್ಲಿ. ಇದು ಕಟ್ಟಕಡೆಯ ಅಧ್ಯಾಯ ಎಂದಲ್ಲ ಭಗವಂತ ಹೀಗೆ ಹೇಳಿದುದು. ಇಲ್ಲಿಯವರೆಗೆ ಹೇಳಿದ ಜೀವನ ಶಾಸ್ತ್ರ, ಸಿದ್ಧಾಂತ ಈ ಅಧ್ಯಾಯದಲ್ಲಿ ಪೂರ್ಣಗೊಂಡಿದೆ ಎಂತ. ಈ ಅಧ್ಯಾಯದಲ್ಲಿ ಪರಮಾರ್ಥ ಪೂರ್ಣವಾಯಿತು. ಸಕಲ ವೇದಸಾರವೂ ಅದರಲ್ಲಿ ಬಂದಿದೆ. ಮನುಷ್ಯನಿಗೆ ಪರಮಾರ್ಥ ದರ್ಶನ ಮಾಡಿಸುವುದೇ ವೇದಗಳ ಕೆಲಸ. ಅದು ಈ ಅಧ್ಯಾಯದಲ್ಲಿ ಆಗಿದೆ ಎಂದು ಇದಕ್ಕೆ 'ವೇದಸಾರ' ಎಂಬ ಗೌರವದ ಪದವಿ.

ಹದಿಮೂರನೆ ಅಧ್ಯಾಯದಲ್ಲಿ ದೇಹದಿಂದ ಆತ್ಮವನ್ನು ಬೇರೆ ಮಾಡ ಬೇಕಾದ ಅವಶ್ಯಕತೆಯನ್ನು ಕಂಡೆವು. ಹದಿನಾಲ್ಕರಲ್ಲಿ ಆ ಬಗ್ಗೆ ಸ್ವಲ್ಪ ಪ್ರಯತ್ನವಾದವನ್ನು ಪರಿಶೀಲಿಸಿದೆವು. ರಜೋಗುಣ ತಮೋಗುಣಗಳನ್ನು ನಿಗ್ರಹದಿಂದ ತ್ಯಜಿಸಬೇಕು. ಸತ್ವಗುಣವನ್ನು ಅರಳಿಸಿಕೊಂಡು ಅದರಲ್ಲಿ ಆಸಕ್ತಿಯನ್ನು ಗೆಲ್ಲಬೇಕು. ಅದರ ಫಲವನ್ನು ತ್ಯಜಿಸಬೇಕು. ಹೀಗೆ ಪ್ರಯತ್ನ ಮಾಡಬೇಕು. ಈ ಪ್ರಯತ್ನ ಸಂಪೂರ್ಣವಾಗಿ ಫಲಪ್ರದವಾಗಲು ಆತ್ಮಜ್ಞಾನ ಅಗತ್ಯ. ಅದನ್ನೇ ಕಡೆಗೆ ತಿಳಿಸಿದ್ದು. ಈ ಆತ್ಮಜ್ಞಾನ ಭಕ್ತಿಯಿಲ್ಲದೆ ಇಲ್ಲ.

ಭಕ್ತಿಮಾರ್ಗವೆಂದರೆ ಪ್ರಯತ್ನಮಾರ್ಗವಲ್ಲದೆ ಬೇರೆ ಅಲ್ಲ. ಇದನ್ನು ತಿಳಿಸಲಿಕ್ಕಾಗಿಯೆ ಈ ೧೫ ನೆ ಅಧ್ಯಾಯದ ಆದಿಯಲ್ಲಿ ಸಂಸಾರವನ್ನು

ಮಹಾ ವೃಕ್ಷಕ್ಕೆ ಹೋಲಿಸಿದೆ. ತ್ರಿಗುಣಗಳಿಂದ ಪೋಷಿತವಾದ ಪ್ರಚಂಡ ಶಾಖೆಗಳಿವೆ ಇದಕ್ಕೆ. ಅನಾಸಕ್ತಿ, ವೈರಾಗ್ಯಗಳೆಂಬ ಆಯುಧಗಳಿಂದ ಅದನ್ನು ಕಡಿಯಬೇಕು ಎಂದು ಆರಂಭದಲ್ಲೇ ಹೇಳಿದೆ. ಹಿಂದಿನ ಅಧ್ಯಾಯದಲ್ಲಿ ಹೇಳಿದ ಸಾಧನಾಮಾರ್ಗವನ್ನೇ ಇಲ್ಲಿ ಆರಂಭದಲ್ಲಿಯೆ ಮತ್ತೆ ಹೇಳಿದೆಯೆಂಬುದು ಸ್ಪಷ್ಟ. ರಜ–ತಮಗಳನ್ನು ಹೊಡೆದುಹಾಕ ಬೇಕು; ಸತ್ವಗುಣವನ್ನು ಬೆಳೆಸಿ ಅರಳಿಸಬೇಕು. ಒಂದು ವಿನಾಶಕ ಕಾರ್ಯ, ಒಂದು ವಿಧಾಯಕ ಕಾರ್ಯ. ಎರಡೂ ಸೇರಿ ಒಂದೇ ದಾರಿ. ಕಳೆ ಕೀಳುವುದೂ ಬೀಜ ಬಿತ್ತುವುದೂ ಎರಡೂ ಒಂದೇ ಕ್ರಿಯೆಯ ಅಂಗ. ಇದೂ ಹಾಗೇ. ರಾಮಾಯಣದಲ್ಲಿ ರಾವಣ ಕುಂಭಕರ್ಣ ವಿಭೀಷಣರು ಮೂವರೂ ಅಣ್ಣತಮ್ಮಂದಿರು. ಕುಂಭಕರ್ಣ ತಮೋಗುಣ, ರಾವಣ ರಜೋಗುಣ, ವಿಭೀಷಣ ಸತ್ವಗುಣ. ನಮ್ಮ ಶರೀರದಲ್ಲಿ ಈ ಮೂವರ ರಾಮಾಯಣ ರಚಿತವಾಗುತ್ತದೆ. ಈ ರಾಮಾಯಣದಲ್ಲಿ ರಾವಣ ಕುಂಭಕರ್ಣರ ನಾಶವೇ ವಿಹಿತ. ಹರಿಚರಣ ಶರಣವಾಗುವಂತಿದ್ದರೆ ಮಾತ್ರ ವಿಭೀಷಣತತ್ವ ಉನ್ನತಿಗೆ ಸಾಧಕವಾದೀತು, ಪೋಷಕವಾದೀತು. ಅದರಿಂದ ಅದು ಸಂಗ್ರಾಹ್ಯ. ೧೪ ನೆ ಅಧ್ಯಾಯದಲ್ಲಿ ಇದನ್ನು ನೋಡಿದೇವೆ. ೧೫ ನೆಯದರ ಆರಂಭದಲ್ಲಿ ಮತ್ತೆ ಅದೇ. ಸತ್ವರಜಸ್ತಮಗಳಿಂದ ತುಂಬಿದ ಸಂಸಾರವನ್ನು ಅಸಂಗ–ಶಸ್ತ್ರದಿಂದ ಕತ್ತರಿಸಿ ಹಾಕು. ರಜ ತಮಗಳನ್ನು ವಿರೋಧಿಸು. ಸತ್ವಗುಣವನ್ನು ಅರಳಿಸು. ಪವಿತ್ರನಾಗು. ಸತ್ವದ ಆಸಕ್ತಿಯನ್ನು ಗೆದ್ದು ಅಲಿಪ್ತನಾಗಿರು. ಕಮಲದ ಈ ಆದರ್ಶವನ್ನು ಭಗವದ್ಗೀತೆ ಮಂಡಿಸಿದೆ. ಭಾರತೀಯ ಸಂಸ್ಕೃತಿಯಲ್ಲಿ ಜೀವನದ ಆದರ್ಶ ವಸ್ತುವಿಗೆ, ಉತ್ತಮೋತ್ತಮ ವಸ್ತುವಿಗೆ, ಕಮಲದ ಉಪಮೆ ಕೊಟ್ಟಿದಾರೆ. ಕಮಲ ಭಾರತೀಯ ಸಂಸ್ಕೃತಿಯ ಪ್ರತೀಕ. ಉತ್ತಮೋತ್ತಮ ವಿಚಾರ ಗಳನ್ನು ಪ್ರಕಟಗೊಳಿಸುವ ಚಿಹ್ನೆಯೆಂದರೆ ಕಮಲ. ಕಮಲ ಸ್ವಚ್ಛ, ಪವಿತ್ರ, ಅಲಿಪ್ತ. ಕಮಲಕ್ಕೆ ಅಲಿಪ್ತತೆ, ಪವಿತ್ರತೆ ಎರಡೂ ಶಕ್ತಿಗಳಿವೆ. ಭಗವಂತನ ಅವಯವಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಕಮಲದ ಹೋಲಿಕೆ ಕೊಡುತ್ತಾರೆ. ನೇತ್ರಕಮಲ, ಪದಕಮಲ, ಕರಕಮಲ, ಮುಖಕಮಲ, ನಾಭಿಕಮಲ, ಹೃದಯಕಮಲ, ಶಿರಃಕಮಲ – ಎಲ್ಲೆಡೆಯಲ್ಲೂ ಸೌಂದರ್ಯ

ಪಾವಿತ್ರ್ಯಗಳೂ ಇವೆ, ಅಲಿಪ್ತತೆಯೂ ಇದೆ. ಇದನ್ನು ತೋರಿಸಬೇಕು. ನಮ್ಮ ಮನಸ್ಸಿನ ಮೇಲೆ ಮುದ್ರಿಸಬೇಕು.

ಹಿಂದಿನ ಅಧ್ಯಾಯದಲ್ಲಿ ಹೇಳಿದ ಸಾಧನೆಗೆ ಪೂರ್ಣಸ್ವರೂಪವನ್ನು ಕೊಡಲಿಕ್ಕಾಗಿಯೇ ಈ ಅಧ್ಯಾಯ. ಪ್ರಯತ್ನದಲ್ಲಿ ಭಕ್ತಿ, ಆತ್ಮಜ್ಞಾನಗಳನ್ನು ಬೆರೆಸಿದರೆ ಪೂರ್ಣತೆ ಬರುತ್ತದೆ. ಪ್ರಯತ್ನ ಮಾರ್ಗದ್ದೇ ಒಂದು ಭಾಗ ಭಕ್ತಿ. ಭಕ್ತಿ, ಆತ್ಮಜ್ಞಾನಗಳು ಸಾಧನದ ಅಂಗಗಳು. ವೇದಗಳಲ್ಲಿ ಋಷಿಗಳು ಹೇಳಿದಾರೆ: 'ಯಾರು ಜಾಗೃತರೋ ಅವರನ್ನು ವೇದಗಳು ಪ್ರೀತಿಸುತ್ತವೆ. ಅವರನ್ನು ಸಂದರ್ಶಿಸಲು ಅವು ಬರುತ್ತವೆ.'* ಎಂದರೆ ಜಾಗೃತನಾದವನ ಬಳಿಗೆ ವೇದನಾರಾಯಣ ಬರುತ್ತಾನೆ. ಜ್ಞಾನ ಬರುತ್ತದೆ, ಭಕ್ತಿ ಬರುತ್ತದೆ. ಪ್ರಯತ್ನಮಾರ್ಗ ಬೇರೆ, ಭಕ್ತಿ ಜ್ಞಾನಗಳು ಬೇರೆ ಅಲ್ಲ. ಆ ಪ್ರಯತ್ನದಲ್ಲಿ ಸವಿಯನ್ನು ಬೆರೆಸುವ ತತ್ವಗಳು ಇವು. ಈ ಅಧ್ಯಾಯದ ಸಂದೇಶ ಅದು. ಏಕಾಗ್ರಚಿತ್ತದಿಂದ ಭಕ್ತಿಜ್ಞಾನಗಳ ಈ ಸ್ವರೂಪವನ್ನು ಕೇಳಿ.

## ೮೩. ಭಕ್ತಿಯಿಂದ ಪ್ರಯತ್ನ ಸುಖಕರವಾಗುತ್ತದೆ

ಜೀವನವನ್ನು ಚೂರು ಚೂರಾಗಿ ಕತ್ತರಿಸಲು ಬಾರದು. ಕರ್ಮ ಜ್ಞಾನ ಭಕ್ತಿಗಳನ್ನು ನನ್ನಿಂದ ಬೇರೆ ಮಾಡಲಾದೀತೆ? ಅವು ಬೇರೆ ಬೇರೆ ಅಲ್ಲವೂ ಅಲ್ಲ. ಉದಾಹರಣೆಗಾಗಿ ಈ ನೆರೆಮನೆಯ ಸ್ವಯಂಪಾಕದ ಕೆಲಸವನ್ನು ನೋಡಿ. ಐದಾರು ನೂರು ಜನರಿಗೆ ಅಡಿಗೆಯಾಗಬೇಕು. ನಮ್ಮಲ್ಲಿ ಕೆಲವರು ಅದನ್ನು ಮಾಡುತ್ತಿದೀರಿ. ಅಡಿಗೆಯ ಜ್ಞಾನವಿಲ್ಲದವನು ಆ ಕೆಲಸಕ್ಕೆ ಬಂದರೆ ಅದನ್ನು ಕೆಡಿಸುತ್ತಾನೆ. ರೊಟ್ಟಿ ಹಸಿ ಹಸಿಯಾಗಿದ್ದೀತು ಅಥವಾ ಸೀದುಹೋದೀತು. ಅಡಿಗೆಯ ಜ್ಞಾನವಿದೆ ಎನ್ನಿ, ಆದರೆ ಆ ಕೆಲಸದಲ್ಲಿ ಒಲವು ಇಲ್ಲದಿದ್ದರೆ, ಭಕ್ತಿಭಾವನೆಯಿಲ್ಲದಿದ್ದರೆ, ಈ ರೊಟ್ಟಿ ನನ್ನ ಬಂಧುಗಳಿಗೆ ಎಂದರೆ ನಾರಾಯಣನಿಗೆ ಅರ್ಪಿತವಾಗುತ್ತದೆ, ಅವನ್ನು ಚೆನ್ನಾಗಿ ಸುಡಬೇಕು, ಇದು ಪ್ರಭುಸೇವೆ ಎಂಬ ಭಾವನೆ

---

* ಯೋ ಜಾಗಾರ ತಂ ಋಚಃ ಕಾಮಯನ್ತೇ
ಯೋ ಜಾಗಾರ ತಮು ಸಾಮಾನಿ ಯನ್ತಿ ।

ಎದೆಯಲ್ಲಿ ಇಲ್ಲದಿದ್ದರೆ, ಜ್ಞಾನವಿದ್ದರೂ ಅವನು ಅಡಿಗೆಗೆ ಯೋಗ್ಯನಾಗಲಾರ. ಅಡಿಗೆಯ ಜ್ಞಾನ ಬೇಕು. ಅದರಲ್ಲಿ ಒಲವೂ ಬೇಕು. ಭಕ್ತಿತತ್ತ್ವದ ರಸ ಹೃದಯದೊಳಗೆ ಇಲ್ಲದೆ ಅಡಿಗೆ ಸುರಸವಾಗದು. ಅದರಿಂದಲೇ ತಾಯಿಯ ವಿನಾ ಇದು ಸಾಧ್ಯವಿಲ್ಲ. ತಾಯಲ್ಲದೆ ಅನ್ಯರಾರು ಒಲವಿನಿಂದ, ಶ್ರದ್ಧೆಯಿಂದ ಈ ಕೆಲಸ ಮಾಡಿಯಾರು? ಈ ಕೆಲಸಕ್ಕೆ ತಪಸ್ಸೇ ಬೇಕು. ತಾಪವನ್ನು ಸಹಿಸದೆ, ಕಷ್ಟಪಡದೆ ಈ ಕೆಲಸವಾದೀತೆ? ಪ್ರೇಮ, ಜ್ಞಾನ, ಕರ್ಮಗಳು ಒಂದೇ ಕೆಲಸದಲ್ಲಿ ತೊಡಗಿದಂತೆ ಕಾಣುತ್ತವೆ. ಜೀವನದಲ್ಲಿ ಎಲ್ಲ ಕರ್ಮವೂ ಈ ಮೂರು ಗುಣಗಳ ಮೇಲೇ ನಿಂತಿದೆ. ಒಂದು ಮೂರು ಕಾಲು ಮಣೆ. ಅದರ ಕಾಲು ಒಂದು ಮುರಿದರೂ ಮಣೆ ಸರಿಯಾಗಿ ನಿಲ್ಲದು. ಮೂರು ಕಾಲು; ಅದರ ಹೆಸರಿನಲ್ಲೇ ಅದರ ಸ್ವರೂಪವಿದೆ. ಬಾಳಿನಲ್ಲೂ ಹೀಗೇ. ಜ್ಞಾನ ಭಕ್ತಿ ಕರ್ಮಗಳು ಎಂದರೆ ಶ್ರಮನಾತತ್ಯ. ಇದು ಬಾಳಿನ ಮೂರು ಕಾಲು ಮಣೆ. ಈ ಮೂರು ಕಂಬಗಳ ಮೇಲೆ ನಿಂತಿದೆ ಜೀವನ ದ್ವಾರಕೆ. ಈ ಮೂರೂ ಕಾಲು ಸೇರಿ ಒಂದು ಪದಾರ್ಥ. ಮೂರು ಕಾಲು ಮಣೆಯ ದೃಷ್ಟಾಂತ ಅಕ್ಷರಶಃ ಸರಿಹೋಗುತ್ತದೆ. ತರ್ಕಕ್ಕೆ ಭಕ್ತಿ ಜ್ಞಾನ ಕರ್ಮಗಳು ಬೇರೆ ಇರಲಿ. ಪ್ರತ್ಯಕ್ಷವಾಗಿ ಅವನ್ನು ಬೇರೆಬೇರೆ ಮಾಡಲು ಬರುವಂತಿಲ್ಲ. ಮೂರೂ ಸೇರಿ ಒಂದೇ ವಿಶಾಲವಸ್ತು.

ಹೀಗಿದ್ದರೂ ಭಕ್ತಿಯದು ವಿಶೇಷ ಗುಣವಿಲ್ಲದಿಲ್ಲ. ಯಾವ ಕರ್ಮದಲ್ಲೇ ಆಗಲಿ ಭಕ್ತಿ ಬೆರೆತರೆ ಆ ಕರ್ಮ ಸುಲಭ ಎನಿಸುತ್ತದೆ. ಸುಲಭ ವೆನಿಸುತ್ತದೆ ಎಂದರೆ ಕಷ್ಟವಾಗದು ಎಂದಲ್ಲ. ಆದರೆ ಆ ಕಷ್ಟ ಕಷ್ಟವೆನಿಸದು, ಆಂದವಾಗಿ ಕಂಡೀತು. ಹೂವಿನಂತೆ ಹಗುರಾಗಿದ್ದೀತು. ಭಕ್ತಿಮಾರ್ಗ ಸುಲಭವೆನ್ನಲು ಕಾರಣವೇನು? ಭಕ್ತಿಯ ದೆಸೆಯಿಂದ ಕರ್ಮದ ಭಾರ ಕಾಣದು. ಕರ್ಮದ ಕಾಠಿಣ್ಯ ಹೋಗುತ್ತದೆ. ಎಷ್ಟು ಕೆಲಸ ಮಾಡಿದರೂ ಏನೂ ಮಾಡದಂತೆಯೇ ಇರುತ್ತದೆ. ಭಗವಾನ್ ಕ್ರಿಸ್ತ ಒಂದೆಡೆ ಹೀಗೆ ಹೇಳಿದಾನೆ: 'ಉಪವಾಸ ಮಾಡಿದರೆ ನಿನ್ನ ಮೋರೆಯ ಮೇಲೆ ಉಪವಾಸದ ಗುರುತು ಕಾಣದಿರಲಿ. ಕೆನ್ನೆಗೆ ಗಂಧ ಹಚ್ಚಿ ಕೊಂಡವನಂತೆ ಪ್ರಫುಲ್ಲಿತವೂ ಆನಂದಮಯವೂ ಆಗಿ ಇರಲಿ. ಉಪವಾಸದ ಬಳಲಿಕೆ ಕಾಣದಿರಲಿ.' ವೃತ್ತಿಯೇ ಭಕ್ತಿಮಯವಾಗಬೇಕು; ಕಷ್ಟ

ಮರೆತೇ ಹೋಗಬೇಕು. ವೀರ ದೇಶಭಕ್ತ ನಗು ನಗುತ್ತ ಗಲ್ಲಿಗೇರಿದ ಎಂದು ಹೇಳುತ್ತೇವಲ್ಲ. ಸುಧನ್ವ ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿಳಿದ ನಗು ನಗುತ್ತ,—ಬಾಯಲ್ಲಿ ಕೃಷ್ಣ ಹರಿಗೋವಿಂದ ಎನ್ನುತ್ತ. ಇದರ ಅರ್ಥ – ಅಪಾರವಾದ ಕಷ್ಟವೇ ಇದ್ದರೂ ಭಕ್ತಿಯ ದೆಸೆಯಿಂದ ಅದು ಭಾಸವಾಗದು. ನೀರಿನಲ್ಲಿರುವ ದೋಣಿ ಸಾಗುವುದು ಕಷ್ಟವಲ್ಲ. ನೆಲದ ಮೇಲೆ, ಕಲ್ಲಿನ ಮೇಲೆ ತಂದು ಅದನ್ನು ಎಳೆದರೆ? ದೋಣಿಯ ಕೆಳಗೆ ನೀರಿದ್ದರೆ ತಾನೇ ತೇಲಿಹೋಗುತ್ತದೆ. ಅದೇರೀತಿ ನಮ್ಮ ಜೀವನನೌಕೆಯ ಕೆಳಗೆ ಭಕ್ತಿಜಲವಿದ್ದರೆ ಆ ನೌಕೆಯನ್ನು ಆನಂದದಿಂದ ಹುಟ್ಟು ಹಾಕಿ ಸಾಗಿಸಬಹುದು. ಆದರೆ ಬಾಳು ಶುಷ್ಕವಾದರೆ, ಮರಳು ನೆಲವಾದರೆ ಕಲ್ಲು ಬಂಡೆ ಇದ್ದರೆ, ದೋಣಿಯನ್ನು ನಡೆಸುವ ಕೆಲಸ ಬಹಳ ಕಠಿನವಾಗುತ್ತದೆ. ಭಕ್ತಿತತ್ವ ಬಾಳಿನ ದೋಣಿಗೆ ನೀರಿದ್ದಂತೆ; ಬಾಳನ್ನು ಸುಲಭಗೊಳಿಸುತ್ತದೆ.

ಭಕ್ತಿಮಾರ್ಗದಿಂದ ಸಾಧನೆಯಲ್ಲಿ ಸುಲಭತೆ ಬರುತ್ತದೆ ಆದರೆ ಆತ್ಮಜ್ಞಾನ ವಿನಾ ತ್ರಿಗುಣಗಳನ್ನು ಶಾಶ್ವತವಾಗಿ ದಾಟಲು ಸಾಧ್ಯವಿಲ್ಲ. ಆತ್ಮಜ್ಞಾನಕ್ಕೆ ಏನು ಸಾಧನ? ಸತ್ವನಾತತ್ಯದಿಂದ ಸತ್ವಗುಣವನ್ನು ಅರಗಿಸಿಕೊಂಡು, ಆದರ ಅಹಂಕಾರ ಫಲಾಸಕ್ತಿಗಳನ್ನು ಗೆಲ್ಲುವ ಭಕ್ತಿಯ ಪ್ರಯತ್ನವೆ ಆ ಸಾಧನ. ಈ ಸಾಧನೆಯಲ್ಲಿ ಸತತವಾಗಿ ಪ್ರಯತ್ನ ಮಾಡುತ್ತಾ ಮಾಡುತ್ತಾ ಒಂದು ದಿನ ಆತ್ಮದರ್ಶನವಾದೀತು. ಅಲ್ಲಿಯ ವರೆಗೆ ಪ್ರಯತ್ನಕ್ಕೆ ಕೊನೆಯಿಲ್ಲ. ಪರಮ ಪುರುಷಾರ್ಥದ ಮಾತು ಇದು. ಆತ್ಮದರ್ಶನ ಸಣ್ಣ ಮಾತಲ್ಲ. ಆಡಾಡುತ್ತ ಆತ್ಮದರ್ಶನವಾಗದು. ಅದಕ್ಕೆ ಸತತ ಪ್ರಯತ್ನಧಾರೆ ಅಗತ್ಯ. ಪರಮಾರ್ಥ ಮಾರ್ಗದಲ್ಲಿ ಒಂದು ಕ್ಷಣವನ್ನೂ ನಿರಾಶೆಯಲ್ಲಿ ಕಳೆಯೆ ಎಂಬುದು ಒಂದು ಷರತ್ತು. ನಿರಾಶೆ ಯಿಂದ ಸುಮ್ಮನೆ ಕೂಡುವುದಿಲ್ಲ. ಪರಮಾರ್ಥಕ್ಕೆ ಬೇರೆ ಸಾಧನವಿಲ್ಲ. ಒಮ್ಮೊಮ್ಮೆ ಸಾಧಕ ಬಳಲಿ :

"ತುಮುಕಾರನ ತಪಸಂಯುಮು ಕಿರಿಯಾ ಕಹೋಕಹಾಲೌ ಕೀಜೇ"

'ದೇವರೆ, ಎಷ್ಟು ದಿನ ತಪಸ್ಸು ಮಾಡಲಿ?' ಎಂದಾನು. ಆದರೆ ಆ ಉದ್ಗಾರ ಗೌಣ. ತಪಸ್ಸು ಸಂಯಮಗಳು ತನ್ನ ಸ್ವಭಾವವೇ ಆಗುವಷ್ಟು ಅವು ಮೈಗೂಡಲಿ. ಇನ್ನೆಷ್ಟು ದಿನ ಈ ಸಾಧನೆ ಎಂಬ

ಮಾತು ಭಕ್ತಿಗೆ ಭೂಷಣವಲ್ಲ. ಅಧೀರಭಾವ, ನಿರಾಶಾಭಾವಗಳಿಗೆ ಭಕ್ತಿ ಎಂದೂ ಎಡೆಕೊಡದು. ಇಂಥ ಬೇಸರ ಅದರಲ್ಲಿ ಬಾರದು. ಭಕ್ತಿಯಲ್ಲಿ ಉತ್ತರೋತ್ತರ ಉಲ್ಲಾಸ, ಉತ್ಸಾಹ ಮೂಡಬೇಕು. ಈ ಬಗ್ಗೆ ಈ ಅಧ್ಯಾಯದಲ್ಲಿ ಬಹಳ ಸೊಗಸಾದ ವಿಚಾರ ಮಾಡಿದೆ.

## ೮೪. ಸೇವೆಯ ತ್ರಿಪುಟಿ: ಸೇವ್ಯ, ಸೇವಕ, ಸೇವಾಸಾಧನ

ಈ ವಿಶ್ವದಲ್ಲಿ ನಮಗೆ ಅನಂತ ವಸ್ತುಗಳು ಕಾಣುತ್ತವೆ. ಇವೆಲ್ಲವನ್ನೂ ಮೂರು ಭಾಗಮಾಡಬೇಕು. ಭಕ್ತನಿಗೆ ಬೆಳಗ್ಗೆ ಎದ್ದರೆ ಕಣ್ಣಿಗೆ ಕಾಣುವುದು ಮೂರೇ ವಸ್ತು. ಅವನ ಅರ್ಧ ಲಕ್ಷ್ಯ ದೇವರ ಕಡೆ. ದೇವರ ಪೂಜೆಯ ಸಿದ್ಧತೆ ಮಾಡುತ್ತಾನೆ. ನಾನು ಸೇವಕ–ಭಕ್ತ, ಅವನು ಸೇವ್ಯ–ಭಗವಂತ; ಇವೆರಡು ಅವನ ಬಳಿ ಸದಾ ಇರುತ್ತವೆ. ಇಡೀ ಸೃಷ್ಟಿಯೆ ಅವನಿಗೆ ಪೂಜಾಸಾಮಗ್ರಿ. ಅರಳಿದ ಹೂ, ಗಂಧ, ಧೂಪದೀಪವಿದ್ದಂತೆ ಸರ್ವಸೃಷ್ಟಿ. ಮೂರೇ ವಸ್ತು: ಸೇವಕ–ಭಕ್ತ, ಸೇವ್ಯ–ಪರಮಾತ್ಮ, ಸೇವಾಸಾಧನ–ಸೃಷ್ಟಿ. ಈ ಅಧ್ಯಾಯದಲ್ಲಿರುವುದು ಈ ವಾತ. ಆದರೆ ಯಾವುದಾದರೊಂದು ಮೂರ್ತಿಯ ಪೂಜೆಮಾಡುವ ಸೇವಕನಿಗೆ ಸೃಷ್ಟಿಯಲ್ಲಿನ ಸರ್ವ ವಸ್ತುಗಳೂ ಪೂಜಾಸಾಮಗ್ರಿ ಎನಿಸದು. ತೋಟದಿಂದ ನಾಲ್ಕು ಹೂ ಹರಿದು ತರುತ್ತಾನೆ. ಎಲ್ಲಿಂದಾದರೂ ಊದಿನಕಡ್ಡಿ ತರುತ್ತಾನೆ. ಏನಾದರೂ ನೈವೇದ್ಯ ತೋರಿಸುತ್ತಾನೆ. ಅವನಿಗೆ ಆಯ್ದು ಕೊಳ್ಳಬೇಕೆನಿಸುತ್ತದೆ. ಆದರೆ ೧೫ನೆಯ ಅಧ್ಯಾಯದಲ್ಲಿರುವ ವಿಶಾಲ ಸಂದೇಶದಲ್ಲಿ ಈ ಆಯ್ಕೆಪಾಯ್ಕೆಯಿಲ್ಲ. ತಪಸ್ಸಿನ ಸಾಧನ, ಕರ್ಮದ ಸಾಧನ ಎಲ್ಲವೂ ಪರಮೇಶ್ವರನ ಸೇವೆಯ ಸಾಧನ. ಅದರಲ್ಲಿ ಕೆಲವನ್ನು ಹೂ ಎನ್ನಿ, ಕೆಲವನ್ನು ಗಂಧವೆನ್ನಿ, ಕೆಲವನ್ನು ನೈವೇದ್ಯವೆನ್ನಿ. ಹೀಗೆ ಸರ್ವ ಕರ್ಮವನ್ನೂ ಪೂಜಾ ದ್ರವ್ಯವಾಗಿ ಮಾಡಬೇಕು. ಹೀಗಿದೆ ದೃಷ್ಟಿ. ಲೋಕದಲ್ಲಿ ಮೂರೇ ವಸ್ತು. ಗೀತೆ ಯಾವ ವೈರಾಗ್ಯಮಯ ಸಾಧನ ಮಾರ್ಗವನ್ನು ನಿಮ್ಮ ಮನಸ್ಸಿನ ಮೇಲೆ ಮುದ್ರೆಯೊತ್ತಬಯಸುತ್ತದೆಯೋ ಆ ಮಾರ್ಗಕ್ಕೆ ಗೀತೆ ಭಕ್ತಿಮಯ ಸ್ವರೂಪವನ್ನು ಕೊಟ್ಟಿದೆ. ಅದರ ಕರ್ಮತೆಯನ್ನು ಕಿತ್ತುಹಾಕಿ ಸುಲಭತೆಯನ್ನು ತಂದಿದೆ.

ಆಶ್ರಮದಲ್ಲಿ ಯಾರ ಮೇಲಾದರೂ ಹೆಚ್ಚು ಕೆಲಸ ಬಿದ್ದರೆ ತನ್ನ ಮೇಲೆ ಹೆಚ್ಚು ಕೆಲಸ ಬಿದ್ದಿತಲ್ಲ ಎಂದು ಅವನಿಗೆ ಅನಿಸದು. ಇದರಲ್ಲಿ ಬಹಳ ಸಾರವಿದೆ. ಪೂಜೆಮಾಡುವವನಿಗೆ ಎರಡುಗಂಟೆ ಬಿಟ್ಟು ನಾಲ್ಕು ಗಂಟೆ ಹೊತ್ತು ಸಿಕ್ಕರೆ ಇದೇಕೆ ಇಷ್ಟು ಹೊತ್ತು ಎಂದು ಬೇಸರವಾದೀತೆ? ಹೆಚ್ಚು ಆನಂದವೇ ಆದೀತು. ಆಶ್ರಮದಲ್ಲಿ ಈ ಅನುಭವ ಪ್ರಾಪ್ತನಾಗುತ್ತದೆ. ಈ ಅನುಭವ ಸರ್ವಜೀವನದಲ್ಲಿ ಸರ್ವತ್ರ ಬರಬೇಕು. ಜೀವನವು ಸೇವಾ ಪರಾಯಣವಾಗಬೇಕು. ಅವನು ಸೇವ್ಯ, ಪುರುಷೋತ್ತಮ. ಅವನ ಸೇವೆಗಾಗಿ ಸದಾ ಸಿದ್ಧನಾದ ನಾನು – ಅಕ್ಷರಪುರುಷ. ಅಕ್ಷರಪುರುಷ ಎಂದರೆ ಎಂದೂ ದಣಿಯದ, ಸೃಷ್ಟಿಯ ಆರಂಭದಿಂದ ಸೇವೆ ಮಾಡುತ್ತಿರುವ ಸನಾತನ ಸೇವಕ. ರಾಮನ ಮುಂದೆ ಹನುಮಂತ ಸದಾ ಕೈಜೋಡಿಸಿ ನಿಂತಂತೆ. ಅವನಿಗೆ ಬೇಸರವಿಲ್ಲ. ಅವನಂತೆ ಚಿರಂಜೀವಿಯಾಗಿರಬೇಕೆಂದು ಈ ಸೇವಕ ನಿಂತಿದಾನೆ.

ಇಂಥ ಆಜನ್ಮಸೇವಕ ಅಕ್ಷರಪುರುಷ. ಪರಮಾತ್ಮನೆಂಬ ಸಂಸ್ಥೆ ಜೀವಂತವಿದೆ. ಸೇವಕ ನಾನು ಸದಾ ಇದೇನೆ. ಪ್ರಭು ಶಾಶ್ವತವಾದರೆ ನಾನೂ ಶಾಶ್ವತ. ಸೇವೆಮಾಡಿಸಿಕೊಂಡು ಅವನು ಬಳಲುತ್ತಾನೋ ಸೇವೆ ಮಾಡಿ ನಾ ದಣಿಯುತ್ತೇನೋ ನೋಡೋಣ. ಅವನು ಹತ್ತು ಅವತಾರ ಮಾಡಿದರೆ ನನ್ನದೂ ಹತ್ತು. ಅವನು ರಾಮನಾದರೆ ನಾನು ಹನುಮಂತ. ಅವನು ಕೃಷ್ಣನಾದರೆ ನಾನು ಉದ್ಧವ. ಅವನದೆಷ್ಟು ಅವತಾರಗಳೋ ನನ್ನದೂ ಅಷ್ಟೇ. ನಡೆಯಲಿ ಈ ಮಧುರ ಸ್ಪರ್ಧೆ. ಪರಮೇಶ್ವರನನ್ನು ಹೀಗೆ ಯುಗ ಯುಗ ಸೇವೆ ಮಾಡುವ, ಯಾವಾಗಲೂ ನಾಶವಾಗದ, ಜೀವವೇ ಅಕ್ಷರಪುರುಷ. ಅವನು ಪುರುಷೋತ್ತಮ – ಸ್ವಾಮಿ, ನಾನು ಅವನ ದಾಸ ಎಂಬ ಭಾವನೆ ಯಾವಾಗಲೂ ಹೃದಯದಲ್ಲಿರಬೇಕು. ನಿಮಿಷನಿಮಿಷಕ್ಕೂ ಬದಲಾಗುವ, ಅನಂತ ರೂಪಗಳಿಂದ ನಟಿಸುವ, ಈ ಸೃಷ್ಟಿಸಮಸ್ತವೂ ಪೂಜೆಯ ಸಾಧನ. ಪ್ರತ್ಯೇಕ ಕ್ರಿಯೆಯೂ ಪುರುಷೋತ್ತಮನ ಪೂಜೆಯೆ.

ಸೇವ್ಯ ಪರಮಾತ್ಮ ಪುರುಷೋತ್ತಮ, ಸೇವಕ ಜೀವ ಅಕ್ಷರಪುರುಷ. ಆದರೆ ಸಾಧನ ರೂಪವಾದ ಈ ಸೃಷ್ಟಿ ಕ್ಷರ. ಇದು ಕ್ಷರ ಎಂಬುದರಲ್ಲಿ

ದೊಡ್ಡ ಅರ್ಥವಿದೆ. ಸೃಷ್ಟಿಗೆ ಇದು ನಿಂದೆಯಲ್ಲ, ಭೂಷಣ. ಇದರಿಂದ ಸೃಷ್ಟಿ ನಿತ್ಯನವೀನವಾಗಿದೆ. ನಿನ್ನಿನ ಹೂ ಇಂದು ಪ್ರಯೋಜನವಿಲ್ಲ, ಅದು ನಿರ್ಮಾಲ್ಯವಾಯಿತು. ಸೃಷ್ಟಿ ನಾಶವಂತ ಎಂಬುದು ದೊಡ್ಡ ಭಾಗ್ಯ. ಇದು ಸೇವೆಯ ವೈಭವ. ಸೇವೆಗೆ ದಿನವೂ ಹೊಸ ಹೂ. ಇದೇ ರೀತಿ ಶರೀರವೂ ಹೊಸ ಹೊಸದನ್ನು ಧಾರಣೆಮಾಡಿ ಪರಮೇಶ್ವರನ ಸೇವೆ ಮಾಡೀತು. ನನ್ನ ಸಾಧನೆಗೆ ದಿನವೂ ಹೊಸ ರೂಪು ಕೊಟ್ಟು ಅದರಿಂದ ಹೊಸ ಪೂಜೆ ಮಾಡೇನು. ನಾಶವಂತವಾದುದರಿಂದ ಅದರಲ್ಲಿ ಸೌಂದರ್ಯವಿದೆ. ಚಂದ್ರನ ಕಲೆ ಇಂದಿನದು ನಾಳೆಯಿಲ್ಲ. ದಿನವೂ ಬೇರೆ ಲಾವಣ್ಯ. ಬಿದಿಗೆಯ ವರ್ಧಮಾನ ಚಂದ್ರನನ್ನು ಕಂಡರೆ ಎಷ್ಟು ಹಿಗ್ಗು? ಶಂಕರನ ಹಣೆಯಲ್ಲಿ ಬಿದಿಗೆಯ ಚಂದ್ರನ ಶೋಭೆ ಪ್ರಕಟವಾಗಿದೆ. ಅಷ್ಟಮಿ ಚಂದ್ರನ ಚೆಂದ ಬಹಳ ಹೆಚ್ಚು. ಅಷ್ಟಮಿಯ ದಿನ ಆಕಾಶದಲ್ಲಿ ಹಲವು ಮುತ್ತು ಕಾಣುತ್ತವೆ. ಹುಣ್ಣಿಮೆಯ ದಿನ ಚಂದ್ರನ ತೇಜದಿಂದ ಆ ಚಿಕ್ಕೆ ಕಾಣವು. ಹುಣ್ಣಿಮೆಯಲ್ಲಿ ಪರಮಾತ್ಮನ ಮುಖಚಂದ್ರ ಕಾಣುತ್ತದೆ. ಅಮಾವಾಸ್ಯೆಯ ಆನಂದ ಬಹಳ ಗಂಭೀರವಾಗಿರುತ್ತದೆ. ಆ ಹೊತ್ತು ಎಷ್ಟು ನಿಸ್ತಬ್ಧತೆ, ಎಷ್ಟು ಶಾಂತತೆ! ಚಂದ್ರನ ಒತ್ತಾಯದ ಪ್ರಕಾಶವಿಲ್ಲದುದರಿಂದ ಅಸಂಖ್ಯ ತಾರೆಗಳು ಮಿಣುಗುತ್ತಿರುತ್ತವೆ. ಅಮಾವಾಸ್ಯೆಯಲ್ಲಿ ಸ್ವಾತಂತ್ರ್ಯದ ಪೂರ್ಣ ವಿಲಾಸ. ತನ್ನ ತೇಜದ ಬಡಾಯಿ ತೋರುವ ಚಂದ್ರ ಅಂದು ಮುಗಿಲಿನಲ್ಲಿ ಇಲ್ಲ. ತನಗೆ ಪ್ರಕಾಶ ಕೊಡುವ ಸೂರ್ಯನೊಡನೆ ಏಕರೂಪವಾಗಿರುತ್ತಾನೆ. ಪರಮೇಶ್ವರನೊಡನೆ ಬೆರೆತಿರುತ್ತಾನೆ. ಸ್ವಾತ್ಮಾರ್ಪಣೆ ಮಾಡಿ ಜೀವ ತನ್ನಿಂದ ಲೋಕಕ್ಕೆ ಕಿಂಚಿತ್ತೂ ತೊಂದರೆಯಾಗದಂತೆ ಇರಬೇಕೆಂಬ ಜ್ಞಾನ ಆ ದಿನ ಬರುತ್ತದೆ. ಚಂದ್ರನ ಸ್ವರೂಪ ಕ್ಷಣ; ಬದಲಾಗುತ್ತದೆ. ಆದರೆ ಬೇರೆ ಬೇರೆ ಆನಂದ ಕೊಡುತ್ತಾನೆ.

ಸೃಷ್ಟಿಯ ನಾಶವಂತಿಕೆಯೇ ಅದರ ಅಮರತ್ವ. ಸೃಷ್ಟಿಯ ರೂಪ ಝುಳು ಝುಳು ಹರಿಯುತ್ತಿದೆ. ರೂಪಗಂಗೆ ಹರಿಯದಿದ್ದರೆ ಅಲ್ಲಿ ಗುಂಡಿಯಾಗುತ್ತದೆ. ಹೊಳೆಯ ನೀರು ಅಖಂಡವಾಗಿ ಹರಿಯುತ್ತಿರುತ್ತದೆ. ನೀರು ಸದಾ ಬದಲಾಗುತ್ತದೆ. ಆ ತೆರೆ ಬಂದು ಹೋಯಿತು, ಹೊಸದು

ಬಂದೀತು. ಆ ನೀರು ಜೀವಂತವಾಗಿರುತ್ತದೆ. ವಸ್ತುವಿನ ಆನಂದ ಅದರ ನವೀನತೆಯಲ್ಲಿದೆ. ಗ್ರೀಷ್ಮಋತುವಿನಲ್ಲೇ ದೇವರಿಗೆ ಬೇರೆ ಹೂ. ಮಳೆಗಾಲದಲ್ಲಿ ಹಸಿರು ಗರಿಕೆ. ಶರದೃತುವಿನಲ್ಲಿ ರಮಣೀಯ ಕಮಲ. ಆಯಾ ಋತುಕಾಲೋದ್ಭವ ಪುಷ್ಪಗಳಿಂದ ದೇವರನ್ನು ಪೂಜಿಸಬೇಕು. ಇದರಿಂದ ಆ ಪೂಜೆ ನಿತ್ಯನವೀನವಾಗಿ ಮೆರೆಯುತ್ತದೆ. ಬೇಸರವಾಗದು. ಚಿಕ್ಕ ಮಕ್ಕಳಿಗೆ 'ಅ' ಬರೆ, ಅದನ್ನು ತೀಡು ಎನ್ನುತ್ತೇವೆ. 'ಅ' ದ ಕಟ ಕಟ ಮಕ್ಕಳಿಗೆ ಬೇಸರ. ಅಕ್ಷರವನ್ನು ಏಕೆ ದಪ್ಪನಾಗಿಸಬೇಕೋ ಅದಕ್ಕೆ ತಿಳಿಯದು. ಬಳಪವನ್ನು ಅಡ್ಡ ಹಿಡಿದು ಬೇಗ ಅದನ್ನು ದಪ್ಪನಾಗಿಸುತ್ತದೆ. ಮುಂದೆ ಹೊಸ ಅಕ್ಷರಗಳ ಗುಂಪನ್ನು ನೋಡುತ್ತದೆ. ಬೇರೆ ಬೇರೆ ಪುಸ್ತಕ ಓದುತ್ತದೆ. ಸಾಹಿತ್ಯದ ನಾನಾ ಸುಮನಗಳನ್ನು ಅನುಭವಿಸುತ್ತದೆ. ಅದಕ್ಕೆ ಅಪಾರ ಆನಂದವಾಗುತ್ತದೆ. ಸೇವಾ ಪ್ರಾಂತದಲ್ಲೂ ಹೀಗೇ. ಹೊಸ ಹೊಸ ಸಾಧನೆಗಳಿಂದ ಸೇವೆಯ ಹುರುಪು ಹುಟ್ಟುತ್ತದೆ. ಸೇವಾವೃತ್ತಿ ವಿಕಾಸಗೊಳ್ಳುತ್ತದೆ.

ಸೃಷ್ಟಿಯ ನಾಶವಂತಿಕೆ ದಿನವೂ ಹೊಸ ಹೂವನ್ನು ಅರಳಿಸುತ್ತಿದೆ. ಊರಿನ ಪಕ್ಕದಲ್ಲಿ ಮಸಣವಿದೆ ಎಂತ ಊರಿಗೆ ರಮಣೀಯತೆ. ಹಳಬರು ಹೋಗುತ್ತಾರೆ, ಹೊಸಬರು ಬರುತ್ತಾರೆ. ಸೃಷ್ಟಿ ಹೊಸದನ್ನು ಬೆಳೆಸುತ್ತದೆ. ಹೊರಗಿನ ಸ್ಮಶಾನವಿಲ್ಲವಾದರೆ ಮನೆಯಂಗಳಕ್ಕೇ ಬಂದೀತು ಅದು. ಹಳಬರನ್ನೇ ನೋಡಿ ನೋಡಿ ಬೇಸರವಾದೀತು. ಬೇಸಿಗೆಯಲ್ಲಿ ಬಿಸಿಲು ಇರುತ್ತದೆ. ಭೂಮಿ ಸುಡುತ್ತದೆ. ಅದರಿಂದ ತ್ರಸ್ತರಾಗಬಾರದು. ಈ ರೂಪ ಬದಲಾದೀತು. ಮಳೆಯ ಸುಖವನ್ನು ಅನುಭವಿಸಲು ಸ್ವಲ್ಪ ಸುಡಬೇಕು. ನೆಲ ಚೆನ್ನಾಗಿ ಕಾಯದಿದ್ದರೆ ಮಳೆ ಸ್ವಲ್ಪ ಬಂದೊಡನೆ ನೆಲ ಕೆಸರಾಗುತ್ತದೆ. ತೃಣ-ಧಾನ್ಯ ಬೆಳೆಯದು. ನಾನೊಮ್ಮೆ ಬೇಸಗೆಯಲ್ಲಿ ಅಲೆಯುತ್ತಿದ್ದೆ. ತಲೆ ಸುಡುತ್ತಿತ್ತು. ಆನಂದವೆನಿಸುತ್ತಿತ್ತು. ಒಬ್ಬ ಗೆಳೆಯ ಹೇಳಿದ — ತಲೆ ಕಾದೀತು, ಕಷ್ಟವಾದೀತು. ನಾನು ಹೇಳಿದೆ – 'ಕಾಲ ಕೆಳಗಿನ ಮಣ್ಣು ಕಾದಿದೆ. ಈ ಮಣ್ಣಿನ ಚೆಂಡೂ ಸ್ವಲ್ಪ ಕಾಯಲಿ.' ತಲೆ ಕಾದಿದ್ದಾಗ ಹನಿ ಬಂದರೆ ಎಷ್ಟು ಆನಂದ. ಬಿಸಿಲಿನಲ್ಲಿ ಕಾಯದವನು ಮಳೆ ಬಂದರೆ ಪುಸ್ತಕಗಳ ನಡುವೆ ತಲೆಮರೆಸಿ ಕುಳಿತಾನು. ಮನೆಯೊಳಗೆ ಕೋಣೆಯಲ್ಲಿ,

ಆ ಗೋರಿಯೊಳಗೆ, ಕುಳಿತಿದ್ದಾನು. ಹೊರಗಿನ ಈ ವಿಶಾಲ ಅಭಿಷೇಕ ಪಾತ್ರಿಯ ಕೆಳಗೆ ನಿಂತು ನಲಿದಾಡಲಿಕ್ಕಿಲ್ಲ. ನಮ್ಮ ಮಹರ್ಷಿ ಮನು ಒಳ್ಳೇ ರಸಿಕ, ಸೃಷ್ಟಿಪ್ರೇಮಿ. ಸ್ಮೃತಿಯಲ್ಲಿ – ಮಳೆ ಹನಿ ಬಿದ್ದರೆ ರಜಾ ಕೊಡಬೇಕೆಂದು ಬರೆದಿದಾನೆ. ಹನಿ ಬಿದ್ದರೆ ಆಶ್ರಮದಲ್ಲಿ ಕುಳಿತು ಉರುವು ಹಾಕಬೇಕೆ? ಮಳೆಯಲ್ಲಿ ಕುಣಿಯಬೇಕು, ಆಡಬೇಕು, ಹಾಡಬೇಕು. ಸೃಷ್ಟಿಯೊಡನೆ ಏಕರೂಪವಾಗಬೇಕು. ಮಳೆಯಲ್ಲಿ ನೆಲವೂ ಮುಗಿಲೂ ಪರಸ್ಪರ ಭೇಟಿಯಾಗುತ್ತವೆ. ಆ ಭವ್ಯದೃಶ್ಯ ಎಷ್ಟು ಆನಂದದಾಯಿ! ಈ ಸೃಷ್ಟಿ ಸ್ವತಃ ಶಿಕ್ಷಣ ಕೊಡುತ್ತದೆ.

ಸೃಷ್ಟಿಯ ಕ್ಷರತೆ, ನಾಶವಂತಿಕೆ ಎಂದರೆ ಸಾಧನಗಳ ನವೀನತೆ. ಇಂಥಾ ನವನವ ಪ್ರಸವಾ, ಸಾಧನಧಾತ್ರಿ ಸೃಷ್ಟಿ; ಸೇವೆಗಾಗಿ ನಡುಬಿಗಿದು ನಿಂತ ಸನಾತನ ಸೇವಕ; ಸೇವ್ಯ ಪರಮಾತ್ಮ. ನಡೆಯಲಿ ಈ ಕ್ರೀಡೆ. ಪರಮಪುರುಷನಾದ ಪುರುಷೋತ್ತಮ ಬೇರೆ ಬೇರೆ ಸೇವಾಸಾಧನ ಕೊಟ್ಟು ನನ್ನಿಂದ ಒಲವಿನ ಸೇವೆ ಮಾಡಿಸಿಕೊಳ್ಳುತ್ತಿದಾನೆ. ನನಗೆ ನಾನಾ ಸಾಧನ ಕೊಟ್ಟು ಆಟವಾಡಿಸುತ್ತಿದಾನೆ. ನನ್ನಿಂದ ಬೇರೆಬೇರೆ ಪ್ರಯೋಗ ಮಾಡಿಸುತ್ತಿದಾನೆ. ಇಂಥ ದೃಷ್ಟಿ ಬಾಳಿನಲ್ಲಿ ಬಂದರೆ ಎಷ್ಟು ಆನಂದ ವಾದೀತು!

## ೮೫. ಅಹಂಶೂನ್ಯ ಸೇವೆ ಎಂದರೆ ಭಕ್ತಿ

ನಾವು ಮಾಡಿದ ಪ್ರತಿಯೊಂದು ಕೃತಿಯೂ ಭಕ್ತಿಮಯವಾಗಲಿ ಎಂಬುದು ಗೀತೆಯ ಇಚ್ಛೆ. ಗಳಿಗೆ, ಅರ್ಧಗಳಿಗೆ ಮಾಡಿದ ಪರಮೇಶ್ವರ ಪೂಜೆ ಸರಿ. ಬೆಳಗ್ಗೆ ಸಂಜೆ ಸುಂದರವಾದ ಸೂರ್ಯಪ್ರಭೆ ಬಣ್ಣ ಬೀರಿದ್ದಾಗ ಚಿತ್ತವನ್ನು ಸ್ಥಿರಗೊಳಿಸಿ ತಾಸು ಅರ್ಧತಾಸು ಸಂಸಾರವನ್ನು ಮರೆಯುವುದೂ ಅನಂತದ ಚಿಂತನೆ ಮಾಡುವುದೂ ಉತ್ಕೃಷ್ಟ ವಿಚಾರ. ಈ ಸದಾಚಾರವನ್ನು ಎಂದೂ ಬಿಡಬೇಡಿ. ಆದರೆ ಗೀತೆಗೆ ಇಷ್ಟರಿಂದ ಸಮಾಧಾನವಿಲ್ಲ. ಬೆಳಗಿನಿಂದ ಸಂಜೆಯವರೆಗೆ ಯಚ್ಚ, ಯಾವತ್ ನಡೆವ ಸರ್ವ ಕ್ರಿಯೆಯೂ ಭಗವಂತನ ಪೂಜೆಗಾಗಿ ಎಂದೇ ನಡೆಯಬೇಕು. ಸ್ನಾನ ಮಾಡುವಾಗ, ಊಟ ಮಾಡುವಾಗ, ಕಸ ಗುಡಿಸುವಾಗ ಅವನನ್ನು ಸ್ಮರಿಸುತ್ತಿರಬೇಕು.

ಇದು ನನ್ನ ಸ್ವಾಮಿಯ, ಬಾಳಮೊರೆಯ ಮನೆಯಂಗಳ ಎಂದು ಗುಡಿಸ ಬೇಕು. ಹಾಗೆ ಅನಿಸಬೇಕು. ಈ ದೃಷ್ಟಿಯಿಂದ ಸಮಸ್ತ ಕರ್ಮವೂ ಪೂಜಾ ಕರ್ಮವಾಗಬೇಕು. ಈ ದೃಷ್ಟಿ ಬಂದರೆ ನಡತೆಯಲ್ಲಿ ಎಷ್ಟು ವ್ಯತ್ಯಾಸವಾಗುತ್ತದೋ ನೋಡಿ. ಪೂಜೆಗಾಗಿ ಹೂವನ್ನು ಹೇಗೆ ಕಾಳಜಿ ಯಿಂದ ಆರಿಸುತ್ತೇವೋ, ಮೃಸವಾಗಿ ಹೇಗೆ ಬಟ್ಟಲಲ್ಲಿ ಇಡುತ್ತೇವೋ, ಅದರ ಮೇಲೆ ಭಾರ ಬೀಳದಂತೆ ಹೇಗೆ ನೋಡುತ್ತೇವೋ, ಎಲ್ಲಿ ಹೊಲಸು ಆದಾವೋ ಎಂದು ಹೇಗೆ ಮೂಸುವುದೂ ಕೂಡ ಇಲ್ಲವೋ, ಹಾಗೇ ಬಾಳಿನ ದಿನ ದಿನದ ಕೆಲಸಗಳಲ್ಲಿ ದೃಷ್ಟಿ ಬರಬೇಕು. ಇದು ನನ್ನ ಹಳ್ಳಿ. ಇಲ್ಲಿ ಒಕ್ಕಲಿಗರ ರೂಪದಲ್ಲಿ ನಾರಾಯಣ ವಿಹರಿಸುತ್ತಿದ್ದಾನೆ. ಈ ಹಳ್ಳಿಯನ್ನು ನಾನು ಗುಡಿಸುತ್ತೇನೆ, ನಿರ್ಮಲವಾಗಿಡುತ್ತೇನೆ. ಗೀತೆಯಲ್ಲಿ ಈ ದೃಷ್ಟಿಯೇ ಸರ್ವಸ್ವ. ಸರ್ವಕರ್ಮವೂ ಸ್ವಾಮಿಪೂಜೆ. ಈ ಮಾತನ್ನು ಹೇಳುವುದರಲ್ಲಿ ಗೀತೆಗೆ ಬಹಳ ಹುರುಪು. ಆವೇಶ. ಗೀತೆಯಂಥ ಗ್ರಂಥರಾಜಕ್ಕೆ ಗಳಿಗೆ ಅರೆಗಳಿಗೆಯ ಪೂಜೆಯಿಂದ ತೃಪ್ತಿಯಿಲ್ಲ. ಇಡೀ ಬಾಳು ಹರಿಮಯವಾಗಬೇಕು, ಪೂಜಾರೂಪವಾಗಬೇಕು. ಇದು ಗೀತೆಯ ಹವ್ಯಾಸ.

ಪುರುಷೋತ್ತಮ ಯೋಗವನ್ನು ಹೇಳಿ ಕರ್ಮಮಯ ಜೀವನಕ್ಕೆ ಗೀತೆ ಪೂರ್ಣತೆ ಕೊಡುತ್ತದೆ. ಅವನು ಸೇವ್ಯ ಪುರುಷೋತ್ತಮ; ನಾನು ಅವನ ಸೇವಕ; ಈ ಸೃಷ್ಟಿ ಸೇವಾಸಾಧನ. ಈ ಸಂಗತಿ ಒಂದು ಸಲ ಅನುಭವವಾಯಿತೋ ಆ ಮೇಲೆ ಕೇಳುವುದೇನಿದೆ?

ತುಕಾರಾಮರು ಹೇಳಿದಾರೆ :

“ ಆಯಿತೊ ದರುಶನ, ಮಾಡೇನು ನಾ ಸೇವೆ
ಹಾಯುದು ಹಿಡಿಯುದು ಮನಕೆ ಬೇರೇನೂವೆ ”*

ಅನಂತರ ಅಖಂಡ ಸೇವೆ ಸಾಧಿಸೀತು. ನಾನು ಎನ್ನಲು ಯಾರೂ ಇಲ್ಲದಂತಾದೀತು. ನಾನು – ನನ್ನತನ ಅಳಿದೀತು – ಎಲ್ಲವೂ ಭಗವಂತನಿ

---

* ಝಾಲಿಯಾ ದರ್ಶನ ಕರೀನ ಮೀ ಸೇವಾ ।
ಆಣಿಕ ಕಾಂಹೀ ದೇವಾ ನ ಲಗೇ ದುಜೇಂ ॥

ಗಾಗಿ. ಪರಾರ್ಥವನ್ನು ಸವಿಯುವುದಲ್ಲದೆ ಬೇರಾವುದೂ ಇರಲಿಕ್ಕಿಲ್ಲ. ನನ್ನೊಳಗಿನ 'ನನ್ನತನ'ವನ್ನು ಕಿತ್ತೆಸೆದು ಬಾಳನ್ನು ಹರಿಪರಾಯಣವಾಗಿಸಿ ಭಕ್ತಿಮಯವಾಗಿಸಬೇಕು – ಗೀತೆ ಪರಿಪರಿಯಲ್ಲಿ ಅದನ್ನು ಹೇಳಿದೆ. ಸೇವ್ಯ ಪರಮಾತ್ಮ, ಸೇವಕ ನಾನು, ಸಾಧನರೂಪದ ಈ ಸೃಷ್ಟಿ ಪರಿಗ್ರಹದ ಹೆಸರನ್ನೆ ಒರೆಸಿಹಾಕಿದಾರೆ. ಬಾಳಿನಲ್ಲಿ ಮತ್ತಾವ ಚಿಂತೆಯೂ ಇಲ್ಲ.

## ೮೬. ಜ್ಞಾನಲಕ್ಷಣ : ನಾನು ಪುರುಷ, ಅವನು ಪುರುಷ, ಅದೂ ಪುರುಷ

ಹೀಗೆ ಕರ್ಮದಲ್ಲಿ ಭಕ್ತಿಯನ್ನು ಬೆರೆಸುವ ವಿಷಯವೇನೋ ಆಯಿತು. ಆದರೆ ಅದರಲ್ಲಿ ಜ್ಞಾನವೂ ಬೇಕು. ಇಲ್ಲದಿದ್ದರೆ ಗೀತೆಗೆ ಸಮಾಧಾನವಿಲ್ಲ. ಹಾಗೆಂದರೆ ಇವು ಬೇರೆ ಬೇರೆ ವಸ್ತುಗಳಲ್ಲ. ಮಾತಿನಲ್ಲಿ ಬೇರೆ ಬೇರೆ ಶಬ್ದ ಬಳಸುತ್ತೇವೆ. ಅಷ್ಟೆ. ಕರ್ಮ ಎಂದರೇನೇ ಭಕ್ತಿ. ಯಾವುದೋ ಕೆಲವು ಕರ್ಮಗಳಲ್ಲಿ ಭಕ್ತಿಯನ್ನು ತಂದು ಬೆರೆಸಬೇಕಾಗಿಲ್ಲ. ಜ್ಞಾನದ್ದೂ ಇಷ್ಟೇ. ಇಂಥ ಜ್ಞಾನ ಹೇಗೆ ದೊರೆತೀತು? 'ಸರ್ವತ್ರ ಪುರುಷದರ್ಶನವಾದರೆ ಜ್ಞಾನ ಲಭಿಸುತ್ತದೆ' ಎಂದು ಗೀತೆ ಹೇಳುತ್ತದೆ. ನೀನು ಸೇವೆ ಮಾಡುವ ಸನಾತನ ಸೇವಕ. ನೀನು ಸೇವಾ ಪುರುಷ. ಅವನು ಪುರುಷೋತ್ತಮ – ಸೇವ್ಯಪುರುಷ. ನಾನಾ ರೂಪಧಾರಿಣಿಯಾದ ಈ ವಾಹಿನಿ, ನಾನಾ ಸಾಧನ ಸಾಧಕವಾದ ಈ ಸೃಷ್ಟಿಯೂ ಪುರುಷನೇ.

ಈ ದೃಷ್ಟಿಯನ್ನಿಡುವುದು ಎಂದರೇನು? ಸರ್ವತ್ರ ಅವ್ಯಾಜ ನಿರ್ಮಲ ಸೇವಾಭಾವವನ್ನು ಅಳವಡಿಸಿಕೊಳ್ಳುವುದು. ನಿನ್ನ ಕಾಲಿನಲ್ಲಿ ಚಪ್ಪಲಿ ಕಿರು ಕಿರುಗುಟ್ಟುತ್ತಿದೆ. ಅದಕ್ಕೆ ಸ್ವಲ್ಪ ಎಣ್ಣೆ ಸವರು. ಅದರಲ್ಲಿ ಪರಮಾತ್ಮನ ಅಂಶವಿದೆ. ಅದನ್ನು ಚೆನ್ನಾಗಿ ಇಡು. ಸೇವಾಸಾಧನವಾದ ರಾಟೆಗೆ ಎಣ್ಣೆ ಕುಡಿಸು. ಅದು ಸದ್ದು ಮಾಡುತ್ತಿದೆ. 'ನೇತಿ ನೇತಿ' ನೂಲೆ, ನೂಲಲೊಲ್ಲೆ – ಎನ್ನುತ್ತಿದೆ. ರಾಟೆ ಸೇವಾಸಾಧನ; ಅದನ್ನು ಮಟ್ಟಸ ವಾಗಿಡು. ಅದರ ಮಾಲೆ, ಅದು ಅದರ ಜನಿವಾರ. ಚೆನ್ನಾಗಿಡು. ಇಡೀ ಸೃಷ್ಟಿಯನ್ನು ಚೈತನ್ಯಮಯವೆಂದು ಭಾವಿಸು. ಅದನ್ನು ಜಡವೆಂದು ತಿಳಿಯಬೇಡ. ಇಂಪಾದ ಓಂಕಾರದ ಹಾಡು ಹಾಡುತ್ತದೆ ರಾಟೆ. ಅದು

ಜಡವೇ ? ಪರಮಾತ್ಮನ ಮೂರ್ತಿಯೆ ಅದು ! ಎತ್ತಿನ ಹಬ್ಬದ ದಿನ ಅಹಂಕಾರ ಬಿಟ್ಟು ಎತ್ತಿನ ಪೂಜೆ ಮಾಡುತ್ತೇವೆ. ಈ ಸಂಗತಿ ಬಹಳ ಮಹತ್ವದ್ದು. ಹಬ್ಬದ ವಿಚಾರ ದಿನವೂ ಮನಸ್ಸಿನಲ್ಲಿರಲಿ. ಎತ್ತನ್ನು ಚೆನ್ನಾಗಿ ಇಟ್ಟುಕೊಂಡು ಅದರಿಂದ ಯಥಾಯೋಗ್ಯ ಕೆಲಸವನ್ನು ಮಾಡಿಸಿಕೊಳ್ಳೋಣ. ಆವೊತ್ತಿನ ಭಕ್ತಿ ಆವೊತ್ತೇ ಮುಗಿಯಬಾರದು. ಎತ್ತು ಪರಮಾತ್ಮನ ಮೂರ್ತಿ. ನೊಗ ನೇಗಿಲನ್ನು, ಬೇಸಾಯದ ಎಲ್ಲಾ ಮುಟ್ಟನ್ನೂ ಸರಿಯಾಗಿಡು. ಸೇವೆಯ ಸರ್ವಸಾಧನವೂ ಪವಿತ್ರವೇ. ಎಷ್ಟು ವಿಶಾಲವಾಗಿದೆ ಈ ದೃಷ್ಟಿ. ಪೂಜೆ ಮಾಡುವುದೆಂದರೆ ಕುಂಕುಮ ಗಂಧಾಕ್ಷತೆಗಳ ಧಾರಣವಲ್ಲ. ಪಾತ್ರೆಯನ್ನು ಕನ್ನಡಿಯಂತೆ ಬೆಳಗಿಡಲು ಅದು ಪಾತ್ರೆಯ ಪೂಜೆ. ಸ್ವಚ್ಛವಾಗಿ ಒರೆಸಿ ಇಟ್ಟರೆ ಅದೇ ದೀಪದ ಪೂಜೆ. ಕುಡುಗೋಲನ್ನು ಮಸೆದು ಸಿದ್ಧಮಾಡಿಟ್ಟುಕೊ ಬೇಸಾಯಕ್ಕೆ. ಅದೇ ಅದರ ಪೂಜೆ. ಬಾಗಿಲಿನ ಮರಡು ತುಕ್ಕು ಹಿಡಿದಿದೆ. ಎಣ್ಣೆ ಹಾಕಿ ಅದನ್ನು ಸಂತಸಗೊಳಿಸು. ಅದೇ ಅದರ ಪೂಜೆ. ಜೀವನದಲ್ಲಿ ಸರ್ವತ್ರವೂ ಈ ದೃಷ್ಟಿಯನ್ನು ತಂದುಕೊಳ್ಳಬೇಕು. ಸೇವಾದ್ರವ್ಯವನ್ನು ಉತ್ಕೃಷ್ಟವಾಗಿ ನಿರ್ಮಲವಾಗಿ ಇಟ್ಟುಕೊಳ್ಳಬೇಕು. ನಾನು ಅಕ್ಷರಪುರುಷ, ಅವನು ಪುರುಷೋತ್ತಮ, ಅದು ಸಾಧನರೂಪ ಸೃಷ್ಟಿ. ಇದೆಲ್ಲವೂ ಪುರುಷನೇ, ಪರಮಾತ್ಮನೇ ! ಎಲ್ಲೆಲ್ಲೂ ಒಂದೇ ಚೈತನ್ಯ ಆಟವಾಡುತ್ತಿದೆ. ಈ ದೃಷ್ಟಿ ಬಂದರೆ ನಮ್ಮ ಕರ್ಮದಲ್ಲಿ ಜ್ಞಾನವೇ ಹರಿದುಬಂದಂತೆ.

ಕರ್ಮದಲ್ಲಿ ಭಕ್ತಿಯನ್ನು ತುಂಬಿ, ಮೇಲೆ ಜ್ಞಾನವನ್ನು ಸುರಿದರೆ ಆಗ ಜೀವನವೆ ದಿವ್ಯ ರಸಾಯನವಾದಂತೆ. ಗೀತೆ ಕಟ್ಟಕಡೆಗೆ ನಮ್ಮನ್ನು ಅದ್ವೈತಮಯ ಸೇವೆಯ ದಾರಿಯಲ್ಲಿ ತಂದುಬಿಟ್ಟಿದೆ. ಸಕಲ ಸೃಷ್ಟಿಯಲ್ಲೂ ಮೂವರೇ ಪುರುಷರು. ಒಬ್ಬನೇ ಪುರುಷೋತ್ತಮ ಈ ಮೂರೂ ರೂಪ ಧರಿಸಿದಾನೆ. ಮೂವರು ಸೇರಿ ಒಬ್ಬನೇ ಪುರುಷ. ಕೇವಲ ಅದ್ವೈತ. ಪರಮೋಚ್ಚ ಶಿಖರದಮೇಲೆ ಇಲ್ಲಿ ನಮ್ಮನ್ನು ತಂದುಬಿಟ್ಟಿದೆ ಗೀತೆ. ಕರ್ಮ, ಭಕ್ತಿ, ಜ್ಞಾನ ಏಕರೂಪ. ಜೀವ, ದೇವ, ಸೃಷ್ಟಿ ಒಂದೇ ರೂಪ. ಕರ್ಮ, ಜ್ಞಾನ, ಭಕ್ತಿಗಳಲ್ಲಿ ವಿರೋಧವೇ ಇಲ್ಲ. ಜ್ಞಾನದೇವರು ಅಮೃತಾನುಭವಕ್ಕೆ ಮಹಾರಾಷ್ಟ್ರಕ್ಕೆ ರುಚಿಸುವ ದೃಷ್ಟಾಂತ ಕೊಟ್ಟಿದಾರೆ : ಒಂದೇ ಕಲ್ಲಿನಲ್ಲಿ

ಕೊರೆದ ಕಲ್ಲಿನ ಗುಡಿ.* ಆ ಕಲ್ಲಿನಲ್ಲಿಯೆ ಕೆತ್ತಿದ ದೇವ, ಆ ದೇವರಿದಿರು ಕಲ್ಲಿನ ಭಕ್ತ ಒಬ್ಬ. ಅವನ ಬಳಿ ಕಲ್ಲಿನಲ್ಲಿ ಮಾಡಿದ ಹೂ. ಇದೆಲ್ಲವೂ ಒಂದೇ ಕಲ್ಲಿನಿಂದ ಮಾಡಿದುದು. ಅಖಂಡವಾದ ಒಂದೇ ಕಲ್ಲು ಎಲ್ಲ ರೂಪಗಳನ್ನೂ ತಳೆದು ನಟಿಸುತ್ತಿದೆ. ಭಕ್ತಿಯ ವ್ಯವಹಾರದಲ್ಲೂ ಹೀಗೇಕೆ ಆಗಬಾರದು? ಬ್ರಹ್ಮಸೃಷ್ಟಿ, ಈ ಪೂಜಾದ್ರವ್ಯ ಪ್ರತ್ಯೇಕವಾಗಿದ್ದೂ ಆತ್ಮರೂಪಿಯೇಕೆ ಆಗಬಾರದು? ಸ್ವಾಮಿ-ಸೇವಕ ಸಂಬಂಧವಿದ್ದೂ ಐಕ್ಯವೇಕೆ ಆಗಬಾರದು? ಮೂವರು ಪುರುಷರೂ ಒಂದೇ. ಜ್ಞಾನ, ಕರ್ಮ, ಭಕ್ತಿ ಮೂರನ್ನೂ ಸೇರಿಸಿ ಒಂದು ವಿಶಾಲ ಪ್ರವಾಹ ಮಾಡಬೇಕು. ಹೀಗಿದೆ ಆ ಪರಿಪೂರ್ಣ ಪುರುಷೋತ್ತಮಯೋಗ. ಸೇವಕ, ಸ್ವಾಮಿ, ಸೇವಾ ದ್ರವ್ಯಗಳು ಏಕರೂಪವಾಗಿದ್ದೂ ಭಕ್ತಿಪ್ರೇಮದ ಆಟವಾಡಬೇಕು.

ಹೀಗೆ ಈ ಪುರುಷೋತ್ತಮಯೋಗ ಯಾರ ಹೃದಯದಲ್ಲಿ ಮೂಡುತ್ತಿದೆಯೋ ಅವನು ನಿಜವಾಗಿ ಭಕ್ತಿ ತೋರಬಲ್ಲ.

### ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ

ಇಂಥ ಪುರುಷ ಜ್ಞಾನಿಯಾಗಿದ್ದೂ ಸಂಪೂರ್ಣ ಭಕ್ತನಾಗಿರುತ್ತಾನೆ. ಎಲ್ಲಿ ಜ್ಞಾನವಿದೆಯೋ ಅಲ್ಲಿ ಪ್ರೇಮವೂ ಇದೆ. ಪರಮೇಶ್ವರ ಜ್ಞಾನ, ಪರಮೇಶ್ವರ ಪ್ರೇಮ ಬೇರೆ ಬೇರೆ ವಿಷಯಗಳಲ್ಲ. ಹಾಗಲಕಾಯಿ ಕಹಿ. ಕಹಿಯೆನಿಸಿದರೆ ಅದರಲ್ಲಿ ಪ್ರೀತಿ ಹುಟ್ಟದು. ಒಂದು ಅಪವಾದವಿದ್ದರೆ ಇದ್ದೀತು. ಕಹಿ ಎನಿಸಿದರೆ ಬೇಸರ ಬರುತ್ತದೆ. ಅದೇ ಕಲ್ಲುಸಕ್ಕರೆ ಎನಿಸಿತೋ ಕರಗಲು ತೊಡಗುತ್ತದೆ. ಕೂಡಲೆ ಪ್ರೀತಿಯ ಝರಿ ಹುಟ್ಟುತ್ತದೆ. ಪರಮೇಶ್ವರನ ಬಗ್ಗೆ ಜ್ಞಾನವಾಗುವುದೂ, ಪ್ರೀತಿ ಹುಟ್ಟುವುದೂ ಒಂದೇ. ಪರಮೇಶ್ವರನ ರೂಪದ ಮಾಧುರ್ಯಕ್ಕೆ ಸಕ್ಕರೆಯಂಥ ಕಸದ ಹೋಲಿಕೆ ಕೊಡುವುದೆ? ಆ ಮಧುರ ಪರಮೇಶ್ವರನ ಜ್ಞಾನವಾದ ಮರುಗಳಿಗೆಯೇ ಪ್ರೇಮಭಾವ ಹುಟ್ಟುತ್ತದೆ. ಜ್ಞಾನವಾಗುವುದು, ಪ್ರೇಮ ಮೂಡುವುದು ಎರಡೂ ಪ್ರತ್ಯೇಕ ಕ್ರಿಯೆಗಳಲ್ಲ. ಅದ್ವೈತದಲ್ಲಿ ಭಕ್ತಿಯಿದೆಯೋ ಇಲ್ಲವೋ ಎಂಬ

---

* ದೇವ ದೇಊಳ ಪರಿವಾರು । ಕೀಜೇ ಕೋರೂನಿ ಡೋಂಗರೂ ।
ತೈಸಾ ಭಕ್ತೀಚಾ ದೇಹಾರೂ । ಕಾಂ ನಹೋ ಆವಾ ॥

ವಾದವನ್ನೆಬ್ಬಿಸಬೇಡ. ಭಕ್ತಿ ಜ್ಞಾನಗಳು ಒಂದೇ ವಸ್ತುವಿಗೆ ಎರಡು ಹೆಸರು. ಜ್ಞಾನದೇವರು ಹೇಳಿದಾರೆ :

ಅದೇ ಭಕ್ತಿ, ಅದೇ ಜ್ಞಾನ । ವಿರಲನೊಬ್ಬನೇ ಕಾಣ ॥

ಭಕ್ತಿ ಹಾಗೂ ಜ್ಞಾನ, ಒಂದಕ್ಕೇ ಎರಡು ಹೆಸರು.

ಪರಮಭಕ್ತಿ ಜೀವನದಲ್ಲಿ ಒಡಮೂಡಿದರೆ ಮಾಡಿದ ಕರ್ಮ ಭಕ್ತಿ ಜ್ಞಾನಗಳಿಂದ ಬೇರೆಯಾಗಿರದು. ಕರ್ಮ ಭಕ್ತಿಜ್ಞಾನಗಳು ಸೇರಿ ಒಂದೇ ರಮಣೀಯ ರೂಪವಾಗುತ್ತದೆ. ಈ ರಮಣೀಯ ರೂಪದೊಳಗಿನಿಂದ ಅದ್ಭುತ ಪ್ರೇಮಮಯ, ಜ್ಞಾನಮಯ ಸೇವೆ ಸಹಜವಾಗಿ ನಿರ್ಮಾಣ ವಾಗುತ್ತದೆ. ನನಗೆ ತಾಯಿಯ ಮೇಲೆ ಪ್ರೀತಿ. ಈ ಪ್ರೀತಿ ಕರ್ಮದಲ್ಲಿ ಪ್ರಕಟವಾಗಬೇಕು. ಪ್ರೇಮ ಸದಾ ದುಡಿಯುತ್ತಿರುತ್ತದೆ, ಸೇವೆಯಲ್ಲಿ ಹೊರಬೀಳುತ್ತದೆ, ಸೇವೆಯೇ ಪ್ರೇಮದ ಬಾಹ್ಯರೂಪ. ಅನಂತ ಸೇವಾ ಕರ್ಮದಲ್ಲಿ ನಾಟ್ಯವಾಡುತ್ತದೆ ಪ್ರೇಮ. ಪ್ರೇಮವಿದ್ದಲ್ಲಿ ಜ್ಞಾನ ಬರುತ್ತದೆ. ನಾನು ಯಾರ ಸೇವೆ ಮಾಡಬೇಕೋ, ಅವರಿಗೆ ಯಾವುದು ಇಷ್ಟವೋ ನನಗೆ ತಿಳಿಯಬೇಡವೆ? ಇಲ್ಲವಾದರೆ ಸೇವೆ ದುಸ್ಸೇವೆಯಾದೀತು. ಪ್ರೇಮಕ್ಕೆ ಸೇವ್ಯ ವಸ್ತುವಿನ ಜ್ಞಾನ ಅಗತ್ಯ. ಪ್ರೇಮದ ಪ್ರಭಾವ ಕಾರ್ಯದ್ವಾರಾ ಪ್ರಸಾರವಾಗಲು ಜ್ಞಾನ ಅವಶ್ಯಕ. ಆದರೆ ಅದರ ತಳಾದಿ ಪ್ರೇಮ. ಅದೇ ಇಲ್ಲದಿದ್ದರೆ ಜ್ಞಾನ ನಿಷ್ಪ್ರಯೋಜಕ. ಪ್ರೇಮದಿಂದ ಮಾಡಿದ ಕರ್ಮವೇ ಬೇರೆ, ಸಾಮಾನ್ಯ ಕರ್ಮ ಬೇರೆ. ಹೊಲದಿಂದ ಬಳಲಿಬಂದ ಮಗನನ್ನು ನೋಡಿ ಮುದಿ ತಾಯಿ ಪ್ರೀತಿಯಿಂದ 'ಒಳಲಿ ಬಂದೆಯಾ ಮಗು ' ಎಂದರೆ, ಆ ಚಿಕ್ಕ ಕ್ರಿಯೆಯಲ್ಲಿ ಎಷ್ಟು ಸಾಮರ್ಥ್ಯವಿದೆಯೋ! ಬಾಳಿನಲ್ಲಿ ಸರ್ವ ಕರ್ಮದಲ್ಲೂ ಜ್ಞಾನ ಭಕ್ತಿಗಳನ್ನು ತುಂಬು. ಅದನ್ನೇ ಪುರುಷೋತ್ತಮ ಯೋಗ ಎನ್ನುವುದು.

## ೮೭. ಸರ್ವ ವೇದಸಾರವೂ ನನ್ನ ಕೈಯಲ್ಲೇ

ಇದೇ ಸಕಲ ವೇದದ ಸಾರ. ವೇದಗಳು ಅನಂತ. ಅನಂತ ವೇದಗಳ ಸಾರಸಂಗ್ರಹ ಈ ಪುರುಷೋತ್ತಮಯೋಗ. ವೇದ ಎಲ್ಲಿದೆ? ವೇದಗಳದು

ದೊಡ್ಡದೊಂದು ಸ್ವಾರಸ್ಯವಿದೆ. ವೇದಸಾರ ಎಲ್ಲಿ? ಈ ಅಧ್ಯಾಯದ ಆರಂಭದಲ್ಲಿಯೇ 'ಛಂದಾಂಸಿ ಪರ್ಣಾನಿ' ಎಂದು ಹೇಳಿದೆ. ಅಯ್ಯಾ, ಆ ವೇದ ಈ ಗಿಡದ ಎಲೆ ಎಲೆಯಲ್ಲಿಯೂ ತುಂಬಿದೆ. ಆ ಸಂಹಿತೆಯಲ್ಲಿ, ನಿನ್ನ ಚೀಲದಲ್ಲಿ ಅಡಗಿಲ್ಲ ವೇದ. ಈ ವಿಶ್ವದಲ್ಲಿ ಎಲ್ಲೆಲ್ಲೂ ಹರಡಿದೆ. ಇಂಗ್ಲಿಷ್ ಕವಿ ಷೇಕ್ಸ್‌ಪಿಯರ್ ಹೇಳಿದಾನೆ — 'ಹರಿವ ಹೊಳೆಯಲ್ಲಿ ಸದ್ಗ್ರಂಥ, ಕಲ್ಲಿನಲ್ಲಿ ಪ್ರವಚನ ಕೇಳಿಸುತ್ತದೆ.'* ವೇದಗಳು ಸಂಸ್ಕೃತ ದಲ್ಲಿಲ್ಲ, ಸಂಹಿತೆಯಲ್ಲಿಲ್ಲ, ಸೃಷ್ಟಿಯಲ್ಲಿದೆ. ಸೇವೆ ಮಾಡಿದರೆ ಅದು ಕಂಡೀತು. 'ಪ್ರಭಾತೇ ಕರದರ್ಶನಂ.' ಬೆಳಗಾಗ ಎದ್ದೊಡನೆಯೇ ಅಂಗೈ ನೋಡು. ಸಕಲವೂ ಅಂಗೈಯಲ್ಲಿದೆ. ಸೇವೆ ಮಾಡು ಎಂದು ಆ ವೇದ ಹೇಳುತ್ತದೆ. ನಿನ್ನ ಕೈ ಶ್ರಮಿಸಿತ್ತೋ ಇಲ್ಲವೋ? ಇಂದು ಶ್ರಮಿಸಲು ಸಿದ್ಧವೇ, ಇಲ್ಲವೆ? ಕೈ ದುಡಿದು ಜಡ್ಡುಬಿದ್ದಿದೆಯೋ ಇಲ್ಲವೋ? ಸೇವೆ ಮಾಡಿ ಕೈ ಸವೆದರೆ ಬ್ರಹ್ಮಲಿಖಿತ ತೆರೆಯುತ್ತದೆ. ಹೀಗಿದೆ 'ಪ್ರಭಾತೇ ಕರದರ್ಶನಂ'ದ ಅರ್ಥ.

ವೇದ ಎಲ್ಲಿದೆ? ನಿನ್ನ ಹತ್ತಿರವೇ ಇದೆಯಲ್ಲ. ಶಂಕರಾಚಾರ್ಯರಿಗೆ ಎಂಟು ವರ್ಷಕ್ಕೆ ವೇದ ಪ್ರಾಪ್ತವಾಯಿತಂತೆ. ಪಾಪ, ಶಂಕರಾಚಾರ್ಯರು ಮಂದಬುದ್ಧಿ. ಅವರಿಗೆ ಎಂಟು ವರ್ಷ ಹಿಡಿಯಿತು. ಆದರೆ ನಿನಗೆ ಜನ್ಮತಃ ಬಂದಿದೆ ಈ ವೇದ. ಎಂಟು ವರ್ಷವೇಕೆ ಬೇಕು? ನಾನೇ ಜೀವಂತ ವೇದ. ಇಲ್ಲಿಯವರೆಗಿನ ಸಮಸ್ತ ಪರಂಪರೆಯೂ ನನ್ನೊಳಗೇ ಇದೆ. ಆ ಪರಂಪರೆಯ ಫಲವೇ ನಾನು. ಆ ವೇದಬೀಜದ ಫಲವೇ ನಾನು. ನನ್ನ ಫಲದಲ್ಲಿ ಅನಂತವೇದದ ಬೀಜವನ್ನು ಸಂಗ್ರಹಿಸಿದೇನೆ. ನನ್ನ ಹೊಟ್ಟೆಯಲ್ಲಿ ವೇದ ೪೦ – ೫೦ ಪಟ್ಟು ದೊಡ್ಡದಾಗಿದೆ. ವೇದದ ಸಾರ ನಮ್ಮ ಕೈಯಲ್ಲೇ ಇದೆ. ಸೇವೆ, ಪ್ರೇಮ, ಜ್ಞಾನಗಳ ಮೇಲೆ ಜೀವನವನ್ನು ರಚಿಸಬೇಕು. ಆಗ ವೇದ ಕೈಯಲ್ಲೇ ಇದ್ದಂತೆ. ನಾನು ಅರ್ಥವಾಡಿದುದೇ ವೇದ. ವೇದ ಹೊರಗಿಲ್ಲ. 'ವೇದದ ಅರ್ಥ ನಮಗೇ ಗೊತ್ತು'† ಎಂದು ಸೇವಾಮೂರ್ತಿ ಗಳಾದ ಸಾಧುಗಳು ಹೇಳುತ್ತಾರೆ. ಸಕಲ ವೇದವೂ ನನ್ನನ್ನೇ ಅರಿತಿದೆ,

* Books in running brooks, sermons in stones.

† ವೇದಾಂಚೀ ತೋ ಅರ್ಥ ಅಮ್ಹಾಂಸೀ ಚ ಠಾವಾ।

ನಾನೇ ಸಕಲ ವೇದದ ಸಾರ, ಪುರುಷೋತ್ತಮ' ಎಂದು ಭಗವಂತ ಹೇಳಿದಾನೆ. ಅದೇ ವೇದಾಂತ ಸಾರ, ಅದೇ ಪುರುಷೋತ್ತಮಯೋಗ. ಇದನ್ನು ಬಾಳಿನಲ್ಲಿ ತರಲು ಸಾಧ್ಯವಾದರೆ ಎಷ್ಟು ಆನಂದವಾದೀತು! ಆಗ ಪುರುಷ ಮಾಡಿದುದರಲ್ಲೆಲ್ಲ ವೇದವೇ ಪ್ರಕಟವಾದೀತು: ಹೀಗೆ ಸೂಚಿಸಿದೆ ಗೀತೆ. ಈ ಅಧ್ಯಾಯ ಗೀತೆಯ ಸಾರ. ಗೀತೆಯ ಸಂದೇಶ ಇಲ್ಲಿ ಪೂರ್ಣವಾಗಿ ಪ್ರಕಟವಾಗಿದೆ. ಇದನ್ನು ಬಾಳಿನಲ್ಲಿ ತರಲು ಎಲ್ಲರೂ ಹಗಲೂ ಇರುಳೂ ದುಡಿಯಬೇಕು. ಮತ್ತೇನಿದೆ?

ಭಾನುವಾರ,
೨೯-೫-೧೯೩೨.

## ೪೪. ಪುರುಷೋತ್ತಮ ಯೋಗದ ಪೂರ್ವಪ್ರಭೆ : ದೈವೀ ಸಂಪತ್ತಿ

ಗೀತೆಯ ಮೊದಲ ಐದು ಅಧ್ಯಾಯಗಳಲ್ಲಿ ಜೀವನದ ಯೋಚನೆಯ್ನು, ನಮ್ಮ ಜನ್ಮ ಹೇಗೆ ಸಫಲವಾದೀತೆಂಬುದರ ವಿಚಾರ ಇದೆ. ಅನಂತರ ಆರನೆ ಅಧ್ಯಾಯದಿಂದ ಹನ್ನೊಂದರವರೆಗೆ ಭಕ್ತಿದರ್ಶನ. ಹನ್ನೆರಡರಲ್ಲಿ ಸಗುಣ – ನಿರ್ಗುಣ ಭಕ್ತಿಗಳನ್ನು ತುಲನೆಮಾಡಿ, ಭಕ್ತನ ಲಕ್ಷಣಗಳನ್ನು ಸ್ಥೂಲವಾಗಿ ಹೇಳಿದೆ. ಹನ್ನೆರಡರ ಕೊನೆಯವರೆಗೆ ಕರ್ಮ, ಭಕ್ತಿ ಎರಡೂ ತತ್ವಗಳ ಪರಿಶೀಲನೆ. ಮೂರನೆಯದಾದ ಜ್ಞಾನದ ವಿಭಾಗ ಉಳಿಯಿತು. ಅದಕ್ಕೆ ಹದಿಮೂರು, ಹದಿನಾಲ್ಕು, ಹದಿನೈದನೆಯ ಅಧ್ಯಾಯಗಳು. ದೇಹ ದಿಂದ ಆತ್ಮವನ್ನು ಬೇರೆಗೊಳಿಸುವುದು, ಅದಕ್ಕಾಗಿ ಮೂರು ಗುಣಗಳನ್ನು ಗೆಲ್ಲುವುದು, ಕಡೆಗೆ ಸರ್ವತ್ರ ಪ್ರಭುವನ್ನೇ ಕಾಣುವುದು· ಹದಿನೈದನೆ ಅಧ್ಯಾಯದಲ್ಲಿ ಜೀವನಶಾಸ್ತ್ರ ಸಂಪೂರ್ಣವಾಯಿತು. ಪುರುಷೋತ್ತಮ ಯೋಗದಲ್ಲಿ ಜೀವನದ ಸಂಪೂರ್ಣತೆ ಲಭಿಸುತ್ತದೆ. ಅದರಾಚೆ ಏನೂ ಉಳಿಯದು.

ಕರ್ಮ, ಜ್ಞಾನ ಭಕ್ತಿಗಳ ಪ್ರತ್ಯೇಕತೆ ನನಗೆ ಸಹಿಸದು. ಕೆಲವರು ಸಾಧಕರಿಗೆ ಕೇವಲ ಕರ್ಮದಲ್ಲಿ ನಿಷ್ಠೆ ; ಕೆಲವರು ಭಕ್ತಿಯನ್ನೆ ಸ್ವತಂತ್ರ ಮಾರ್ಗ ಮಾಡಿ ಅದರ ಮೇಲೇ ನಿಲ್ಲುತ್ತಾರೆ ; ಕೆಲವರಿಗೆ ಜ್ಞಾನದಲ್ಲಿ ನಿಷ್ಠೆ. ಜೀವನವೆಂದರೆ ಕೇವಲ ಕರ್ಮ, ಕೇವಲ ಭಕ್ತಿ, ಕೇವಲ ಜ್ಞಾನ ಎಂಬ 'ಕೇವಲ ವಾದ' ವನ್ನು ಒಪ್ಪಲು ನನಗಿಷ್ಟವಿಲ್ಲ. ಅದಕ್ಕೆ ಪ್ರತಿಯಾಗಿ ಕರ್ಮ, ಭಕ್ತಿ, ಜ್ಞಾನಗಳ ಸಮುಚ್ಚಯವಾದವನ್ನೂ ನಾನೊಪ್ಪಲಾರೆ. ಸ್ವಲ್ಪ ಕರ್ಮ, ಸ್ವಲ್ಪ ಭಕ್ತಿ, ಸ್ವಲ್ಪ ಜ್ಞಾನ ಎಂಬ 'ಉಪಯುಕ್ತತಾವಾದ'ವೂ ನನಗೆ ರುಚಿಸದು. ಮೊದಲು ಕರ್ಮ, ಆಮೇಲೆ ಭಕ್ತಿ, ಕಡೆಗೆ ಜ್ಞಾನ ಎಂಬ 'ಕ್ರಮವಾದ'ವೂ ನನಗೆ ಒಪ್ಪಿಗೆಯಿಲ್ಲ. ಈ ಮೂರನ್ನೂ ರಸಾಯನ ಮಾಡುವ 'ಸಾಮಂಜಸ್ಯ ವಾದ'ವೂ ನನಗೆ ಸರಿಯಿಲ್ಲ. ಕರ್ಮವೇ ಭಕ್ತಿ, ಅದೇ ಜ್ಞಾನ ಎಂಬುದು ನನ್ನ ಅನುಭವ. ಮಿರಾಯಿಯಲ್ಲಿ ಅದರ ಸವಿ,

ಅದರ ಆಕಾರ, ಅದರ ತೂಕ ಬೇರೆ ಬೇರೆ ಇಲ್ಲ. ಮಿಠಾಯಿಯನ್ನು ಬಾಯೊಳಗೆ ಹಾಕಿಕೊಂಡಾಗ ಅದರ ಆಕಾರ ತಿಂದೆ, ತೂಕ ಅರಗಿಸಿ ಕೊಂಡೆ, ಸವಿ ಚಪ್ಪರಿಸಿದೆ. ಮೂರೂ ಒಂದೇಕಡೆ ಇವೆ. ಮಿಠಾಯಿಯ ಪ್ರತ್ಯೇಕ ಕಣಕಣದಲ್ಲೂ ಆಕಾರ, ತೂಕ, ಸವಿ ಇವೆ. ಈ ತುಂಡಿನಲ್ಲಿ ಆಕಾರ, ಅದರಲ್ಲಿ ತೂಕ, ಇನ್ನೊಂದರಲ್ಲಿ ಸವಿ — ಹೀಗಿಲ್ಲ. ಹಾಗೇ ಜೀವನದಲ್ಲಿ ಪ್ರತಿಯೊಂದು ಕೃತಿಯಲ್ಲೂ ಪರಮಾರ್ಥ ತುಂಬಿ ತುಳುಕುತ್ತಿರ ಬೇಕು. ಪ್ರತಿಯೊಂದು ಕೃತಿಯೂ ಸೇವಾಮಯ, ಪ್ರೇಮಮಯ, ಜ್ಞಾನಮಯ ಆಗಿರಬೇಕು. ಜೀವನದಲ್ಲಿ ಸರ್ವಾಂಗದಲ್ಲೂ ಕರ್ಮ, ಭಕ್ತಿ, ಜ್ಞಾನಗಳು ತುಂಬಿರಬೇಕು. ಇದನ್ನೇ ಪುರುಷೋತ್ತಮಯೋಗ ವೆನ್ನುತ್ತಾರೆ.

ಇಡೀ ಬಾಳನ್ನು ಪರಮಾರ್ಥಮಯವಾಗಿ ಮಾಡು ಎಂಬುದು ಹೇಳಲಿಕ್ಕೆ ಸುಲಭ. ಆದರೆ ಈ ಉಚ್ಚಾರದಲ್ಲಿ ಏನು ಭಾವವಿದೆಯೋ ವಿಚಾರಿಸಿದರೆ, ನಿರ್ಮಲ ಸೇವೆ ಸಲ್ಲಿಸಲು ಅಂತಃಕರಣದೊಳಗೆ ಶುದ್ಧ ಜ್ಞಾನ, ಭಕ್ತಿಗಳ ಒಲವು ಇರಬೇಕು. ಅಂತೇ ಕರ್ಮ, ಭಕ್ತಿ, ಜ್ಞಾನಗಳು ಒಂದೇ. ಈ ಪರಮದಶೆಗೆ ಪುರುಷೋತ್ತಮಯೋಗವೆನ್ನುತ್ತಾರೆ. ಜೀವನದ ಅಂತಿಮ ಸೀಮೆ ಇಲ್ಲಿ ಸಿಕ್ಕೀತು.

ಹದಿನಾರನೆ ಅಧ್ಯಾಯದಲ್ಲಿ ಏನು ಹೇಳಿದೆ? ಸೂರ್ಯೋದಯವಾಗ ಬೇಕಾದರೆ ಮೊಟ್ಟಮೊದಲು ಹೇಗೆ ಪ್ರಭೆ ಹರಡಬೇಕೋ ಹಾಗೆ ಜೀವನದಲ್ಲಿ ಕರ್ಮ, ಜ್ಞಾನ, ಭಕ್ತಿಗಳ ಪೂರ್ಣತೆಯ ಪುರುಷೋತ್ತಮಯೋಗದ ಉದಯವಾಗಲಿಕ್ಕೆ ಮೊದಲು ಸದ್ಗುಣಗಳ ಪ್ರಭೆ ಹೊರಗಡೆ ಸೂಸಬೇಕು, ಹರಡಬೇಕು. ಪರಿಪೂರ್ಣ ಜೀವನದ ಈ ಆಗಾಮಿ ಪ್ರಭೆಯನ್ನು ಹದಿನಾರನೆ ಅಧ್ಯಾಯದಲ್ಲಿ ಬಣ್ಣಿಸಿದಾರೆ. ಯಾವ ಕತ್ತಲೆಯೊಡನೆ ಹೋರಾಡಿ, ಯಾವುದನ್ನು ಕರಗಿಸಿ, ಈ ಪ್ರಭೆ ಪ್ರಕಟವಾಗುತ್ತದೆಯೋ ಆ ಕತ್ತಲನ್ನು ಇಲ್ಲಿ ವರ್ಣಿಸಿದೆ. ಯಾವುದಾದರೊಂದು ವಸ್ತುವಿಗೆ ಪ್ರಮಾಣವೆಂದು, ಸಾಕ್ಷ್ಯವೆಂದು, ಎಷ್ಟೋ ಪ್ರತ್ಯಕ್ಷ ವಸ್ತುದರ್ಶನವನ್ನು ಬೇಡುತ್ತೇವೆ. ಸೇವೆ, ಜ್ಞಾನ, ಭಕ್ತಿಗಳು ಬಾಳಿನಲ್ಲಿ ಬಂದಿವೆಯೆಂದರೆ ಅದನ್ನು ಹೇಗೆ ತಿಳಿದುಕೊಳ್ಳಬೇಕು? ಹೊಲದಲ್ಲಿ ಕಷ್ಟಪಟ್ಟು ದುಡಿದು

ಕಡೆಗೆ ಕಾಳಿನ ರಾಶಿಯನ್ನು ಪಡೆಯುತ್ತೇವೆ. ಅದನ್ನು ಅಳೆದು ತರುತ್ತೇವೆ. ಅದೇ ರೀತಿ ನಾವು ಮಾಡುವ ಸಾಧನೆಯಿಂದ ನಮಗೆ ಬಂದ ಅನುಭವ ವೇನು, ಎಷ್ಟುಮಟ್ಟಿಗೆ ಸದ್ವೃತ್ತಿ ಅರಳಿ ಬಂತು, ಎಷ್ಟು ಸದ್ಗುಣ ಮೈಗೂಡಿತು, ಬಾಳು ನಿಜವಾಗಿ ಎಷ್ಟು ಸೇವಾಮಯವಾಗಿದೆ, ಇದನ್ನೆಲ್ಲ ಪರಿಶೀಲಿಸಲು ಈ ಅಧ್ಯಾಯ ಹೇಳುತ್ತದೆ. ಜೀವನದ ಈ ವರ್ಧನ – ಕಲೆಯನ್ನು ಗೀತೆ ದೈವೀಸಂಪತ್ತಿ ಎನ್ನುತ್ತದೆ. ಇದಕ್ಕೆ ವಿರುದ್ಧ ವೃತ್ತಿ ಯನ್ನು ಆಸುರೀ ಎನ್ನುತ್ತದೆ. ೧೬ ನೆ ಅಧ್ಯಾಯದಲ್ಲಿ ದೈವೀ – ಆಸುರೀ ಸಂಪತ್ತಿಗಳ ಜಗಳವನ್ನು ತೋರಿಸಿದೆ.

## ೬೯. ಅಹಿಂಸೆ – ಹಿಂಸೆಗಳ ಸೇನೆ

ಮೊದಲನೆ ಅಧ್ಯಾಯದಲ್ಲಿ ಕೌರವ – ಪಾಂಡವರನ್ನು ಇದಿರುಬದಿರು ನಿಲ್ಲಿಸಿದಂತೆ ಸದ್ಗುಣದ ದೈವೀ ಸೇನೆ, ದುರ್ಗುಣದ ಆಸುರೀ ಸೇನೆಗಳನ್ನು ಇಲ್ಲಿ ಇದಿರುಬದಿರು ನಿಲ್ಲಿಸಿದೆ. ಮಾನವನ ಮನಸ್ಸಿನಲ್ಲಿ ನಡೆವ ಸತ್ – ಅಸತ್ ಪ್ರವೃತ್ತಿಗಳ ಜಗಳವನ್ನು ರೂಪಕವಾಗಿ ಹೆಣೆವ ಪದ್ಧತಿ ಅತಿ ಪ್ರಾಚೀನ ಕಾಲದಿಂದಲೂ ಇದೆ. ವೇದಗಳಲ್ಲಿ ಇಂದ್ರ – ವೃತ್ರ; ಪುರಾಣ ಗಳಲ್ಲಿ ದೇವ – ದಾನವ, ರಾಮ – ರಾವಣ; ಪಾರ್ಸೀಧರ್ಮಗ್ರಂಥಗಳಲ್ಲಿ ಅಹುರಮಜ್ದ್ – ಅಹರಿಮಾನ್; ಕ್ರಿಸ್ತನ ಧರ್ಮದಲ್ಲಿ ಪ್ರಭು – ಸೈತಾನ್; ಇಸ್ಲಾಮಿನಲ್ಲಿ ಪರಮೇಶ್ವರ – ಇಬ್ಲೀಸ್; ಇಂಥ ವಿರೋಧ ಸರ್ವ ಧರ್ಮ ಗಳಲ್ಲೂ ಇದೆ. ಕಾವ್ಯಗಳಲ್ಲಿ ಸ್ಥೂಲ ವಿಷಯಗಳ ವರ್ಣನೆಯನ್ನು ಸೂಕ್ಷ್ಮ ರೂಪಗಳಲ್ಲಿ ಮಾಡುತ್ತಾರೆ. ಧರ್ಮಗ್ರಂಥಗಳಲ್ಲಿ ಸೂಕ್ಷ್ಮ ಮನೋಭಾವ ವನ್ನು ಎದ್ದುಕಾಣುವಂತೆ ಸ್ಥೂಲರೂಪ ಕೊಟ್ಟು ಬಣ್ಣಿಸುತ್ತಾರೆ. ಕಾವ್ಯದಲ್ಲಿ ಸ್ಥೂಲವನ್ನು ಸೂಕ್ಷ್ಮವಾಗಿ ವರ್ಣಿಸಿದರೆ, ಇಲ್ಲಿ ಸೂಕ್ಷ್ಮ ಸ್ಥೂಲವಾಗುತ್ತದೆ. ಇದರಿಂದ ಗೀತಾರಂಭದಲ್ಲಿ ಬಂದ ಯುದ್ಧದ ವರ್ಣನೆ ಕೇವಲ ಕಾಲ್ಪನಿಕ ವೆಂದು ಸೂಚನೆಯಲ್ಲ. ಅದು ಐತಿಹಾಸಿಕ ಸಂಗತಿಯೇ ಇದ್ದೀತು. ಆದರೆ ಕವಿ ಆ ಸಂಗತಿಯನ್ನು ತನ್ನ ಇಷ್ಟಹೇತುವಿಗಾಗಿ ಬಳಸುತ್ತಾನೆ ಕರ್ತವ್ಯಮೋಹ ಅಡ್ಡಬಂದರೆ ಹೇಗೆ ನಡೆಯಬೇಕು ಎಂಬುದಕ್ಕೆ ಯುದ್ಧದ ರೂಪಕವನ್ನು ಕೊಟ್ಟಿದೆ. ಈ ೧೬ನೆ ಅಧ್ಯಾಯದಲ್ಲಿ ಒಳಿತು – ಕೆಡಕುಗಳ ಜಗಳವನ್ನು ತೋರಿಸಿದೆ. ಗೀತೆಯಲ್ಲಿ ಈ ಯುದ್ಧದ ರೂಪಕವಿದೆ.

ಕುರುಕ್ಷೇತ್ರ ಹೊರಗೂ ಇದೆ, ನಮ್ಮ ಮನಸ್ಸಿನೊಳಗೂ ಇದೆ. ಸೂಕ್ಷ್ಮರೀತಿಯಲ್ಲಿ ನೋಡಿದರೆ ಮನಸ್ಸಿನೊಳಗಿರುವ ಕಲಹವೇ ಹೊರಗಡೆ ರೂಪಗೊಂಡು ಕಾಣುತ್ತದೆ. ಹೊರಗೆ ಇದಿರುನಿಂತ ಶತ್ರು ನನ್ನ ಮನಸ್ಸಿನೊಳಗಿನ ಶತ್ರುವೇ ಸಾಕಾರವಾಗಿ ಬಂದಂತೆ. ಕನ್ನಡಿಯಲ್ಲಿ ನನ್ನ ಸೌಂದರ್ಯ ವಿಕಾರಗಳು ಕಾಣುವಂತೆ ನನ್ನ ಮನಸ್ಸಿನ ಒಳಿತು-ಕೆಡುಕು ವಿಚಾರಗಳು ಶತ್ರು ಮಿತ್ರರ ರೂಪದಲ್ಲಿ ಕಾಣಬರುತ್ತದೆ. ಎಚ್ಚರದಲ್ಲಿ ಕಂಡುದನ್ನೆ ಕನಸಿನಲ್ಲಿ ಕಾಣುವಂತೆ ಮನಸ್ಸಿನಲ್ಲಿದ್ದುದೇ ಹೊರಗೆ ಕಾಣಬರುತ್ತದೆ. ಒಳಗಿನ ಯುದ್ಧ, ಹೊರಗಿನ ಯುದ್ಧ, ಇವುಗಳಲ್ಲಿ ವ್ಯತ್ಯಾಸವಿಲ್ಲ. ನಿಜವಾಗಿ ಯುದ್ಧ ಒಳಗೇ ಇದೆ.

ಅಂತಃಕರಣದಲ್ಲಿ ಇತ್ತ ಸದ್ಗುಣ, ಅತ್ತ ದುರ್ಗುಣ ನಿಂತಿವೆ. ಅವು ತಮ್ಮ ಏರ್ಪಾಡನ್ನು ಸರಿಯಾಗಿ ಮಾಡಿಕೊಂಡಿವೆ. ದಂಡಿಗೊಬ್ಬ ದಳವಾಯಿ ಇದ್ದಂತೆ ಸದ್ಗುಣಗಳಿಗೂ ಒಬ್ಬ ದಳವಾಯಿ ಇದಾನೆ. ಅವನ ಹೆಸರು ' ಅಭಯ '. ಈ ಅಧ್ಯಾಯದಲ್ಲಿ ಅಭಯಕ್ಕೆ ಮೊದಲನೆ ಸ್ಥಾನ. ಈ ಮಾತು ಸಹಜ ಸುಲಭವಾಗಿ ಆದುದಲ್ಲ. ಹೇತುಪುರಸ್ಸರವಾಗಿ ಅಭಯ ಶಬ್ದವನ್ನು ಮೊದಲು ಜೋಡಿಸಿದೆ. ಅಭಯವಿಲ್ಲದೆ ಯಾವ ಗುಣವೂ ಬೆಳೆಯಲಾರದು. ಸತ್ಯಸಂಧತೆಯಿಲ್ಲದ ಸದ್ಗುಣಕ್ಕೆ ಬೆಲೆಯಿಲ್ಲ ಅದಕ್ಕೆ ನಿರ್ಭಯತೆ ಬೇಕು. ಭಯಭೀತ ವಾತಾವರಣದಲ್ಲಿ ಸದ್ಗುಣ ವೃದ್ಧಿಯಾಗದು ; ಸದ್ಗುಣವೂ ದುರ್ಗುಣವಾದೀತು, ಸತ್ಪ್ರವೃತ್ತಿಯೂ ದೌರ್ಬಲ್ಯವಾದೀತು. ನಿರ್ಭಯತೆ ಸಕಲ ಸದ್ಗುಣಗಳ ಮುಖ್ಯನಾಯಕ. ಆದರೆ ದಂಡಿಗೆ ಅಗಾಡಿ ಪಿಛಾಡಿ ಎರಡೂ ಮುಖ್ಯ. ಮುಂದಿನಿಂದ ನೇರಾಗಿ ಮುತ್ತಬಹುದು. ಹಿಂದಿನಿಂದ ಕಳ್ಳತನದಲ್ಲಿ ಮುತ್ತಬಹುದು. ಸದ್ಗುಣದ ಮುಂಚೂಣಿಯಲ್ಲಿ ನಿರ್ಭಯತೆ ಇದ್ದರೆ, ಹಿಂಭಾಗದಲ್ಲಿ ನಮ್ರತೆ ಇದೆ. ಹೀಗಿದೆ ಈ ಸುಂದರ ರಚನೆ. ಒಂದರಲ್ಲೇ ಇಪ್ಪತ್ತಾರು ಗುಣ. ಇದರಲ್ಲಿ ಇಪ್ಪತ್ತೈದು ಗುಣ ಶರೀರದಲ್ಲಿ ಸಂಗ್ರಹಿತವಾಗಿವೆ. ಮನುಷ್ಯನಿಗೆ ಅವುಗಳ ಅಹಂಕಾರ ಕವಿಯಿತೋ ಹಿಂದಿನಿಂದ ಮುತ್ತಿದಂತಾಗಿ ಸಂಗ್ರಹಿಸಿದುದೆಲ್ಲವೂ ನಷ್ಟವಾಗುತ್ತದೆ. ಅಂತೇ ಹಿಂಭಾಗದಲಿ ನಮ್ರತೆಯ ಸದ್ಗುಣವನ್ನು ಇರಿಸಿದ್ದು. ನಮ್ರತೆಯಿಲ್ಲದಿದ್ದರೆ ಗೆಲವೂ ಸೋಲಾದೀತು. ಮುಂದೆ ನಿರ್ಭಯತೆ, ಹಿಂದೆ

ನಮ್ರತೆ — ಹೀಗೆ ಎಲ್ಲಾ ಸದ್ಗುಣಗಳನ್ನು ವಿಕಾಸಗೊಳಿಸಬಹುದು. ಇವೆರಡರ ನಡುವೆ ಇರುವ ೨೪ ಗುಣಗಳೂ ಅಹಿಂಸೆಗೆ ಪರ್ಯಾಯ ಗುಣಗಳು ಎನ್ನಬಹುದು. ಭೂತದಯೆ, ಮಾರ್ದವ, ಕ್ಷಮೆ, ಶಾಂತಿ, ಅಕ್ರೋಧ, ಅಹಿಂಸೆ, ಅದ್ರೋಹ ಎಲ್ಲವೂ ಅಹಿಂಸೆಗೆ ಬೇರೆ ಬೇರೆ ಪರ್ಯಾಯ ಪದಗಳು. ಅಹಿಂಸೆ, ಸತ್ಯ, ಇವೆರಡರಲ್ಲಿ ಎಲ್ಲಾ ಸದ್ಗುಣಗಳೂ ಬರುತ್ತವೆ. ಎಲ್ಲ ಸದ್ಗುಣಗಳನ್ನೂ ಸಂಕ್ಷೇಪಿಸಿದರೆ ಕಡೆಗೆ ಉಳಿಯುವುದು ಅಹಿಂಸೆ, ಸತ್ಯ ಎರಡೇ! ಅವುಗಳ ಗರ್ಭದಲ್ಲಿ ಉಳಿದೆಲ್ಲ ಸದ್ಗುಣಗಳೂ ಇವೆ. ಆದರೆ ನಿರ್ಭಯತೆ, ನಮ್ರತೆಗಳ ಮಾತೇ ಬೇರೆ. ನಿರ್ಭಯತೆಯಿಂದ ಪ್ರಗತಿ, ನಮ್ರತೆಯಿಂದ ಸಂರಕ್ಷಣೆ. ಸತ್ಯ – ಅಹಿಂಸೆಗಳ ಬಂಡವಾಳ ಕಟ್ಟಿಕೊಂಡು ನಿರ್ಭಯತೆಯಿಂದ ಮುಂಬರಿಯಬೇಕು. ಬಾಳು ವಿಶಾಲ ವಾಗಿದೆ. ಅದರಲ್ಲಿ ಅನಿರುದ್ಧ ಸಂಚಾರ ಮಾಡಬೇಕು. ಕಾಲು ಜಾರ ದಿರಲಿಕ್ಕೆ ನಮ್ರತೆಯಿದ್ದರೆ ಆಯಿತು. ಅಲ್ಲಿಂದ ಮುಂದೆ ಸಾಗು, ನಿರ್ಭಯ ದಿಂದ ಸತ್ಯ, ಅಹಿಂಸೆಗಳನ್ನು ಪ್ರಯೋಗಮಾಡುತ್ತ. ಸತ್ಯ – ಅಹಿಂಸೆಗಳ ವಿಕಾಸ, ನಿರ್ಭಯತೆ, ನಮ್ರತೆಗಳಿಂದ ಆಗುತ್ತದೆ.

ಒತ್ತಟ್ಟು ಸದ್ಗುಣದ ದಂಡು, ಇನ್ನೊತ್ತಟ್ಟು ದುರ್ಗುಣದ ದಂಡು. ದಂಭ, ಅಜ್ಞಾನಾದಿ ದುರ್ಗುಣಗಳ ಬಗ್ಗೆ ಹೆಚ್ಚು ಹೇಳಬೇಕಾಗಿಲ್ಲ. ಇದು ನಮಗೆ ತಿಳಿದುದೇ. ದಂಭ ಮೈಗೂಡಿದಹಾಗೇ ಇದೆ. ಬಾಳೆಲ್ಲವೂ ದಂಭದ ಮೇಲೆ ನಿಂತಂತಿದೆ. ಅಜ್ಞಾನವನ್ನು ಕುರಿತು ಹೇಳುವುದಾದರೆ, ಇದೊಂದು ಸೊಗಸಾದ ನೆಪವಾಗಿದೆ. ಪದೇ ಪದೇ ಅದನ್ನು ಮುಂದಿಸು ತ್ತೇವೆ. ಅದೊಂದು ತಪ್ಪೇ ಅಲ್ಲವೆಂದು ತಿಳಿಯುತ್ತೇವೆ. ಆದರೆ ಭಗವಂತ ಹೇಳುತ್ತಾನೆ — 'ಅಜ್ಞಾನ ದೊಡ್ಡ ಪಾಪ.' ಸಾಕ್ರಟೀಸ್ ತದ್ವಿರುದ್ಧವಾಗಿ ಹೇಳಿದ. ನ್ಯಾಯಾಲಯದಲ್ಲಿ 'ನೀವು ಪಾಪವೆಂದು ತಿಳಿಯುವುದು ಅಜ್ಞಾನ. ಅಜ್ಞಾನ ಕ್ಷಮ್ಯ. ಅಜ್ಞಾನವಿಲ್ಲದೆ ಪಾಪ ಹೇಗೆ ಆದೀತು? ಅಜ್ಞಾನಕ್ಕೆ ಹೇಗೆ ಶಿಕ್ಷೆ ಕೊಡುತ್ತೀರಿ?' ಎಂದ. ಆದರೆ ಅಜ್ಞಾನವೇ ಪಾಪ ಎನ್ನುತ್ತಾನೆ ಭಗವಂತ. ಕಾಯದೆಯ ಅಜ್ಞಾನ ಯಾರನ್ನೂ ಸಂರಕ್ಷಿಸಲಾರದು ಎಂದು ಕಾಯದೆ ಹೇಳುತ್ತದೆ. ಈಶ್ವರನ ನಿಯಮಗಳ ಅಜ್ಞಾನವೇ ದೊಡ್ಡ ಅಪರಾಧ. ಭಗವಂತನ ಮಾತು, ಸಾಕ್ರಟೀಸನ ಮಾತು, ಎರಡರ

ಭಾವಾರ್ಥವೂ ಒಂದೇ. ಸ್ವಂತ ಅಜ್ಞಾನದ ಕಡೆ ಹೇಗೆ ನೋಡಬೇಕು ಎಂದು ಭಗವಂತ ಹೇಳುತ್ತಾನೆ. ಪರರ ಪಾಪವನ್ನು ಹೇಗೆ ಕಾಣಬೇಕು ಎಂದು ಸಾಕ್ರಟೀಸ್ ಹೇಳುತ್ತಾನೆ. ಪರರ ಪಾಪವನ್ನು ಕ್ಷಮಿಸಬೇಕು. ಸ್ವಂತ ಅಜ್ಞಾನವನ್ನು ಕ್ಷಮಿಸಿದರೂ ಅದು ಪಾಪ. ಅಜ್ಞಾನ ಲೇಶವೂ ಇರಕೂಡದು.

## ೮೦. ಅಹಿಂಸೆಯ ವಿಕಾಸದ ನಾಲ್ಕು ಮಜಲು

ಹೀಗೆ ಒಂದು ಕಡೆ ದೈವೀ ಸಂಪತ್ತಿ, ಇನ್ನೊಂದು ಕಡೆ ಆಸುರೀ ಸಂಪತ್ತಿ; ಎರಡು ದಂಡು ನಿಂತಿವೆ. ಇದರಲ್ಲಿ ಆಸುರೀ ಸಂಪತ್ತಿಯನ್ನು ತಪ್ಪಿಸಬೇಕು, ದೈವೀ ಸಂಪತ್ತಿಯನ್ನು ಅಪ್ಪಬೇಕು. ಸತ್ಯ, ಅಹಿಂಸೆ ಇತ್ಯಾದಿ ದೈವೀಗುಣಗಳ ವಿಕಾಸ ಅನಾದಿ ಕಾಲದಿಂದಲೂ ಆಗುತ್ತಿದೆ. ನಡುವೆ ಆಗಿಹೋದ ಕಾಲದಲ್ಲಿ ಬೇಕಾದಷ್ಟು ವಿಕಾಸವಾಗಿದೆ. ಆದರೂ ಇನ್ನೂ ವಿಕಾಸವಾಗಬೇಕು. ವಿಕಾಸದ ಮಿತಿಯನ್ನು ಮುಟ್ಟಿಲ್ಲ. ಸಾಮಾಜಿಕ ಶರೀರವಿರುವವರಿಗೆ ವಿಕಾಸಕ್ಕೆ ಅನಂತಾವಕಾಶವುಂಟು. ವೈಯಕ್ತಿಕ ವಿಕಾಸವಾದರೂ ಸಾಮಾಜಿಕ, ರಾಷ್ಟ್ರೀಯ ಜಾಗತಿಕ ವಿಕಾಸ ಉಳಿದೇ ಇರುತ್ತದೆ. ವ್ಯಕ್ತಿ ತನ್ನ ವಿಕಾಸಕ್ಕೆ ಗೊಬ್ಬರ ಚೆಲ್ಲಿ, ಆಮೇಲೆ ಸಮಾಜ ರಾಷ್ಟ್ರಗಳಲ್ಲಿ ಲಕ್ಷಾಂತರ ವ್ಯಕ್ತಿಗಳ ವಿಕಾಸವನ್ನು ಮೊದಲಿಡಿಸಬೇಕು. ಉದಾಹರಣೆಗೆ—ಮನುಷ್ಯ ಆದಿಯಿಂದಲೂ ವಿಕಾಸವನ್ನು ಸಾಧಿಸಿದರೂ ಇವೊತ್ತೂ ಅವನ ವಿಕಾಸ ನಡೆದೇ ಇದೆ.

ಅಹಿಂಸೆಯ ವಿಕಾಸ ಹೇಗೆ ಹೇಗೆ ಆಯಿತೆಂಬುದನ್ನು ನೋಡುವಂತಿದೆ. ಅದರಿಂದ ಉತ್ತರೋತ್ತರ ಪಾರಮಾರ್ಥಿಕ ಜೀವನವಿಕಾಸ ಹೇಗೆ ಆಗುತ್ತಿದೆಯೋ ಅದಕ್ಕೆ ಇನ್ನೂ ಹೇಗೆ ಅವಕಾಶವಿದೆಯೋ ಕಾಣಬರುತ್ತದೆ. ಹಿಂಸಕನ ಧಾಳಿಯನ್ನು ಹೇಗೆ ತಡೆಯಬೇಕೆಂಬುದನ್ನು ಅಹಿಂಸಕ ಯೋಚಿಸ ತೊಡಗಿದ. ಪೂರ್ವದಲ್ಲಿ ಸಮಾಜದ ರಕ್ಷಣೆಗಾಗಿ ಕ್ಷತ್ರಿಯ ವರ್ಗವನ್ನು ನಿರ್ಮಿಸಿತು. ಆದರೆ ಅವರೇ ಮುಂದೆ ಸಮಾಜಭಕ್ಷಕರಾದರು ಮಾಡತೊಡಗಿದರು. ಈ ಉನ್ಮತ್ತ ಕ್ಷತ್ರಿಯರಿಂದ ಹೇಗೆ ಪಾರಾಗಬೇಕೆಂಬುದನ್ನು ಅಹಿಂಸಕ ಬ್ರಾಹ್ಮಣ ಯೋಚಿಸತೊಡಗಿದ. ಸ್ವಯಂ ಅಹಿಂಸಕನಾದರೂ ಪರಶುರಾಮ

ಹಿಂಸೆಯನ್ನು ಅವಲಂಬಿಸಿ ಕ್ಷತ್ರಿಯರನ್ನು ತೊಡೆದುಹಾಕಿದ. ಕ್ಷತ್ರಿಯರು ಹಿಂಸೆಯನ್ನು ಬಿಡಲಿ ಎಂದು ತಾನೇ ಹಿಂಸಕನಾದ. ಇದು ಅಹಿಂಸೆಯ ಪ್ರಯೋಗ. ಆದರೆ ಇದು ಸಫಲವಾಗಲಿಲ್ಲ. ೨೧ ಸಲ ಕ್ಷತ್ರಿಯರನ್ನು ಸಂಹಾರ ಮಾಡಿದರೂ ಅವರು ಬದುಕಿಕೊಂಡರು. ಈ ಪ್ರಯೋಗದ ಮೂಲದಲ್ಲೇ ತಪ್ಪಿದ್ದುದೇ ಕಾರಣ. ಕ್ಷತ್ರಿಯರ ಕ್ಷಾತ್ರವನ್ನು ತಗ್ಗಿಸಲು ನಾನೇ ಹೆಚ್ಚು ಕ್ಷಾತ್ರವನ್ನು ಅವಲಂಬಿಸಿದರೆ ಕ್ಷತ್ರಿಯ ವರ್ಣ ಹೇಗೆ ನಷ್ಟವಾದೀತು? ನಾನೇ ಹಿಂಸಕ ಕ್ಷತ್ರಿಯನಾದೆ. ಆ ಬೀಜ ಸ್ಥಿರವೇ ಆಯಿತು. ಬೀಜವನ್ನು ಕಾಪಾಡಿ ಗಿಡವನ್ನು ಕಡಿದರೆ ಮತ್ತೆ ಮತ್ತೆ ಅದು ಚಿಗಿತೇ ಚಿಗಿಯುತ್ತದೆ. ಪರಶುರಾಮ ದೊಡ್ಡ ಮನುಷ್ಯ. ಆದರೆ ಪ್ರಯೋಗ ಬಹಳ ವಿಚಿತ್ರವಾಯಿತು. ತಾನೇ ಕ್ಷತ್ರಿಯನಾಗಿ ಲೋಕವನ್ನು ನಿಃಕ್ಷತ್ರಿಯ ಮಾಡಬಯಸಿದ. ನಿಜವಾಗಿ ಪ್ರಯೋಗ ತನ್ನಿಂದಲೇ ಮೊದಲಾಗಬೇಕಿತ್ತು. ಮೊಟ್ಟಮೊದಲು ತನ್ನ ತಲೆಯನ್ನೇ ಕಡಿಯಬೇಕಾಗಿತ್ತು. ಪರಶುರಾಮನ ದೋಷವನ್ನು ತೋರುವುದು ಅವನಿಗಿಂತ ನಾ ಜಾಣ ಎಂದಲ್ಲ. ನಾನು ಎಳಕ. ಆದರೆ ಅವನ ಹೆಗಲ ಮೇಲೆ ನಾ ನಿಂತಿದೇನೆ. ಅಂತೇ ನನಗೆ ಹೆಚ್ಚು ಕಾಣಿಸುತ್ತದೆ. ಪರಶುರಾಮನ ಪ್ರಯೋಗದ ಆಧಾರವೇ ತಪ್ಪು. ಹಿಂಸಾಮಯನಾಗಿ ಹಿಂಸೆಯನ್ನು ದೂರ ಮಾಡುವುದು ಸಾಧ್ಯವಿಲ್ಲ. ಅದರಿಂದ ಹಿಂಸಕರ ಸಂಖ್ಯೆ ಹೆಚ್ಚೀತು. ಆದರೆ ಆಗ ಈ ಮಾತು ಗಮನಕ್ಕೆ ಬರಲಿಲ್ಲ. ಆಗಿನ ಶೂರರು, ಅಹಿಂಸಾಪ್ರಿಯ ಜನರು ತಮತಮಗೆ ಹೊಳೆದಂತೆ ಪ್ರಯೋಗ ಮಾಡಿದರು. ಪರಶುರಾಮ ಆಗಿನ ಕಾಲದ ಹಿರಿಯ ಅಹಿಂಸಾವಾದಿ. ಹಿಂಸೆ ಮಾಡಬೇಕೆಂದು ಅವನು ಹಿಂಸೆ ಮಾಡಲಿಲ್ಲ. ಅಹಿಂಸೆಯ ಸ್ಥಾಪನೆಗಾಗಿ ನಡೆಯಿತು ಆ ಹಿಂಸೆ!

ಆ ಪ್ರಯೋಗ ತಪ್ಪಿತು. ಮುಂದೆ ಶ್ರೀರಾಮನ ಕಾಲ. ಆ ಕಾಲದಲ್ಲಿ ಮತ್ತೆ ಬ್ರಾಹ್ಮಣರು ವಿಚಾರಮಾಡಿದರು. ಅವರು ಹಿಂಸೆಯನ್ನು ಬಿಟ್ಟರು. ಏನೇ ಆಗಲಿ, ತಾವು ಸ್ವತಃ ಹಿಂಸೆ ಮಾಡಕೂಡದು ಎಂದು ನಿಶ್ಚಯಿಸಿದರು. ಆದರೆ ರಾಕ್ಷಸರ ದಾಳಿಯನ್ನು ಹಿಮ್ಮೆಟ್ಟಿಸುವುದು ಹೇಗೆ? ಅವರಿಗೆ ಹೀಗೆ ಅನಿಸಿತು: ಕ್ಷತ್ರಿಯರು ಹೇಗೂ ಹಿಂಸೆಮಾಡುವವರೇ. ಅವರ ಕೈಯಿಂದ ರಾಕ್ಷಸರ ಸಂಹಾರ ಮಾಡಿಸಿದರಾಯಿತು. ಮುಳ್ಳಿನಿಂದ ಮುಳ್ಳನ್ನು

ಕಿತ್ತು ಹಾಕಿದರಾಯಿತು. ತಾವು ನಿರ್ಲಿಪ್ತರಾಗಿರಬೇಕು. ವಿಶ್ವಾಮಿತ್ರ ತನ್ನ ಯಾಗರಕ್ಷಣೆಗಾಗಿ ರಾಮಲಕ್ಷ್ಮಣರನ್ನು ಕರೆದೊಯ್ದು ಅವರಿಂದ ರಾಕ್ಷಸ ಸಂಹಾರ ಮಾಡಿಸಿದ. 'ಸ್ವಸಂರಕ್ಷಣೆ ಮಾಡಿಕೊಳ್ಳಲಾರದ ಅಹಿಂಸೆಗೆ ಕಾಲೇ ಇಲ್ಲ. ಅಂಥ ಹೆಳವ ಅಹಿಂಸೆ ಹೇಗೆ ಉಳಿದೀತು?' ಎಂದು ನಾವು ಯೋಚಿಸುತ್ತೇವೆ ಈ ಕಾಲದಲ್ಲಿ. ಆದರೆ ವಸಿಷ್ಠ ವಿಶ್ವಾಮಿತ್ರರಿಗೆ ಕ್ಷತ್ರಿಯರ ಬಲದಿಂದ ತಮ್ಮ ರಕ್ಷಣೆ ಮಾಡಿಕೊಳ್ಳುವುದು ಕೀಳಾಗಿ ಕಾಣಲಿಲ್ಲ. ಆದರೆ ರಾಮನಂಥ ಕ್ಷತ್ರಿಯ ಕಾಣಬರದಿದ್ದರೆ? 'ನಾನು ಸತ್ತರೂ ಸರಿ, ಹಿಂಸೆ ಮಾಡಲೊಲ್ಲೆ' ಎನ್ನುತ್ತಿದ್ದ ವಿಶ್ವಾಮಿತ್ರ. ತಾವು ಹಿಂಸೆಮಾಡಿ, ಹಿಂಸೆಯನ್ನು ನಾಶಮಾಡುವ ಪ್ರಯೋಗವಾಗಲೇ ಆಗಿಹೋಗಿತ್ತು. ಈಗ ತಮ್ಮ ಅಹಿಂಸೆಯನ್ನಂತೂ ಬಿಡುವ ಹಾಗಿಲ್ಲ ಎಂಬುದು ನಿರ್ಧರವಾಗಿತ್ತು. ಕ್ಷತ್ರಿಯ ಸಿಗದಿದ್ದರೆ ಅಹಿಂಸಕರು ಸಾಯುತ್ತಿದ್ದರು. ಅದು ಆಗಿನ ಮಜಲು. ವಿಶ್ವಾಮಿತ್ರನ ಬಳಿ ನಿಂತು ರಾಮ ಕೇಳಿದ: 'ಇದೇನು ಈ ರಾಶಿ?' 'ಇದು ಬ್ರಾಹ್ಮಣರ ಎಲುಬಿನ ರಾಶಿ. ತಮ್ಮ ಮೇಲೆ ಬಿದ್ದ ಹಿಂಸಕ ರಾಕ್ಷಸರನ್ನು ಅಹಿಂಸಕ ಬ್ರಾಹ್ಮಣರು ನಿರೋಧಿಸಲಿಲ್ಲ. ಅವರು ಸತ್ತರು. ಅವರ ಎಲುಬಿನ ರಾಶಿ ಇದು.' ಬ್ರಾಹ್ಮಣರ ಈ ಅಹಿಂಸೆಯಲ್ಲಿ ತ್ಯಾಗವಿತ್ತು. ಆದರೆ ಇತರರಿಂದ ಸಂರಕ್ಷಿತರಾಗುವ ಬಯಕೆಯೂ ಇತ್ತು. ಇಂಥ ದೌರ್ಬಲ್ಯದಿಂದ ಅಹಿಂಸೆ ಪೂರ್ಣವಾಗದು.

ಸಾಧುಸಂತರು ಮುಂದೆ ಮೂರನೆ ಪ್ರಯೋಗ ನಡೆಸಿದರು. ಮತ್ತೊಬ್ಬರ ರಕ್ಷಣೆಯನ್ನು ಬೇಡುವಂತಿಲ್ಲ. ನನ್ನ ಅಹಿಂಸೆಯೇ ನನ್ನನ್ನು ಕಾಯ್ದೀತು. ಹಾಗೆ ಆದರೇನೇ ಅದು ನಿಜವಾದ ರಕ್ಷಣೆ ಎಂದು ಅವರು ನಿಶ್ಚಯಿಸಿದರು. ಅವರ ಈ ಪ್ರಯೋಗ ವ್ಯಕ್ತಿನಿಷ್ಠವಾದುದು. ಅದನ್ನು ಅವರು ಪೂರ್ಣತೆಗೆ ಒಯ್ದು ಮುಟ್ಟಿಸಿದರು. ಆದರೆ ಅದರಲ್ಲಿ ಆ ವ್ಯಕ್ತಿಗತತೆ ಉಳಿಯಿತು. ಹಿಂಸಕಜನರು ಸಮಾಜದ ಮೇಲೆ ಬಂದು ಬಿದ್ದಾಗ ಜನರು ಸಾಧುಗಳ ಬಳಿ ಬಂದು 'ನಾವೇನು ಮಾಡಬೇಕು?' ಎಂದು ಕೇಳಿದರೆ, ಅದಕ್ಕೆ ನಿಶ್ಚಿತವಾದ ಉತ್ತರ ಕೊಡಲು ಅವರಿಗೆ ಕಷ್ಟವಾಗುತ್ತಿತ್ತೋ ಏನೋ. ವೈಯಕ್ತಿಕ ಜೀವನದಲ್ಲಿ ಪರಿಪೂರ್ಣ ಅಹಿಂಸೆಯನ್ನು

ಉಪಯೋಗಿಸುವ ಸಾಧುವೂ ಸಮಾಜಕ್ಕೆ ಸಲಹೆ ಕೊಡುವಾಗ 'ನಾವು ದುರ್ಬಲರು, ಏನು ಮಾಡಲಾದೀತು' ಎನ್ನುತಿದ್ದನೋ ಏನೋ. ಸಾಧುಗಳಲ್ಲಿ ದೋಷಾರೋಪಣೆ ಬಾಲಸಾಹಸವೆ. ನಾನು ಅವರ ಹೆಗಲ ಮೇಲೆ ನಿಂತಿದೇನೆ ಎಂದು ಕಣ್ಣಿಗೆ ಕಂಡುದನ್ನು ಹೇಳುತ್ತೇನೆ. ಅವರು ನನ್ನನ್ನು ಕ್ಷಮಿಸಬೇಕು. ಅವರು ನನ್ನನ್ನು ಕ್ಷಮಿಸುತ್ತಾರೆ. ಅವರ ಕ್ಷಮಾಗುಣ ಅಪಾರ. ಅಹಿಂಸೆಯನ್ನು ಸಾಮುದಾಯಿಕ ಪ್ರಯೋಗವಾಗಿ ಮಾಡಲು ಅವರಿಗೆ ಹೊಳೆಯಲಿಲ್ಲವೆಂದಲ್ಲ. ಆದರೆ ಅವರಿಗೆ ಪರಿಸ್ಥಿತಿ ಅನುಕೂಲವೆನಿಸಲಿಲ್ಲ. ತಮ್ಮ ಸ್ವಂತಕ್ಕೆ ಬೇರೆ ಬೇರೆ ಪ್ರಯೋಗ ಮಾಡಿದರು. ಹಾಗೆ ಬಿಡಿ ಬಿಡಿಯಾಗಿ ಮಾಡಿದ ಪ್ರಯೋಗಗಳಿಂದಲೇ ಶಾಸ್ತ್ರ ಹುಟ್ಟುವುದು. ಸಮ್ಮಿಲಿತ ಅನುಭವದಿಂದ ಶಾಸ್ತ್ರ.

ಸಾಧುಸಂತರ ತರುವಾಯ ನಾಲ್ಕನೆಯ ಪ್ರಯೋಗವನ್ನು ಇಂದು ನಾವು ಮಾಡುತ್ತಿದೇವೆ. ಸಮಸ್ತ ಸಮಾಜವೂ ಒಟ್ಟಾಗಿ ಅಹಿಂಸಕ ಸಾಧನಗಳಿಂದ ಹಿಂಸೆಗೆ ಪ್ರತೀಕಾರ ಮಾಡುವ ಪ್ರಯೋಗವನ್ನು ನಾವು ಇಂದು ನಡೆಸಿದೇವೆ. ಹೀಗೆ ನಾಲ್ಕು ಪ್ರಯೋಗವನ್ನು ನಾವು ಕಂಡಿದೇವೆ. ಬಿಡಿ ಬಿಡಿ ಪ್ರಯೋಗಗಳಲ್ಲಿ ಅಪೂರ್ಣತೆ ಇದ್ದೇ ಇರುತ್ತದೆ. ವಿಕಾಸಕ್ರಮದಲ್ಲಿ ಈ ಮಾತು ಅಪರಿಹಾರ್ಯ. ಆದರೆ ಆಯಾ ಕಾಲಕ್ಕೆ ಆಯಾ ಪ್ರಯೋಗ ಪೂರ್ಣವೆನ್ನಬೇಕು. ಮುಂದೆ ೧೦ ಸಾವಿರ ವರ್ಷವಾದಮೇಲೆ ಈಗಿನ ನಮ್ಮ ಈ ಅಹಿಂಸಕ ಯುದ್ಧದಲ್ಲಿ ಬೇಕಾದಷ್ಟು ಹಿಂಸೆಯಿದ್ದುದು ಕಂಡುಬಂದೀತು. ಶುದ್ಧ ಅಹಿಂಸೆಯ ಪ್ರಯೋಗ ಇನ್ನೂ ನಡೆಯುತ್ತಲೇ ಇದ್ದೀತು. ಜ್ಞಾನ, ಕರ್ಮ, ಭಕ್ತಿ ಮಾತ್ರವೇ ಅಲ್ಲದೆ ಸಕಲ ಸದ್ಗುಣಗಳ ವಿಕಾಸವೂ ಆಗುತ್ತಲಿದೆ. ಪೂರ್ಣವಾದುದು ಒಂದು ವಸ್ತು : ಪರಮಾತ್ಮ. ಭಗವದ್ಗೀತೆಯಲ್ಲಿ ಪುರುಷೋತ್ತಮಯೋಗ ಪೂರ್ಣವಾಗಿ ಇದೆ. ಆದರೆ ವೈಯಕ್ತಿಕ ಸಾಮುದಾಯಿಕ ಜೀವನಗಳಲ್ಲಿ ಅದರ ಪೂರ್ಣ ವಿಕಾಸವಾಗಬೇಕಾಗಿದೆ. ವಚನಗಳ ವಿಕಾಸವೂ ಆಗುತ್ತದೆ. ಋಷಿಗಳು ಮಂತ್ರ ದ್ರಷ್ಟಾರರು, ಅವರೇ ಕರ್ತರಲ್ಲ. ಅವರಿಗೆ ಮಂತ್ರದ ಅರ್ಥ ಕಂಡಿತು. ಆದರೆ ಅದೇ ಅರ್ಥ ಎನ್ನುವುದೇ? ಅವರಿಗೆ ಒಂದು ದರ್ಶನವಾಯಿತು. ಮುಂದೆ ನಮಗೆ ಅದರ ವಿಕಸಿತ ಅರ್ಥ ಕಾಣುವ ಸಂಭವವಿದೆ. ಅವರಿಗಿಂತ

ಸಂಪೂರ್ಣವಾಗಿ ಹಾಲನ್ನು ಬಿಡುವ ಪ್ರಯೋಗವನ್ನು ನಾವು ಮಾಡಬೇಕು. ಮನುಷ್ಯರು ಇತರ ಪ್ರಾಣಿಗಳ ಹಾಲನ್ನು ಕುಡಿಯುವುದು ಗೌಣವೇ ಸರಿ. ಇನ್ನು ಹತ್ತು ಸಾವಿರ ವರ್ಷಕ್ಕೆ ಬರುವ ಜನ ನಮ್ಮ ಬಗ್ಗೆ 'ಹಾಲು ಕುಡಿಯ ಬಾರದೆಂಬ ವ್ರತ ತೊಟ್ಟರೆ? ಹಾಲನ್ನು ಹೇಗಾದರೂ ಕುಡಿಯುತ್ತಿದ್ದರೋ! ಇಷ್ಟು ಕೀಳೆ!' ಎಂದಾರು. ಸಾರಾಂಶ ಇಷ್ಟು: ನಿರ್ಭಯತೆ ನಮ್ರತೆ ಗಳಿಂದ ಪ್ರಯೋಗಮಾಡುತ್ತ ನಾವೆಲ್ಲರೂ ಮುಂಬರಿಯಬೇಕು. ಸತ್ಯದ ಕ್ಷಿತಿಜವನ್ನು ವಿಶಾಲವಾಗಿಸುತ್ತ ಹೋಗಬೇಕು ವಿಕಾಸಕ್ಕೆ ಬೇಕಾದಷ್ಟು ಅವಕಾಶವಿದೆ. ಯಾವ ಗುಣವೂ ಇನ್ನೂ ಪೂರ್ಣ ವಿಕಸಿತವಾಗಿಲ್ಲ.

## ೯೨. ಆಸುರೀ ಸಂಪತ್ತಿಯ ತ್ರಿವಿಧ ಮಹತ್ವಾಕಾಂಕ್ಷೆ : ಸತ್ತೆ, ಸಂಸ್ಕೃತಿ, ಸಂಪತ್ತಿ

ದೈವೀ ಸಂಪತ್ತಿಯನ್ನು ವಿಕಾಸಗೊಳಿಸಬೇಕು. ಆಸುರೀ ಸಂಪತ್ತಿ ಯನ್ನು ಬಹಿಷ್ಕರಿಸಬೇಕು. ಅದಕ್ಕಾಗಿ ಭಗವಂತ ಆಸುರೀ ಸಂಪತ್ತಿಯನ್ನು ವರ್ಣಿಸಿದಾನೆ. ಅದರಲ್ಲಿ ಮುಖ್ಯ ಅಂಶ ಮೂರು. ಅಸುರರ ಚರಿತ್ರೆಯ ಸಾರ 'ಸತ್ತೆ, ಸಂಸ್ಕೃತಿ, ಸಂಪತ್ತಿ'. ತಮ್ಮ ಸಂಸ್ಕೃತಿಯೇ ಸರ್ವೋತ್ಕೃಷ್ಟ, ಅದೇ ಸತ್ಯ, ಅದನ್ನು ಲೋಕದ ತಲೆಯ ಮೇಲೆ ಹೇರಬೇಕು ಎಂಬ ಮಹತ್ವಾಕಾಂಕ್ಷೆ. ನಿಮ್ಮ ಸಂಸ್ಕೃತಿಯನ್ನು ಹೇರಲೇಕೆ? ಆಮೇಲೆ ಅದನ್ನು ಬಹಳ ಒಳ್ಳೆಯದೆನ್ನಿ. ಏನು ಒಳ್ಳೆಯದು? ನಿಮ್ಮದಾದುದರಿಂದ ಒಳ್ಳೆಯದು. ಆಸುರೀ ವ್ಯಕ್ತಿಗಳೇ ಇಂಥವರು. ಇಂಥವರು ಕಟ್ಟಿದ ಸಾಮ್ರಾಜ್ಯವಿನ್ನೇನು? ಅದಕ್ಕೂ ಈ ಮೂರು ಅಂಶ ಬೇಕಾಗಿರುತ್ತವೆ.

ಬ್ರಾಹ್ಮಣರಿಗೆ ಅನಿಸುತ್ತದಲ್ಲ, ತಮ್ಮ ಸಂಸ್ಕೃತಿಯೇ ಸರ್ವಶ್ರೇಷ್ಠ ಎಂದು. ಸಮಸ್ತ ಜ್ಞಾನವೂ ತಮ್ಮ ವೇದಗಳಲ್ಲಿದೆ. ಲೋಕದಲ್ಲೆಲ್ಲಾ ವೈದಿಕ ಸಂಸ್ಕೃತಿಯ ವಿಜಯವಾಗಬೇಕು. 'ಅಗ್ರತಶ್ಚತುರೋ ವೇದಾನ್ ಪೃಷ್ಠತಃ ಸಶರಂ ಧನುಃ.' ಹೀಗೆ ಇಡೀ ಭೂಮಿಯಮೇಲೆ ತಮ್ಮ ಸಂಸ್ಕೃತಿಯ ಬಾವುಟವನ್ನು ಕುಣಿಸಬೇಕು. ಆದರೆ ಬೆನ್ನಿಗೆ 'ಸಶರಂ ಧನುಃ' ಇದ್ದರೆ ಮುಂದಿನ ವೇದಗಳು ಮಣ್ಣು ಮುಕ್ಕಿದಂತೆಯೆ! ಕುರಾನಿನಲ್ಲಿ ಏನಿದೆಯೋ ಅದು ಮಾತ್ರವೇ ನಿಜ ಎಂದು ಮುಸಲ್ಮಾನರಿಗೆ ಅನಿಸುತ್ತದೆ. ಕ್ರಿಸ್ತಾನರಿಗೂ

ಹಾಗೇ ಅನಿಸುತ್ತದೆ. ಇತರ ಧರ್ಮದವರು ಎಷ್ಟೇ ಮೇಲೇರಿರಲಿ, ಕ್ರಿಸ್ತನಲ್ಲಿ ವಿಶ್ವಾಸವಿಲ್ಲದಿದ್ದರೆ ಅವರಿಗೆ ಸ್ವರ್ಗವಿಲ್ಲ. ದೇವರ ಮನೆಗೆ ಅವರು ಒಂದೇ ಬಾಗಿಲು ಮಾಡಿಸಿದಾರೆ. ಅದು ಕ್ರಿಸ್ತನ ಬಾಗಿಲು! ಜನ ತಮ್ಮ ಮನೆಗೆ ಬೇಕಾದಷ್ಟು ಬಾಗಿಲು ಕಿಟಕಿ ಇಡಿಸುತ್ತಾರೆ. ತಮ್ಮ ದೇವರ ಮನೆಗೆ ಮಾತ್ರ ಒಂದೇ, 'ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ' ಎಂದು ಎಲ್ಲರಿಗೂ ಅನಿಸುತ್ತದೆ. ನಾನು ಭಾರದ್ವಾಜ ಕುಲದವನು. ನನ್ನೀ ಪರಂಪರೆ ಅವ್ಯಾಹತವಾಗಿ ನಡೆದುಬಂದಿದೆ. ಪಾಶ್ಚಾತ್ಯರಲ್ಲೂ ಇದೇ ಹಾಡೇ. ನನ್ನ ನರಗಳಲ್ಲಿ ನಾರ್ಮನ್ ಸರದಾರರ ರಕ್ತ ಹರಿಯುತ್ತಿದೆ. ನಮ್ಮಲ್ಲಿ ಗುರುಪರಂಪರೆಯಿಲ್ಲವೆ. ಮೂಲ ಆದಿಶಂಕರರು. ಆಮೇಲೊಬ್ಬ ಬ್ರಹ್ಮದೇವನನ್ನೊ ಮತ್ತೊಬ್ಬನನ್ನೊ ಗಂಟುಹಾಕಬೇಕು. ಮುಂದೆ ನಾರದ, ಆಮೇಲೆ ವ್ಯಾಸ, ಆಮೇಲೆ ಮತ್ತೊಬ್ಬ ಋಷಿ, ಮತ್ತೆ ಯಾರಾದರೂ ನಾಲ್ಕು ಜನರನ್ನು ಹಾಕಿ, ಆಮೇಲೆ ತನ್ನ ಗುರು, ಅನಂತರ ತಾನು – ಹೀಗೆ ಪರಂಪರೆಯನ್ನು ತೋರಬೇಕು. ತಾನು ಭಾರಿ ಮನುಷ್ಯ, ತನ್ನ ಸಂಸ್ಕೃತಿ ಶ್ರೇಷ್ಠ ಎಂದು ವಂಶಾವಳಿಯಿಂದ ಸಿದ್ಧಮಾಡಬೇಕು. ನಿನ್ನ ಸಂಸ್ಕೃತಿ ಉತ್ತಮವಾಗಿದ್ದರೆ ನಿನ್ನ ಕೃತಿಗಳಲ್ಲಿ ಅದು ಕಂಡುಬರಲಿ. ಅದರ ಪ್ರಭೆ ಆಚರಣೆಯಲ್ಲಿ ಹರಡಲಿ. ಅದೆಲ್ಲ ಏನೂ ಇಲ್ಲ. ತನ್ನ ಬಾಳಿನಲ್ಲಿಯೇ ಇಲ್ಲದ ಸಂಸ್ಕೃತಿ, ತನ್ನ ಮನೆಯಲ್ಲೇ ಇಲ್ಲದ ಸಂಸ್ಕೃತಿ ಲೋಕದಲ್ಲೆಲ್ಲ ಹರಡಲಿ ಎಂದರೆ ಅದು ಆಸುರೀ ವಿಚಾರಸರಣಿ.

ನನ್ನ ಸಂಸ್ಕೃತಿಯೆ ಸರ್ವ ಸುಂದರವಿದ್ದಂತೆ ಲೋಕದ ಸಕಲ ಸಂಪತ್ತಿಗೂ ನಾನೇ ಪಾತ್ರ. ಸಕಲ ಸಂಪತ್ತೂ ನನಗೇ ಬೇಕು. ನಾನದನ್ನು ಪಡೆಯುತ್ತೇನೆ. ಏಕೆ ಎಂದರೆ ಎಲ್ಲವನ್ನೂ ಸಮನಾಗಿ ಹಂಚಲಿಕ್ಕೆ! ಅದಕ್ಕಾಗಿ ತನ್ನನ್ನು ಧನ–ಸಂಪತ್ತಿನಲ್ಲಿ ಹೂಳಬೇಕು. ಅಕ್ಬರ್ ಹೇಳುತ್ತಿದ್ದನಂತೆ – 'ಇನ್ನೂ ರಜಪೂತರು ನನ್ನ ಸಾಮ್ರಾಜ್ಯದಲ್ಲೇಕೆ ಸೇರರು? ಒಂದೇ ಸಾಮ್ರಾಜ್ಯವಾದೀತು, ಶಾಂತಿ ಸ್ಥಾಪಿತವಾದೀತು'. ಅಕ್ಬರನಿಗೂ ಪ್ರಾಮಾಣಿಕವಾಗಿಯೂ ಹಾಗೇ ಅನಿಸುತ್ತಿತ್ತು. ಈಗಿನ ಅಸುರರಿಗೂ ಹಾಗೇ ಅನಿಸುತ್ತದೆ. ಸಂಪತ್ತನ್ನೆಲ್ಲ ಏಕತ್ರವಾಗಿಸಬೇಕು. ಏಕೆ? ಮತ್ತೆ ಹಂಚಲಿಕ್ಕೆ!

ಅದಕ್ಕಾಗಿ ನನಗೆ ಅಧಿಕಾರ, ಸತ್ತೆ ಬೇಕು. ಸರ್ವ ಸತ್ತೆಯೂ ಒಂದೇ ಕೈಯಲ್ಲಿ ಕೇಂದ್ರೀಕೃತವಾಗಬೇಕು. ಇಡೀ ಜಗತ್ತು ನನ್ನ ಆಡಳಿತದಲ್ಲಿ ಇರಬೇಕು. ಸ್ವತಂತ್ರವಾಗಿ, ನನ್ನ ತಂತ್ರದಂತೆ ಎಲ್ಲವೂ ನಡೆಯಬೇಕು. ನನ್ನ ಅಪ್ಪಣೆಯಂತೆ ನಡೆದವರು, ನನ್ನ ತಂತ್ರದಂತೆ ನಡೆದವರು ಸ್ವತಂತ್ರರು. ಹೀಗೆ ಸಂಸ್ಕೃತಿ, ಸತ್ತೆ, ಸಂಪತ್ತು ಈ ಮೂರು ಅಂಶಗಳನ್ನು ಆಸುರೀ ಸಂಪತ್ತಿಗೆ ತುಂಬಿಸಿಕೊಡಲಾಗುತ್ತದೆ.

ಒಂದಾನೊಂದು ಕಾಲದಲ್ಲಿ ಸಮಾಜದ ಮೇಲೆ ಬ್ರಾಹ್ಮಣರ ವರ್ಚಸ್ಸು ಇತ್ತು. ಅವರು ಶಾಸ್ತ್ರ ಬರೆಯಬೇಕು, ಶಾಸನ ಮಾಡಬೇಕು. ದೊರೆ ಅವರಿಗೆ ನಮಸ್ಕರಿಸಬೇಕು. ಮುಂದೆ ಆ ಯುಗ ಅಂತರಿಸಿತು. ಕ್ಷತ್ರಿಯರ ಯುಗ ಬಂತು. ಕುದುರೆ ಬಿಡುವುದು, ದಿಗ್ವಿಜಯ ಮಾಡಿಸುವುದು; ಹೀಗೆ ಕ್ಷತ್ರಿಯರ ಸಂಸ್ಕೃತಿಯೂ ಬಂದಿತು, ಹೋಯಿತು. ಬ್ರಾಹ್ಮಣ ಹೇಳಿದ — 'ನಾನು ಕಲಿಸುವವನು, ಉಳಿದವರು ಕಲಿಯುವವರು. ನನ್ನನ್ನು ಬಿಟ್ಟು ಗುರು ಮತ್ತಾರು?' ಬ್ರಾಹ್ಮಣನಿಗೆ ತನ್ನ ಸಂಸ್ಕೃತಿಯ ಅಭಿಮಾನ. ಕ್ಷತ್ರಿಯನ ಕೀಲು – ಅಧಿಕಾರ. 'ಇವೊತ್ತು ಅವನನ್ನು ಹೊಡೆದೇನು, ನಾಳೆ ಇವನನ್ನು ಕೊಂದೇನು'. ಇದು ಅವನ ಘೋಷಣೆ. ಮುಂದೆ ವೈಶ್ಯರ ಯುಗ. 'ಬೆನ್ನಿನ ಮೇಲೆ ಗುದ್ದು. ಹೊಟ್ಟೆಯ ಮೇಲೆ ಹೊಡೆಯ ಬೇಡ' ಎಂಬುದು ವೈಶ್ಯರ ಸರ್ವ ತತ್ವಜ್ಞಾನ. ಎಲ್ಲರಿಗೂ ಹೊಟ್ಟೆಯ ಜಾಣತನ ಕಲಿಸಬೇಕು. 'ಈ ಹಣ ನನ್ನದು, ಅದೂ ನನ್ನದೇ ಆದೀತು.' ಅದು ಜಪ, ಅದೇ ಸಂಕಲ್ಪ. ಇಂಗ್ಲೀಷರು ಹೇಳುವುದಿಲ್ಲವೆ — 'ಸ್ವರಾಜ್ಯ ಬೇಕಾದರೆ ತೆಗೆದುಕೊಳ್ಳಿ. ನಮ್ಮ ಸಾಮಾನನ್ನು ಇಲ್ಲಿ ಮಾರಿಕೊಳ್ಳಲು ಅವಕಾಶ ಕೊಡಿ. ನಿಮ್ಮ ಸಂಸ್ಕೃತಿಯನ್ನು ನೀವು ಚೆನ್ನಾಗಿ ಅಭ್ಯಾಸ ಮಾಡಿ. ಲಂಗೋಟಿ ಹಾಕಿ. ಸಂಸ್ಕೃತಿಯನ್ನು ಸಂಬಾಳಿಸಿಕೊಳ್ಳಿ.' ಈಗಿನ ಯುದ್ಧಗಳೂ ವ್ಯಾಪಾರದವು. ಆದರೆ ಈ ಯುಗವೂ ಕಳೆದೀತು. ಆಗಲೇ ಕಳೆಯಲು ಆರಂಭವಾಗಿದೆ. ಹೀಗಿದೆ ಆಸುರೀ ಸಂಪತ್ತಿಯ ರೀತಿ.

**೯೩. ಕಾಮ ಕ್ರೋಧ ಮುಕ್ತಿಯ ಶಾಸ್ತ್ರೀಯ ಸಂಯಮ ಮಾರ್ಗ**

ಆಸುರೀ ಸಂಪತ್ತಿಯನ್ನು ದೂರಮಾಡುವ ಪ್ರಯತ್ನ ಮಾಡಬೇಕು. ಆಸುರೀ ಸಂಪತ್ತಿ ಎಂದರೆ 'ಕಾಮಕ್ರೋಧ ಲೋಭ'. ಇವು ಇಡೀ

ಲೋಕವನ್ನೇ ಕುಣಿಸುತ್ತಿವೆ. ಈ ಕುಣಿತ ಇನ್ನು ಸಾಕು. ಅದನ್ನು ಬಿಡಲೇ ಬೇಕು. ಕಾಮದಿಂದ ಕ್ರೋಧ ಲೋಭ ಹುಟ್ಟುತ್ತವೆ. ಕಾಮಕ್ಕೆ ಅನುಕೂಲ ಪರಿಸ್ಥಿತಿ ದೊರೆಯಿತೆಂದರೆ ಲೋಭ ಹುಟ್ಟಿತೇ! ಪ್ರತಿಕೂಲ ವಾಯಿತೋ ಕ್ರೋಧ. ಗೀತೆಯಲ್ಲಿ ಶ್ಲೋಕಶ್ಲೋಕದಲ್ಲೂ ಈ ಮೂರನ್ನೂ ಬಿಟ್ಟು ದೂರವಿರು ಎಂದು ಹೇಳಿದೆ. ಹದಿನಾರನೆಯ ಅಧ್ಯಾಯದ ಕೊನೆ ಯಲ್ಲೂ ಇದನ್ನೇ ಹೇಳಿದೆ. ಕಾಮಕ್ರೋಧ ಲೋಭಗಳು ಮೂರೂ ನರಕದ ದೊಡ್ಡ ದ್ವಾರಗಳು. ಈ ಬಾಗಿಲೊಳಗಿಂದ ಬಹಳ ಜನಸಂದಣಿ. ಎಷ್ಟೋ ಜನ ಬರಹೋಗುತ್ತಿರುತ್ತಾರೆ. ನರಕದ ದಾರಿ ರಮಣೀಯ. ಅಲ್ಲಿ ಮೋಟಾರೂ ಹೋಗುತ್ತದೆ. ಎಷ್ಟೋ ಜನ ಗೆಳೆಯರೂ ಭೇಟಿಯಾದಾರು. ಆದರೆ ಸತ್ಯದ ದಾರಿ ಕಿರಿದು.

ಈ ಕಾಮಕ್ರೋಧಗಳಿಂದ ನಾವು ಪಾರಾಗುವುದು ಹೇಗೆ? ಸಂಯಮದ ದಾರಿ ಹಿಡಿಯಬೇಕು. ಶಾಸ್ತ್ರೀಯ ಸಂಯಮದ ಕಚ್ಚೆಯನ್ನು ಬಿಗಿಯಬೇಕು. ಸಾಧುಸಂತರ ಅನುಭವವೇ ಶಾಸ್ತ್ರ. ಪ್ರಯೋಗ ಮಾಡಿ ಅವರು ಪಡೆದ ಅನುಭವದಿಂದ ಶಾಸ್ತ್ರ ಹುಟ್ಟುತ್ತದೆ. ಈ ಸಂಯಮವೆ ಸಿದ್ಧಾಂತದ ಕನೆ–ಕಟ್ಟು. ಸುಮ್ಮನೆ ಸಂಶಯಗೊಳ್ಳುತ್ತ ಕೂಡದಿರು. ಕಾಮಕ್ರೋಧವೇ ಇಲ್ಲವಾದರೆ ಜಗತ್ತು ಹೇಗೆ ನಡೆದೀತು? ಲೋಕ ನಡೆಯ ಬೇಕಲ್ಲ. ಸ್ವಲ್ಪಮಟ್ಟಿಗಾದರೂ ಕಾಮಕ್ರೋಧ ಇರಬೇಡವೆ? ದಯವಿಟ್ಟು ಈ ಬಗೆಯ ಸಂಶಯಪಡಬೇಡಿ. ಕಾಮಕ್ರೋಧಕ್ಕೇನು ಕಡಮೆ? ಬೇಕಾದಷ್ಟು, ನಿನಗೆ ಅಗತ್ಯವಾದುದಕ್ಕಿಂತ ಹೆಚ್ಚಾಗಿ–ಬೇಡವಾದಷ್ಟು ತುಂಬಿಕೊಂಡಿದೆ. ವ್ಯರ್ಥವಾಗಿ ಬುದ್ಧಿಭೇದವನ್ನೇಕೆ ಹುಟ್ಟಿಸಿಕೊಳ್ಳ ಬೇಕು? ಕಾಮ ಕ್ರೋಧ ಲೋಭ ನೀನು ಬಯಸುವುದಕ್ಕಿಂತ ಹೆಚ್ಚಾಗಿ ಇದೆ. ಕಾಮವೇ ಇಲ್ಲವಾದರೆ ಸಂತಾನಪ್ರಾಪ್ತಿ ಹೇಗೆ ಎಂಬ ಚಿಂತೆ ಬೇಡ. ನೀನು ಎಷ್ಟೇ ಸಂತತಿ ನಿರ್ಮಾಣ ಮಾಡಿದರೂ ಒಂದು ದಿನ ಈ ಪೃಥ್ವಿಯಲ್ಲಿ ಮನುಷ್ಯನ ಹೆಸರೇ ಇಲ್ಲದ ಹಾಗೆ ನಿರ್ನಾಮವಾದೀತು. ಶಾಸ್ತ್ರಜ್ಞರೂ ಅದೇ ಮಾತನ್ನೆ ಹೇಳುತ್ತಾರೆ. ಭೂಮಿ ಸ್ವಲ್ಪ ಸ್ವಲ್ಪವಾಗಿ ಕಾವಾರಿ ತಣ್ಣಗಾಗುತ್ತಿದೆ. ಒಂದಾನೊಂದು ಕಾಲದಲ್ಲಿ ಪೃಥ್ವಿ ಅತ್ಯಂತ ಉಷ್ಣವಾಗಿತ್ತು. ಅದರ ಮೇಲೆ ಪ್ರಾಣವೇ ಇರಲಿಲ್ಲ. ಒಂದಾನೊಂದು

ಕಾಲ ಮತ್ತೆ ಬಂದೀತು, ಆಗ ಪೃಥ್ವಿ ಪೂರಾ ತಣ್ಣಗಾಗಿ ಜೀವ ಸೃಷ್ಟಿಯೆಲ್ಲಾ ಪ್ರಳಯದ ಪಾಲಾದೀತು. ಹೀಗಾಗಲು ಲಕ್ಷಾಂತರ ವರ್ಷ ಬೇಕಾದೀತು. ನೀನು ಬೇಕಾದಷ್ಟು ಸಂತಾನೋತ್ಪತ್ತಿ ಮಾಡು. ಕಟ್ಟಕಡೆಗೆ ಈ ಪ್ರಳಯ ನಿಶ್ಚಯ. ಪರಮೇಶ್ವರ ತಾಳುವ ಅವತಾರ ಧರ್ಮ ರಕ್ಷಣೆಗಾಗಿ; ಸಂಖ್ಯೆಯ ರಕ್ಷಣೆಗಾಗಿಯಲ್ಲ. ಧರ್ಮಪರಾಯಣನಾದ ಮನುಷ್ಯ ಒಬ್ಬನೇ ಆಗಲಿ ಇರುವತನಕ, ಪಾಪಭೀರುವೂ ಸತ್ಯನಿಷ್ಠನೂ ಒಬ್ಬನೇ ಆದರೂ ಇರುವತನಕ ಚಿಂತೆಯಿಲ್ಲ. ಅವನ ಮೇಲೆ ಈಶ್ವರನ ದೃಷ್ಟಿಯಿದ್ದೀತು. ಧರ್ಮಹೀನರಾದವರು ಸಾವಿರಾರು ಜನ ಇದ್ದೇನು, ಇರದಿದ್ದರೇನು? ಒಂದೇ.

ಇದನ್ನೆಲ್ಲ ಅರಿತು ಸೃಷ್ಟಿಗೆ ಶೃತಿಗೂಡಿಸಬೇಡ. ಸಂಯಮಪೂರ್ವಕ ನಡೆ. ತಾಳಗೆಟ್ಟು ನಡೆಯಬೇಡ. ಲೋಕಸಂಗ್ರಹ ಮಾಡಬೇಕೆಂದರೆ ಲೋಕ ಹೇಳಿದಂತೆ ನಡೆಯಬೇಕೆಂದಲ್ಲ. ಮನುಷ್ಯರ ಸಂಘವನ್ನು ವೃದ್ಧಿ ಮಾಡುವುದಾಗಲಿ ಸಂಪತ್ತನ್ನು ರಾಶಿ ಹಾಕುವುದಾಗಲಿ ಸುಧಾರಣೆಯಲ್ಲ. ಸಂಖ್ಯೆಯನ್ನು ಅವಲಂಬಿಸಿಲ್ಲ ವಿಕಾಸ. ಮೇರೆ ತಪ್ಪಿ ಜನಸಂಖ್ಯೆ ಬೆಳೆದರೆ ಮನುಷ್ಯರು ಒಬ್ಬರನ್ನೊಬ್ಬರು ಕೊಂದಾರು. ಮೊದಲು ಪಶುಪಕ್ಷಿಗಳನ್ನು ತಿಂದು ಮನುಷ್ಯ ಸಮಾಜ ಸೊಕ್ಕೀತು. ಆಮೇಲೆ ಹಸುಗೂಸು ಮಕ್ಕಳನ್ನು ಹರಿದು ತಿಂದಾರು. ಕಾಮಕ್ರೋಧಗಳಲ್ಲಿ ಸಾರವಿದೆ ಎಂಬುದನ್ನು ಒಪ್ಪಿದರೆ ಕಟ್ಟಕಡೆಗೆ ಮನುಷ್ಯರು ಮನುಷ್ಯರನ್ನೆ ಹರಿ ಹರಿದು ತಿಂದಾರು. ಇದರಲ್ಲಿ ಎಳ್ಳಷ್ಟೂ ಸಂಶಯ ಬೇಡ. ಲೋಕಸಂಗ್ರಹವೆಂದರೆ ಲೋಕಕ್ಕೆ ಸುಂದರ, ವಿಶುದ್ಧ ಮಾರ್ಗವನ್ನು ತೋರುವುದು. ಕಾಮಕ್ರೋಧದಿಂದ ಮುಕ್ತರಾಗಿ, ಅದರಿಂದ ಮನುಷ್ಯರು ಪೃಥ್ವಿಯಿಂದ ನಿರ್ನಾಮವಾದರೆನ್ನಿ. ಮಂಗಳ ಗ್ರಹದ ಮೇಲೆ ಜೀವೋತ್ಪತ್ತಿಯಾದೀತು. ಆ ಚಿಂತೆ ಬೇಡ. ಅವ್ಯಕ್ತ ಪರಮಾತ್ಮ ಎಲ್ಲೆಲ್ಲೂ ತುಂಬಿ ಇದಾನೆ. ಅವನು ನಿನ್ನ ಕಾಳಜಿ ಮಾಡಿ ಯಾನು. ಮೊದಲು ನೀನು ಮುಕ್ತನಾಗು. ಬಹಳ ದೂರ ನೋಡ ಬೇಕಾಗಿಲ್ಲ. ಸೃಷ್ಟಿಯ ಚಿಂತೆ, ಮಾನವಜಾತಿಯ ಚಿಂತೆ ನಿನಗೆ ಬೇಡ. ನಿನ್ನ ನೈತಿಕ ಶಕ್ತಿ ಬೆಳೆಸು; ಕಾಮಕ್ರೋಧಗಳನ್ನು ಗುಡಿಸಿ ಒಳಿದು ಬಿಸಾಡು.

**'ಮೊದಲು ಬಿಡಿಸು ನಿನ್ನ ಕೊರಲು' ***

ನಿನ್ನ ಕುತ್ತಿಗೆ ಸಿಕ್ಕಿದೆ. ಮೊದಲು ಅದನ್ನು ಬಿಡಿಸು. ಅಷ್ಟಾದರೆ ಎಷ್ಟೋ ಕೆಲಸವಾಯಿತು. ಸಂಸಾರ ಸಮುದ್ರದಿಂದ ದೂರವಾಗಿ ದಂಡೆಯ ಮೇಲೆ ನಿಂತು ಸಮುದ್ರದ ವಿನೋದವನ್ನು ನೋಡುವುದರಲ್ಲಿದೆ ಆನಂದ. ನೀರು ಕುಡಿದು ಉಸಿರು ಬಿಗಿದ, ಬಾಯಿ ಮೂಗುಗಳಲ್ಲಿ ನೀರು ಹೋಗುವ ಮನುಷ್ಯನಿಗೆ ಸಮುದ್ರದೊಳಗಿದ್ದು ಏನು ಆನಂದ? ಸಾಧುಸಂತರು ಸಮುದ್ರ ತೀರದಲ್ಲಿ ನಿಂತು ಆನಂದವನ್ನು ಸೂರೆಗೊಳ್ಳುತ್ತಾರೆ. ಸಂಸಾರ ದಿಂದ ಅಲಿಪ್ತರಾಗಿರುವ ಸಂತರ ಈ ವೃತ್ತಿ ಮೈಗೂಡದೆ ನನಗೆ ಆನಂದವಿಲ್ಲ. ಕಮಲಪತ್ರದಂತೆ ಅಲಿಪ್ತನಾಗಿರು. 'ಸಂತರು ದೊಡ್ಡ ಪರ್ವತಗಳ ಶಿಖರದ ಮೇಲಿರುತ್ತಾರೆ. ಅಲ್ಲಿಂದ ಕೆಳಗಡೆ ಸಂಸಾರದ ಕಡೆ ನೋಡುತ್ತಾರೆ. ಆಗ ಅವರಿಗೆ ಸಂಸಾರ ಕ್ಷುದ್ರವಾಗಿ ಕಾಣುತ್ತದೆ' ಎಂದಿದಾನೆ ಬುದ್ಧ. ನೀನೂ ಮೇಲೇರಿ ನೋಡು. ಆಗ ಈ ವಿಶಾಲ ವಿಸ್ತಾರವೆಲ್ಲ ಕ್ಷುದ್ರವಾಗಿ ಕಂಡೀತು. ಆಮೇಲೆ ಸಂಸಾರದ ಕಡೆ ಮನಸ್ಸೇ ಹೋಗಲಿಕ್ಕಿಲ್ಲ.

ಸಾರಾಂಶ – ಆಸುರೀ ಸಂಪತ್ತಿಯನ್ನು ದೂರಮಾಡಿ ದೈವೀಸಂಪತ್ತಿಯನ್ನು ಬೆಳೆಸಿಕೊಳ್ಳಬೇಕೆಂದು ಈ ಅಧ್ಯಾಯದಲ್ಲಿ ಭಗವಂತ ಕಳಕಳಿಯಿಂದ ಪುನಃ ಪುನಃ ಹೇಳಿದಾನೆ. ಆ ರೀತಿ ಯತ್ನಮಾಡಬೇಕು.

ಭಾನುವಾರ,
೫-೬-೧೯೩೭.

---

* ಆಪುಲಾ ತೂಂ ಗಳ ಘೇಯಿ ಉಗವೂನಿ !

ನೂರು ಜನ ಒಂದೆಡೆ ಸೇರಿ ಇದ್ದರೆ ಮರುದಿನವೇ ಸೃಷ್ಟಿ ಭಂಗವಾಗಿ ತೋರುತ್ತದೆ. ಅಲ್ಲಿಯ ಗಾಳಿ ನಮ್ಮಿಂದ ಕೆಟ್ಟಿತು. ಸ್ಥಳ ಹೊಲಸಾಯಿತು. ಊಟಮಾಡಿ ಸೃಷ್ಟಿಯನ್ನು ಸವೆಸುತ್ತೇವೆ. ಸೃಷ್ಟಿಸಂಸ್ಥೆಯ ಈ ಸವಕಲನ್ನು ತುಂಬಿಕೊಡಬೇಕು. ಇದಕ್ಕಾಗಿ ಯಜ್ಞಸಂಸ್ಥೆ ನಿರ್ಮಾಣವಾಯಿತು. ಯಜ್ಞದ ಉದ್ದೇಶ್ಯವೇನು? ಸೃಷ್ಟಿಯಲ್ಲಿ ಹೀಗೆ ನಾಶವಾದುದನ್ನು ತುಂಬಿ ಕೊಡುವುದೇ ಯಜ್ಞ. ಸಾವಿರಾರು ವರ್ಷಗಳಿಂದ ನಾವು ಬೇಸಾಯ ಮಾಡುತ್ತಿದ್ದೇವೆ. ನೆಲದ ಹುಲುಸು ಕಡಿಮೆಯಾಗುತ್ತಿದೆ. ನಾವದನ್ನು ಸವೆಸುತ್ತಿದೇವೆ. ಯಜ್ಞ ನಮಗೆ ಹೇಳುತ್ತದೆ – 'ಪೃಥ್ವಿಯ ಹುಲುಸನ್ನು ತಿರುಗಿ ಕೊಡು. ಹೊಲ ಉಳು. ಸೂರ್ಯನ ಶಾಖ ಅದರೊಳಗೆ ಹೊಗಲಿ. ಗೊಬ್ಬರ ಹಾಕು.' ನಾಶವಾದುದನ್ನು ಮತ್ತೆ ತುಂಬುವುದು ಯಜ್ಞದ ಒಂದು ಉದ್ದೇಶ್ಯ. ಮತ್ತೊಂದು: ಬಳಸುವ ವಸ್ತುವಿನ ಶುದ್ಧೀಕರಣ. ನಾವು ಬಾವಿಯನ್ನು ಉಪಯೋಗಿಸುತ್ತೇವೆ. ಅಕ್ಕಪಕ್ಕದಲ್ಲಿ ಕೆಸರಾಗುತ್ತದೆ. ನೀರು ನಿಲ್ಲುತ್ತದೆ. ಬಾವಿಯ ಸುತ್ತಲಿನ ಸೃಷ್ಟಿ ಭಂಗವಾಯಿತು. ಅದನ್ನು ಶುದ್ಧಗೊಳಿಸಬೇಕು. ಅದರೊಳಗಿನ ನೀರನ್ನು ಎತ್ತಿ ಚೆಲ್ಲಬೇಕು. ಕೆಸರನ್ನು ದೂರ ತೆಗೆದುಹಾಕಬೇಕು. ಸವೆದುದನ್ನು ತುಂಬುವುದು, ಶುದ್ಧಿಗೊಳಿಸುವುದು – ಇವುಗಳ ಜೊತೆಗೆ ಪ್ರತ್ಯಕ್ಷವಾಗಿ ಏನನ್ನಾದರೂ ನಿರ್ಮಾಣ ಮಾಡಬೇಕಾಗುತ್ತದೆ. ಯಜ್ಞದಲ್ಲಿ ಮೂರನೆಯದು ಇದೂ ಒಂದು. ನಾವು ಬಟ್ಟೆಯನ್ನು ಬಳಸುತ್ತೇವೆ. ದಿನವೂ ನೂಲು ತೆಗೆದು ಅದನ್ನು ಮತ್ತೆ ನಿರ್ಮಿಸಬೇಕು. ಹತ್ತಿಬಿಡಿಸುವುದು, ಧಾನ್ಯ ಬೆಳೆಸುವುದು, ನೂಲು ತೆಗೆಯುವುದು, ಎಲ್ಲವೂ ಯಜ್ಞಕ್ರಿಯೆ. ಯಜ್ಞದಲ್ಲಿ ನಿರ್ಮಾಣ ಮಾಡುವುದು ಸ್ವಾರ್ಥಕ್ಕಾಗಿಯಲ್ಲ. ನಾವು ಸವೆಸಿದುದನ್ನು ನಾಶಮಾಡಿದುದನ್ನು ಪುನಃ ಉತ್ಪತ್ತಿಮಾಡಿಕೊಡುವ ಕರ್ತವ್ಯ ಭಾವನೆ ಅದರಲ್ಲಿರಬೇಕು. ಇದು ಪರೋಪಕಾರವಲ್ಲ. ನಾವು ಮೊದಲಿಗೇ ಸಾಲಗಾರರು! ಹುಟ್ಟುವಾಗಲೇ ಸಾಲ ಹೊತ್ತು ತಂದಿದೇವೆ. ಈ ಸಾಲ ತೀರಿಸಲು ಏನನ್ನು ನಿರ್ಮಿಸಬೇಕೋ ಅದಕ್ಕೆ ಯಜ್ಞ ಅಥವಾ ಸೇವೆ ಎನ್ನುತ್ತಾರೆ; ಪರೋಪಕಾರವಲ್ಲ. ಆ ಸೇವೆಯಿಂದ ಸಾಲ ತೀರಿಸಬೇಕು. ಹೆಜ್ಜೆ ಹೆಜ್ಜೆಗೂ ನಾವು ಸೃಷ್ಟಿ ಸಂಸ್ಥೆಯನ್ನು ಬಳಸುತ್ತೇವೆ. ಆ ನಷ್ಟವನ್ನು ತುಂಬಿಕೊಡಲಿಕ್ಕೆ,

ಅದನ್ನು ಶುದ್ಧಿಗೊಳಿಸಲಿಕ್ಕೆ, ಹೊಸದನ್ನು ಉತ್ಪತ್ತಿಮಾಡಲಿಕ್ಕೆ, ಯಜ್ಞ ಮಾಡಬೇಕು.

ಎರಡನೆ ಸಂಸ್ಥೆ– ಮನುಷ್ಯ ಸಮಾಜ. ತಾಯಿತಂದೆ, ಗುರು, ಗೆಳೆಯ ಇವರು ನಮಗಾಗಿ ಶ್ರಮಪಡುತ್ತಾರೆ. . ಈ ಸಮಾಜ ಋಣವನ್ನು ತೀರಿಸಲೆಂದೇ ನಮಗೆ ದಾನವನ್ನು ಹೇಳಿದಾರೆ. ಸಮಾಜದ ಸಾಲವನ್ನು ತೀರಿಸಲು ಮಾಡಿದ ಪ್ರಯೋಗವೇ ದಾನ. ದಾನವೆಂದರೆ ಪರೋಪಕಾರವಲ್ಲ. ಸಮಾಜದಿಂದ ಅಪಾರ ಸೇವೆ ಪಡೆದಿದೇನೆ ನಾನು. ಈ ಲೋಕದಲ್ಲಿ ನಾನು ಅಸಹಾಯ, ದುರ್ಬಲ ಆಗಿದ್ದೆ. ಎಳಕನಾಗಿದ್ದಾಗ ನನ್ನನ್ನು ಈ ಸಮಾಜ ದೊಡ್ಡವನನ್ನಾಗಿ ಮಾಡಿತು. ಅದಕ್ಕಾಗಿ ನಾನು ಸಮಾಜದ ಸೇವೆ ಮಾಡಬೇಕು. ಪರರಿಂದ ಏನನ್ನೂ ಪಡೆಯದೆ ಮಾಡಿದ ಸೇವೆ ಪರೋಪಕಾರ, ಆದರೆ ಆರಂಭದಲ್ಲೇ ಸಮಾಜದಿಂದ ಹೊರಲಾರದಷ್ಟು ಪಡೆದಿದೇನಲ್ಲ. ಈ ಸಮಾಜದ ಸಾಲದಿಂದ ಮುಕ್ತನಾಗಲು ಮಾಡಬೇಕಾದ ಸೇವೆಯೆ ದಾನ. ಮಾನವ ಸಮಾಜ ಮುಂಬರಿಯಲು ಮಾಡಿದ ಸಹಾಯವೇ ದಾನ. ಸೃಷ್ಟಿಯ ನಾಶವನ್ನು ಮತ್ತೆ ತುಂಬಿಕೊಡಲು ಮಾಡಿದ ಶ್ರಮವೇ ಯಜ್ಞ. ಸಮಾಜದ ಸಾಲವನ್ನು ಹರಿಸಲು ಶರೀರವನ್ನೂ ಹಣವನ್ನೂ ಉಳಿದ ಸಾಧನಗಳನ್ನೂ ಉಪಯೋಗಿಸಿ ಮಾಡಿದ ಸಹಾಯ ದಾನ.

ಇವಲ್ಲದೆ ಮೂರನೆಯ ಸಂಸ್ಥೆಯೂ ಇದೆ – ಶರೀರ. ದಿನ ದಿನವೂ ಮೈ ಸವೆಯುತ್ತಲೇ ಇದೆ. ಮನಸ್ಸು, ಬುದ್ಧಿ, ಇಂದ್ರಿಯ ಎಲ್ಲವನ್ನೂ ಬಳಸುತ್ತೇವೆ, ಸವೆಸುತ್ತೇವೆ. ಈ ಶರೀರರೂಪಿ ಸಂಸ್ಥೆಯಲ್ಲಿ ಉತ್ಪನ್ನವಾಗುವ ವಿಕಾರಗಳ, ದೋಷಗಳ ಶುದ್ಧಿಗಾಗಿ ತಪಸ್ಸನ್ನು ಹೇಳಿದಾರೆ.

ಈ ಸಮಾಜ, ಶರೀರ, ಸೃಷ್ಟಿ, ಮೂರೂ ಸಂಸ್ಥೆಗಳ ಕೆಲಸ ಉತ್ಕೃಷ್ಟವಾಗಿ ಸಾಗುವಂತೆ ನಡೆಯುವುದೇ ನಮ್ಮ ಕರ್ತವ್ಯ. ಯೋಗ್ಯವೋ ಅಯೋಗ್ಯವೋ ಅನೇಕ ಸಂಸ್ಥೆಗಳನ್ನು ನಾವು ಕಟ್ಟುತ್ತೇವೆ. ಈ ಮೂರು ಮಾತ್ರ ನಾವು ಕಟ್ಟಿದುದಲ್ಲ. ಸ್ವಭಾವತಃ ನಮಗೆ ಅವು ದೊರೆತಿವೆ. ಇವು ಕೃತ್ರಿಮ ಸಂಸ್ಥೆಗಳಲ್ಲ. ಯಜ್ಞ ದಾನ ತಪಗಳೆಂಬ ಸಾಧನಗಳಿಂದ ಈ ಸಂಸ್ಥೆಗಳ ನಷ್ಟವನ್ನು ತುಂಬಿಕೊಡುವುದು ನಮಗೆ ಸ್ವಭಾವಪ್ರಾಪ್ತ ಧರ್ಮ. ಈ ರೀತಿ ನಾವು ನಡೆಯತೊಡಗಿದರೆ ನಮಗೆ ಇದ್ದುದೋ

ಇಲ್ಲದ್ದೋ ಶಕ್ತಿ, ಇಲ್ಲಿ ಉಪಯೋಗವಾಗುತ್ತದೆ. ಇತರ ಕೆಲಸಮಾಡಲು ಹೋದರೆ ಶಕ್ತಿ ಉಳಿಯಲಿಕ್ಕೇ ಇಲ್ಲ. ಸೃಷ್ಟಿ, ಸಮಾಜ, ಶರೀರ ಈ ಮೂರೂ ಸಂಸ್ಥೆ ಸುಂದರವಾಗಿರಲಿಕ್ಕಾಗಿ ನಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸ ಬೇಕಾದೀತು. 'ದೇವರೆ, ನೀನು ನನಗೆಂಥ ಹಚ್ಚಡ ಕೊಟ್ಟೆಯೋ ಅಂಥದನ್ನೇ ಹಿಂದಕ್ಕೆ ಕೊಡುತ್ತೇನೆ. ಸರಿಯಾಗಿ ನೋಡಿ ತೆಗೆದುಕೋ ಈ ಹಚ್ಚಡ' ಎಂದು ಕಬೀರ ಹೇಳಿದಂತೆ ನಾವೂ ಹೇಳುವಂತಾದರೆ, ಎಷ್ಟು ಸಫಲತೆ! ಅಂಥ ಸಫಲತೆ ಸಿಗಲೆಂದೇ ಯಜ್ಞ–ದಾನ–ತಪಗಳ ತ್ರಿವಿಧ ಕಾರ್ಯಕ್ರಮವನ್ನು ನಡೆಸಬೇಕು.

ಯಜ್ಞ, ದಾನ, ತಪಗಳಲ್ಲಿ ಭೇದವನ್ನು ಕಂಡೆವು. ಆದರೆ ನಿಜವಾಗಿ ಭೇದವೇನೂ ಇಲ್ಲ. ಈ ಮೂರೂ ಸಂಸ್ಥೆ ಹಾಗೆ ಕೇವಲ ಪ್ರತ್ಯೇಕವಲ್ಲ. ಸೃಷ್ಟಿಗೆ ಹೊರತಲ್ಲ ಸಮಾಜ. ಶರೀರವೂ ಅಷ್ಟೆ. ಮೂರೂ ಸೇರಿ ಒಂದು ಭವ್ಯ ಸೃಷ್ಟಿಸಂಸ್ಥೆ. ಅಂತೆ ನಾವು ಮಾಡಬೇಕಾದ ಉತ್ಪಾದಕ ಕರ್ಮ, ದಾನ, ತಪಗಳನ್ನು ವ್ಯಾಪಕಾರ್ಥದಲ್ಲಿ ಯಜ್ಞವೆಂದೇ ಹೇಳಬಹುದು. ನಾಲ್ಕನೆ ಅಧ್ಯಾಯದಲ್ಲಿ ಗೀತೆ ದ್ರವ್ಯಯಜ್ಞ, ತಪೋಯಜ್ಞ ಇತ್ಯಾದಿಗಳನ್ನು ಹೇಳಿದೆ. ಯಜ್ಞದ ಅರ್ಥವನ್ನು ಗೀತೆ ವಿಶಾಲಗೊಳಿಸಿದೆ.

ಈ ಮೂರೂ ಸಂಸ್ಥೆಗಳಿಗಾಗಿ ಮಾಡಬೇಕಾದ ಸೇವೆ ಯಜ್ಞರೂಪ ವಾದುದು. ಆ ಸೇವೆ ನಿರಪೇಕ್ಷವಾಗಿರಬೇಕು. ಅದರಲ್ಲಿ ಫಲಾಪೇಕ್ಷೆ ಯಿರಲು ಬಾರದು. ಏಕೆಂದರೆ ನಾವು ಮೊದಲೇ, ಮುಂಗಡವಾಗಿಯೆ, ಫಲ ಪಡೆದಿದ್ದೇವೆ. ತಲೆಯ ಮೇಲೆ ಸಾಲವಿದೆ. ಅದನ್ನು ತೀರಿಸಬೇಕು. ಯಜ್ಞದಿಂದ ಸೃಷ್ಟಿಯಲ್ಲಿ ಸಾಮ್ಯಾವಸ್ಥೆ ಬರುತ್ತದೆ. ದಾನದಿಂದ ಸಮಾಜದಲ್ಲಿ ಸಾಮ್ಯಾವಸ್ಥೆ ಬರುತ್ತದೆ. ತಪದಿಂದ ಶರೀರದಲ್ಲಿ ಸಾಮ್ಯಾವಸ್ಥೆ ಬರುತ್ತದೆ. ಈ ಮೂರೂ ಸಂಸ್ಥೆಗಳಲ್ಲಿ ಸಾಮ್ಯಾವಸ್ಥೆಯನ್ನು ಕಾಯ್ದು ಕೊಳ್ಳುವ ಕಾರ್ಯಕ್ರಮ ಇದು. ಎಂದರೆ ಶುದ್ಧಿಯಾದೀತು, ದೂಷಿತ ಭಾವ ನಿರ್ಮೂಲವಾದೀತು.

ಈ ಸೇವೆ ಸಲ್ಲಿಸಲಿಕ್ಕೆಂದು ಕಿಂಚಿತ್ ಭೋಗವನ್ನು ಪಡೆಯಬೇಕಾ ದೀತು. ಭೋಗವೂ ಯಜ್ಞದ ಒಂದು ಅಂಗ. ಗೀತೆ ಅದನ್ನು ಆಹಾರ ಎನ್ನುತ್ತದೆ. ಈ ಶರೀರಯಂತ್ರಕ್ಕೆ ಅನ್ನದ ಇದ್ದಿಲನ್ನು ಹಾಕಬೇಕು.

ಈ ಅನ್ನ ಸ್ವಯಂ ಯಜ್ಞವಲ್ಲದಿದ್ದರೂ ಯಜ್ಞ ಸಿದ್ಧವಾದರೆ ಯಜ್ಞಾಂಗ ವಾಗುತ್ತದೆ. ಅದರಿಂದಲೇ 'ಉದರಭರಣವಲ್ಲವಯ್ಯ, ಯಜ್ಞ ಕರ್ಮ ವಿದನರಿ' * ಎನ್ನುವುದು. ತೋಟದಿಂದ ಹೂ ಕೊಯ್ದು ತಂದು ದೇವರಿಗೆ ಏರಿಸಿದರೆ ಅದು ಪೂಜೆ. ಹೂವನ್ನು ನಿರ್ಮಿಸಲು ತೋಟದಲ್ಲಿ ದುಡಿದರೆ, ಅದೂ ಪೂಜೆಯೆ. ಯಜ್ಞಾರ್ಥವಾಗಿ ಮಾಡುವ ಎಲ್ಲ ಕ್ರಿಯೆಯೂ ಪೂಜೆಯೆ. ದೇಹಕ್ಕೆ ಅನ್ನ ನೀಡಿದರೇನೇ ಅದರಿಂದ ಉಪಯೋಗ. ಯಜ್ಞಸಾಧಕವಾದ ಕರ್ಮವೂ ಯಜ್ಞವೇ. ಇದನ್ನು 'ತದರ್ಥೀಯ ಕರ್ಮ,' ಯಜ್ಞಾರ್ಥ ಕರ್ಮ ಎಂದು ಗೀತೆ ಹೇಳುತ್ತದೆ. ಈ ಶರೀರ ಸದಾ ಸೇವೆಗಾಗಿ ಸಿದ್ಧವಿರಲಿ ಎಂದು ನಾವದಕ್ಕೆ ಕೊಡುವ ಆಹುತಿ ಯಜ್ಞರೂಪ ಆಹುತಿ ಸೇವೆಗೆಂದು ಮಾಡಿದ ಊಟ ಪವಿತ್ರ.

ಇವೆಲ್ಲ ವಿಷಯಗಳಲ್ಲಿ ಮತ್ತೆ ಮೂಲದಿಂದಲೂ ಶ್ರದ್ಧೆ ಬೇಕು. ಸಕಲ ಸೇವೆಯಲ್ಲೂ ಪರಮೇಶ್ವರಾರ್ಪಣ ಭಾವವಿರಬೇಕು. ಅದೇ ಬಹಳ ಮುಖ್ಯ. ಈಶ್ವರಾರ್ಪಣ ಬುದ್ಧಿಯಿಲ್ಲದೆ ಸೇವಾಮಯತೆ ಸಾಧಿಸದು; ಅಸಂಭವ. ಪ್ರಧಾನವಸ್ತುವಾದ ಈಶ್ವರಾರ್ಪಣೆಯನ್ನೇ ಮರೆತರೆ ನಡೆಯದು.

## ೯೭. ಸಾಧನೆಯ ಸಾತ್ವಿಕೀಕರಣ

ನಮ್ಮ ಕ್ರಿಯೆಯನ್ನು ಹೇಗಾದರೆ ಈಶ್ವರನಿಗೆ ಅರ್ಪಿಸಬಹುದು? ಕ್ರಿಯೆ ಸಾತ್ವಿಕವಾದಾಗ. ನಮ್ಮ ಸರ್ವ ಕರ್ಮವೂ ಸಾತ್ವಿಕವಾದಂತೆ ಅದನ್ನು ಈಶ್ವರಾರ್ಪಣೆ ಮಾಡಲು ಸಾಧ್ಯ. ಯಜ್ಞ, ದಾನ, ತಪ ಎಲ್ಲವೂ ಸಾತ್ವಿಕವಾಗಬೇಕು. ಕ್ರಿಯೆಯನ್ನು ಹೇಗೆ ಸಾತ್ವಿಕವಾಗಿಸಬೇಕೋ ಹದಿನಾಲ್ಕನೆ ಅಧ್ಯಾಯದಲ್ಲಿ ನೋಡಿದೇವೆ. ಈ ಅಧ್ಯಾಯದಲ್ಲಿ ಅದರ ವಿನಿಯೋಗವನ್ನು ಹೇಳಿದೆ.

ಈ ಸಾತ್ವಿಕತೆಯ ಯೋಜನೆ ಮಾಡುವುದರಲ್ಲಿ ಗೀತೆಗೆ ಇನ್ನೊಂದು ಉದ್ದೇಶ್ಯವಿದೆ. ಯಜ್ಞ–ದಾನ–ತಪಗಳ ಮೂಲಕ ನನ್ನಿಂದ ಹೊರಗಡೆ ನಡೆವ ವಿಶ್ವಸೇವೆಗೆ ಒಳಗೆ ಆಧ್ಯಾತ್ಮಿಕ ಸಾಧನೆ ಎಂಬ ಹೆಸರು ಕೊಡಬೇಕು. ಸೃಷ್ಟಿಯ ಸೇವೆ–ಸಾಧನೆಗಳಿಗೆ ಎರಡು ಬೇರೆ ಬೇರೆ ಕಾರ್ಯಕ್ರಮ ಬೇಡ.

* ಉದರಭರಣ ನೋಹೇ ಜಾಣಿಜೇ ಯಜ್ಞ ಕರ್ಮ.

ಸಾಧನೆ – ಸೇವೆ ಬೇರೆ ಬೇರೆ ಅಲ್ಲವೇ ಅಲ್ಲ. ಎರಡಕ್ಕೂ ಒಂದೇ ಪ್ರಯತ್ನ, ಒಂದೇ ಕರ್ಮ. ಹೀಗೆ ಮಾಡಿದ ಕರ್ಮವನ್ನು ಕೊನೆಗೆ ಈಶ್ವರಾರ್ಪಣ ಮಾಡಿದರಾಯಿತು. ಸೇವೆ, ಸಾಧನೆ, ಈಶ್ವರಾರ್ಪಣ : ಈ ಯೋಗ ಒಂದೇ ಕ್ರಿಯೆಯಿಂದ ಆಗಬೇಕು.

ಯಜ್ಞ ಸಾತ್ವಿಕವಾಗಲು ಎರಡು ಅಂಶಗಳು ಅಗತ್ಯ. ನಿಷ್ಫಲತೆಯ ಅಭಾವ, ಸಕಾಮತೆಯ ಅಭಾವ, ಎರಡೂ ಯಜ್ಞದಲ್ಲಿ ಇರಬೇಕು. ಯಜ್ಞದಲ್ಲಿ ಸಕಾಮತೆ ತಲೆದೋರಿದರೆ ಅದು ರಾಜಸಯಜ್ಞ. ನಿಷ್ಫಲತೆ ಯಿದ್ದರೆ ಅದು ತಾಮಸಯಜ್ಞ.

ನೂಲುವುದೂ ಒಂದು ಯಜ್ಞ. ನೂಲು ಎಳೆಯುತ್ತ ಅದರಲ್ಲಿ ಆತ್ಮವನ್ನು ತುಂಬದಿದ್ದರೆ, ಚಿತ್ತದ ಏಕಾಗ್ರತೆ ಇರದಿದ್ದರೆ, ಅಂಥ ಸೂತ್ರ ಯಜ್ಞ ಕೇವಲ ಜಡವಾಗುತ್ತದೆ. ಹೊರಗೆ ಎಷ್ಟೇ ಕೆಲಸ ನಡೆದಿದ್ದರೂ ಒಳಗೆ ಮನಸ್ಸಿನಲ್ಲಿ ಮೇಳವಿಲ್ಲದಿದ್ದರೆ ಆ ಕ್ರಿಯೆಯೆಲ್ಲವೂ ವಿಧಿಹೀನ ವಾಗುತ್ತದೆ. ವಿಧಿಹೀನಕರ್ಮ ಜಡ. ಅದರಲ್ಲಿ ತಮೋಗುಣ ಇರುತ್ತದೆ. ಉತ್ಕೃಷ್ಟತೆಯನ್ನು ನಿರ್ಮಿಸಲು ಆ ಕ್ರಿಯೆ ಅಸಮರ್ಥ. ಅದರಿಂದ ಫಲ ನಿಷ್ಪತ್ತಿಯಾಗದು. ಯಜ್ಞದಲ್ಲಿ ಸಕಾಮತೆಯಿಲ್ಲದಿದ್ದರೂ ಅದರಿಂದ ಉತ್ಕೃಷ್ಟ ಫಲ ಪಡೆಯಬೇಕು. ಕರ್ಮದಲ್ಲಿ ಮನಸ್ಸಿಲ್ಲದಿದ್ದರೆ, ಆತ್ಮವಿಲ್ಲ ದಿದ್ದರೆ, ಅದು ಭಾರವಾಗುತ್ತದೆ. ಅದರಿಂದ ಉತ್ಕೃಷ್ಟ ಫಲ ಹೇಗೆ ದೊರೆತೀತು ? ಹೊರಗಿನ ಕೆಲಸ ಕೆಟ್ಟರೆ ಒಳಗೆ ಮನಸ್ಸಿನ ಮೇಳವಿರದು ; ನಿಶ್ಚಯ. ಕರ್ಮದಲ್ಲಿ ಆತ್ಮವನ್ನು ತುಂಬು. ಒಳಗಡೆ ಮೇಳವಿರಲಿ. ಸೃಷ್ಟಿಸಂಸ್ಥೆಯ ಸಾಲ ತೀರಿಸಲು ನಾವು ಉತ್ಕೃಷ್ಟ ಫಲೋತ್ಪತ್ತಿ ಮಾಡಬೇಕು. ಕರ್ಮದಲ್ಲಿ ಫಲಹೀನತೆ ಬಾರದಿರಲಿ ಎಂದೇ ಈ ಒಳಗಿನ ಮೇಳದ ವಿಧಿಯುಕ್ತತೆ ಇರಬೇಕಾದುದು.

ಹೀಗೆ ನಿಷ್ಕಾಮತೆಯನ್ನು ಮೈಗೂಡಿಸಿಕೊಂಡು, ವಿಧಿಪೂರ್ವಕ ಯಶಸ್ವಿ ಕರ್ಮವನ್ನು ಮಾಡಿದಾಗ ಚಿತ್ತಶುದ್ಧಿ ಮೊದಲಾದೀತು. ಚಿತ್ತಶುದ್ಧಿಗೆ ಒರೆಗಲ್ಲಾವುದು ? ಹೊರಗಿನ ಕೆಲಸವನ್ನು ಪರೀಕ್ಷಿಸಿ ನೋಡು. ಅದು ನಿರ್ಮಲವೂ ಸುಂದರವೂ ಅಲ್ಲದಿದ್ದರೆ ಚಿತ್ತವು ಮಲಿನವೆಂದು ತಿಳಿಯಲು ಅಡ್ಡಿಯಿಲ್ಲ. ಕರ್ಮದಲ್ಲಿ ಸೌಂದರ್ಯ ಹೇಗೆ ನಿರ್ಮಾಣ

ವಾಗುತ್ತದೆ? ಚಿತ್ತಶುದ್ಧಿಪೂರ್ವಕವಾಗಿಯೂ, ಪರಿಶ್ರಮಪೂರ್ವಕವಾಗಿಯೂ ಮಾಡಿದ ಕರ್ಮದ ಮೇಲೆ ಪರಮೇಶ್ವರ ತನ್ನ ಪ್ರಸನ್ನತೆಯ ಮುದ್ರೆಯೊತ್ತುತ್ತಾನೆ. ಕರ್ಮದ ಬೆನ್ನಿನ ಮೇಲೆ ಪ್ರಸನ್ನ ಪರಮೇಶ್ವರ ಪ್ರೀತಿಯಿಂದ ಕೈಯಾಡಿಸಿದರೆ ಅಲ್ಲಿ ಸೊಬಗು ಹುಟ್ಟುತ್ತದೆ. ಸೊಬಗು, ಸೊಂಪು ಎಂದರೇನು? ಪವಿತ್ರ ಶ್ರಮದಿಂದ ದೊರೆತ ಪರಮೇಶ್ವರಪ್ರಸಾದ. ಮೂರ್ತಿಯನ್ನು ನಿರ್ಮಿಸುತ್ತ ಅದರಲ್ಲಿ ತನ್ಮಯನಾದ ವಿಗ್ರಹ ಶಿಲ್ಪಿಗೆ ಆ ಸುಂದರ ವಿಗ್ರಹ ತನ್ನ ಕೈಯಿಂದ ನಿರ್ಮಿತವಾಗಿಲ್ಲ ಎಂಬ ಭಾವನೆ ಬರುತ್ತದೆ. ವಿಗ್ರಹ ರೂಪುಗೊಳ್ಳುತ್ತಿದ್ದಾಗ ಕಡೆಯ ಗಳಿಗೆಯಲ್ಲಿ ಎಲ್ಲಿಂದಲೋ ಸೌಂದರ್ಯ ತಾನೇ ತಾನಾಗಿ ಬಂದು ತುಂಬಿಕೊಳ್ಳುತ್ತದೆ. ಚಿತ್ತಶುದ್ಧಿಯಿಲ್ಲದೆ ಈಶ್ವರೀ ಕಲೆ ಪ್ರಕಟವಾದೀತೆ? ವಿಗ್ರಹದಲ್ಲಿರುವ ಸರ್ವ ಸ್ವಾರಸ್ಯವೂ ಇದು. ತನ್ನೊಳಗಿನ ಅಂತಃಕರಣದ ಸೊಬಗೆಲ್ಲವೂ ಅಲ್ಲಿ ಬಂದು ತುಂಬಿಕೊಳ್ಳುತ್ತದೆ. ಮೂರ್ತಿ ಎಂದರೆ ತನ್ನ ಚಿತ್ತದ ಪ್ರತಿಮೆ. ನಮ್ಮ ಸರ್ವ ಕರ್ಮವೂ ನಮ್ಮ ಮನಸ್ಸಿನ ಮೂರ್ತಿ. ಮನಸ್ಸು ಸುಂದರವಾಗಿದ್ದರೆ ಈ ಕರ್ಮಮಯ ಮೂರ್ತಿಯೂ ಸುಂದರ. ಹೊರಗಣ ಕರ್ಮದ ಶುದ್ಧಿ ಮನಸ್ಸಿನ ಶುದ್ಧಿಯಿಂದ, ಮನಸ್ಸಿನ ಶುದ್ಧಿ ಹೊರಗಣ ಕರ್ಮದಿಂದ ತಿಳಿದುಬರುತ್ತದೆ.

ಇನ್ನೊಂದು ಮಾತು ಉಳಿಯಿತು. ಈ ಎಲ್ಲ ಕರ್ಮಕ್ಕೂ ಮಂತ್ರ ಬೇಕು. ಮಂತ್ರಹೀನ ಕರ್ಮ ವ್ಯರ್ಥ. ನೂಲುವಾಗ ಈ ದಾರದಿಂದ ನಾವು ಬಡವರೊಂದಿಗೆ ಸೇರಿಕೊಳ್ಳುತ್ತಿದೇನೆ ಎಂಬ ಮಂತ್ರ ಒಳಗಿರಬೇಕು. ಈ ಮಂತ್ರ ಎದೆಯೊಳಗಿರದಿದ್ದರೆ ತಾಸು ತಾಸು ಕೆಲಸ ಮಾಡಿದರೂ ಅದು ವ್ಯರ್ಥ. ಈ ಕ್ರಿಯೆ ಚಿತ್ತಶುದ್ಧಿ ಮಾಡಲಾರದು. ಈ ಹತ್ತಿಯ ಹಂಜಿಯಿಂದ ಅವ್ಯಕ್ತ ಪರಮಾತ್ಮ ಸೂತ್ರರೂಪದಲ್ಲಿ ಪ್ರಕಟವಾಗುತ್ತಿದಾನೆ ಎಂಬ ಮಂತ್ರವನ್ನು ಆ ಕ್ರಿಯೆಯೊಳಗೆ ತುಂಬಿ, ಆಮೇಲೆ ಅದನ್ನು ನೋಡು. ಆ ಕ್ರಿಯೆ ಅತ್ಯಂತ ಸಾತ್ವಿಕವೂ ಸುಂದರವೂ ಆದೀತು. ಅದು ಆರಾಧನೆಯಾದೀತು. ಯಜ್ಞರೂಪ ಸೇವೆಯಾದೀತು. ಆ ಸಣ್ಣ ದಾರದೆಳೆಯಿಂದ ಸಮಾಜವನ್ನು, ಜನತೆಯನ್ನು ಕಟ್ಟಿಹಾಕಬಹುದು. ಬಾಲಕೃಷ್ಣನ ಚಿಕ್ಕ ಬಾಯೊಳಗೆ ಯಶೋದಾ ತಾಯಿಗೆ ಇಡೀ ವಿಶ್ವವೇ

ಕಾಣಿಸಿತು. ಮಂತ್ರಮಯವಾದ ದಾರದೆಳೆಯಲ್ಲಿಯೆ ನಿನಗೆ ವಿಶಾಲ ವಿಶ್ವ ಕಂಡೀತು.

## ೯೭. ಆಹಾರ ಶುದ್ಧಿ

ನಮ್ಮಿಂದ ಇಂಥ ಸೇವೆ ಆಗಬೇಕೆಂದರೆ ಆಹಾರಶುದ್ಧಿ ಅಗತ್ಯ. ಎಂಥ ಅನ್ನವೋ ಅಂಥ ಮನಸ್ಸು. ಆಹಾರ ಪರಿಮಿತವಾಗಿರಬೇಕು. ಆಹಾರ ಯಾವುದು ಎಂಬುದಕ್ಕಿಂತ ಎಷ್ಟು ಎಂಬುದು ಹೆಚ್ಚು ಮಹತ್ವದ್ದು. ಆಹಾರದ ವಿವರ ಮುಖ್ಯವಲ್ಲವೆಂದಲ್ಲ. ಆದರೆ ಯುಕ್ತಪ್ರಮಾಣದಲ್ಲಿ ತೆಗೆದುಕೊಳ್ಳುತ್ತೇವೋ ಇಲ್ಲವೋ ಎಂಬುದು ಹೆಚ್ಚು ಮಹತ್ವದ್ದು. ನಾವು ತಿಂದುದರ ಪರಿಣಾಮ ಆಗಲೇಬೇಕಷ್ಟೆ. ನಾವೇಕೆ ತಿನ್ನುತ್ತೇವೆ? ನಾವು ಮಾಡುವ ಸೇವೆ ಉತ್ಕೃಷ್ಟವಾಗಲಿ ಎಂದು ಆಹಾರ ಯಜ್ಞಾಂಗ. ಸೇವಾರೂಪ ಯಜ್ಞ ಫಲರೂಪವಾಗಲಿ ಎಂದು ಆಹಾರ. ಈ ಭಾವನೆಯಿಂದ ನೋಡು. ಅದು ಸ್ವಚ್ಛವೂ ಶುದ್ಧವೂ ಆಗಿರಬೇಕು. ವ್ಯಕ್ತಿ ಜೀವನದಲ್ಲಿ ಸಾಧಿಸಬಹುದಾದ ಆಹಾರ ಶುದ್ಧಿಗೆ ಮಿತಿಯೇ ಇಲ್ಲ. ಆಹಾರ ಶುದ್ಧಿಗಾಗಿ ನಮ್ಮ ಸಮಾಜ ತಪಸ್ಸು ಮಾಡಿದೆ. ಅದಕ್ಕಾಗಿ ಹಿಂದೂಸ್ಥಾನದಲ್ಲಿ ವಿಶಾಲ ಪ್ರಯತ್ನ ನಡೆಯಿತು. ಆ ಪ್ರಯೋಗದಲ್ಲಿ ಸಾವಿರಾರು ವರ್ಷ ಕಳೆದಿದೆ. ಆ ಪ್ರಯೋಗಕ್ಕಾಗಿ ಎಷ್ಟು ತಪಶ್ಶಕ್ತಿ ವೆಚ್ಚವಾಯಿತೋ ಹೇಳಲು ಅಳವಲ್ಲ. ಇಡೀ ಜಾತಿ ಜಾತಿಯೇ ಮಾಂಸವನ್ನು ಬಿಟ್ಟಂಥ ದೇಶ ಸರ್ವ ಜಗತ್ತಿನಲ್ಲಿ ಹಿಂದುಸ್ಥಾನವೊಂದೇ ಇಲ್ಲಿ ಮಾಂಸ ತಿನ್ನುವ ಜಾತಿಗಳಲ್ಲೂ ಕೂಡ ಮಾಂಸ ನಿತ್ಯಾನ್ನವಲ್ಲ, ಮುಖ್ಯಾಹಾರವಲ್ಲ. ತಿನ್ನುವವರಿಗೂ ಅದು ಹೀನ ಎನಿಸುತ್ತದೆ. ಮನಸ್ಸಿನಲ್ಲಿ ಅವರೂ ಮಾಂಸ ವರ್ಜನ ಮಾಡಿದಾರೆ. ಮಾಂಸಾಹಾರವನ್ನು ಕೆಳಗೆ ಹಾಕಲಿಕ್ಕಂದೇ ಯಜ್ಞ ರೂಢವಾಯಿತು. ಅದಕ್ಕಾಗಿಯೆ ಯಜ್ಞ ನಿಷಿದ್ಧವಾಯಿತು. ಶ್ರೀ ಕೃಷ್ಣ ಭಗವಂತ ಯಜ್ಞದ ಅರ್ಥವನ್ನೇ ಬದಲಿಸಿದ. ಕೃಷ್ಣ ಹಾಲಿನ ಮಹಿಮೆಯನ್ನು ಹೆಚ್ಚಿಸಿದ. ಕೃಷ್ಣ ಎಷ್ಟೋ ಅಸಾಧಾರಣ ಸಂಗತಿಗಳನ್ನು ಮಾಡಿದ. ಆದರೆ ಭಾರತೀಯ ಜನಕ್ಕೆ ಯಾವ ಕೃಷ್ಣನನ್ನು ಕಂಡರೆ ಇಷ್ಟ? ಗೋಪಾಲಕೃಷ್ಣ, ಗೋಪಾಲಕೃಷ್ಣ! ಈ ಹೆಸರೇ ಭಾರತದ

ಜನಕ್ಕೆ ಪ್ರಿಯ. ಆ ಕೃಷ್ಣ, ಅವನ ಬಳಿ ಮಲಗಿರುವ ಹಸು, ಅವನ ತುಟಿಯ ಮೇಲಿನ ಕೊಳಲು, ಹೀಗೆ ಗೋಸೇವೆ ಮಾಡುವ ಗೋಪಾಲ ಕೃಷ್ಣನೇ ಆಬಾಲವೃದ್ಧರಿಗೆ ಪರಿಚಿತ. ಗೋರಕ್ಷಣೆಯ ಮಹತ್ತರ ಉಪಯೋಗ ಮಾಂಸಾಹಾರ ತ್ಯಾಗದಲ್ಲಿ ಆಯಿತು. ಹಸುವಿನ ಹಾಲಿನ ಮಹಿಮೆ ಹೆಚ್ಚಿತು, ಮಾಂಸಾಹಾರ ಕಡಿಮೆಯಾಯಿತು.

ಇಲ್ಲಿಗೇ ಆಹಾರ ಶುದ್ಧಿ ಸಂಪೂರ್ಣವಾದಂತಲ್ಲ. ನಾವು ಅದನ್ನು ಮುಂದೊಯ್ಯಬೇಕು. ಬಂಗಾಲಿ ಜನರು ಮೀನು ತಿನ್ನುತ್ತಾರೆಂದರೆ ಎಷ್ಟೋ ಜನಕ್ಕೆ ಅಚ್ಚರಿಯಾಗುತ್ತದೆ. ಆದರೆ ಅವರನ್ನು ದೂಷಿಸಬಾರದು. ಅದು ಯೋಗ್ಯವಲ್ಲ. ಬಂಗಾಲದಲ್ಲಿ ಬರೀ ಅನ್ನ. ಅದರಿಂದ ಶರೀರ ಪೋಷಣೆ ಸಂಪೂರ್ಣವಾಗದು. ಅದಕ್ಕಾಗಿ ಬೇರೆ ಪ್ರಯೋಗ ಮಾಡಬೇಕು. ಮೀನು ತಿನ್ನದೆ ಯಾವ ವನಸ್ಪತಿಯನ್ನು ತಿಂದರೆ ಅಷ್ಟು ಪುಷ್ಟಿ ಬಂದೀತೋ ವಿಚಾರ ಮಾಡಬೇಕು. ಅಸಾಧಾರಣ ತ್ಯಾಗದ ವ್ಯಕ್ತಿ ಹುಟ್ಟಿಯಾನು. ಪ್ರಯೋಗ ನಡೆದೀತು. ಅಂಥ ವ್ಯಕ್ತಿಯೇ ಸಮಾಜವನ್ನು ಮುಂದೊಯ್ಯಬೇಕಾದರೆ! ಸೂರ್ಯ ಬೆಳಗುತ್ತಿರುತ್ತಾನೆ. ಅದರಿಂದ ನಮಗೆ ಜೀವಿಸಿರಲು ಬೇಕಾದ ೯೮ ಅಂಶ ಉಷ್ಣ ವ್ಯೈಯೊಳಗೆ ಇರುತ್ತದೆ. ಸಮಾಜದಲ್ಲಿ ಬೆಳಬೆಳಗುವ ಜ್ವಲಂತ ವೈರಾಗ್ಯಸೂರ್ಯ ನಿರ್ಮಾಣವಾದಾಗ, ಶ್ರದ್ಧೆಯಿಂದ ಪರಿಸ್ಥಿತಿಯನ್ನು ಕಿತ್ತೊಗೆದು ರೆಕ್ಕೆ ಇಲ್ಲದೆ ಧ್ಯೇಯದ ಮುಗಿಲಲ್ಲಿ ವಿಹರಿಸತೊಡಗಿದಾಗ, ನಮಗೆ ಅಲ್ಪ ಸ್ವಲ್ಪ ಸಂಸಾರೋಪಯೋಗಿ ವೈರಾಗ್ಯ ಬರುತ್ತದೆ. ಮಾಂಸಾಹಾರ ನಿಲ್ಲಿಸಲು ಋಷಿಗಳು ಎಷ್ಟು ತಪಸ್ಸು ಮಾಡಬೇಕಾಯಿತೋ, ಅದೆಲ್ಲವೂ ಇಂಥ ವೇಳೆಯಲ್ಲಿ ನನ್ನ ಮನಸ್ಸಿನಲ್ಲಿ ಮೂಡಿಬರುತ್ತದೆ.

ಇಂದು ನಮ್ಮ ಸಾಮುದಾಯಿಕ ಆಹಾರ ಶುದ್ಧಿ ಇಷ್ಟಾಗಿದೆ. ಅನಂತ ತ್ಯಾಗ ಗೆಯ್ದು ಹಿರಿಯರು ಗಳಿಸಿದ ಈ ಗಳಿಕೆಯನ್ನು ಕಳೆಯದಿರಿ. ಭಾರತೀಯ ಸಂಸ್ಕೃತಿಯ ಈ ಅಂಶವನ್ನು ಮುಳುಗಿಸದಿರಿ. ಹೇಗೋ ಹಾಗೆ ಬದುಕಬೇಕಾಗಿಲ್ಲ ನಾವು. ಹೇಗಾದರೂ ಬದುಕಬೇಕೆನ್ನುವವನ ಕೆಲಸ ಬಹಳ ಸುಲಭ. ಮೃಗವೂ ಹೇಗೋ ಬದುಕುತ್ತಲಿದೆ. ಮೃಗದ ಹಾಗೆ ಏನು ನಾವೂ? ಮೃಗಕ್ಕೂ ನಮಗೂ ಏನಾದರೂ ಅಂತರವಿದ್ದರೆ ಅದನ್ನು

ಬೆಳೆಸುವುದೇ ಸಂಸ್ಕೃತಿ ವರ್ಧನ. ನಮ್ಮ ರಾಷ್ಟ್ರದಲ್ಲಿ ಮಾಂಸಾಹಾರ ತ್ಯಾಗದ ಮಹಾ ಪ್ರಯೋಗ ನಡೆಯಿತು. ಅಲ್ಲಿಂದ ಮುಂದೆ ಬನ್ನಿ. ಕನಿಷ್ಠಪಕ್ಷ, ಈಗ ಇರುವ ಸ್ಥಿತಿಯಲ್ಲಾದರೂ ಇರಿ. ಕೆಳಗೆ ಜಾರದಿರಿ.

ಈ ಎಚ್ಚರಿಕೆ ಕೊಡಲು ಕಾರಣವಿದೆ. ಇತ್ತೀಚೆಗೆ ಅನೇಕರಿಗೆ ಮಾಂಸ ಇಷ್ಟವಾಗಿದೆ. ಈಗ ಪೌರ್ವಾತ್ಯ ಪಾಶ್ಚಾತ್ಯ ಸಂಸ್ಕೃತಿಗಳು ಪರಸ್ಪರವಾಗಿ ತಮ್ಮ ಪ್ರಭಾವ ಬೀರುತ್ತಿವೆ. ಇದರಲ್ಲಿ ಕಡೆಗೆ ಒಳಿತೇ ಆದೀತು. ನನ್ನ ಶ್ರದ್ಧೆ ಅದು. ಪಾಶ್ಚಾತ್ಯ ಸಂಸ್ಕೃತಿಯ ದೆಸೆಯಿಂದ ನಮ್ಮ ಜಡ ಶ್ರದ್ಧೆ ಕುಸಿದು ಬೀಳುತ್ತಿದೆ. ಅಂಧ – ಶ್ರದ್ಧೆ ಅಳಿದರೆ ಏನೂ ನಷ್ಟವಿಲ್ಲ. ಒಳ್ಳೆಯದು ಉಳಿದೇ ಉಳಿದೀತು. ಕೆಟ್ಟದ್ದು ಸುಟ್ಟು ಹೋದೀತು. ಅಂಧ – ಶ್ರದ್ಧೆ ಉರಿದುಹೋಗಿ ಅದರ ಸ್ಥಳದಲ್ಲಿ ಅಂಧ ಅಶ್ರದ್ಧೆ ಬಂದರೆ ಪ್ರಯೋಜನವಿಲ್ಲ. ಶ್ರದ್ಧೆ ಮಾತ್ರವೇ ಕುರುಡು ಅಲ್ಲ. ಕುರುಡುತನದ ಗುತ್ತಿಗೆಯನ್ನೇನು ಹಿಡಿದಿಲ್ಲ ಶ್ರದ್ಧೆ. ಅಶ್ರದ್ಧೆಯೂ ಕುರುಡಾಗಿರಬಲ್ಲದು.

ಮಾಂಸಾಹಾರದ ಬಗ್ಗೆ ಮತ್ತೆ ವಿಚಾರ ಮೊದಲಾಗಿದೆ ಈಗ. ಅದೇನೆ ಇರಲಿ, ಹೊಸ ವಿಚಾರ ಮೂಡಿದೆ ಎಂದರೆ ನನಗೆ ಆನಂದ. ಅದರಿಂದ ಲೋಕ ಎಚ್ಚರವಾಗಿದೆ, ಅತ್ತಿತ್ತ ನುಗ್ಗುತ್ತಿದೆ ಎಂದು ತಿಳಿಯೋಣ. ಜಾಗೃತಿಯ ಲಕ್ಷಣ ಕಂಡು ಒಳಿತೆನಿಸುತ್ತದೆ. ಆದರೆ ಜಾಗೃತರಾಗಿಯೂ ಕಣ್ಣು ಮುಚ್ಚಿ ನಡೆದರೆ ಬೀಳುವ ಸಂಭವವಿದೆ. ಆದುದರಿಂದ ಪೂರ್ಣ ಜಾಗೃತಿಯಾಗುವವರೆಗೆ, ಕಣ್ಣೊಳಗೆ ಎಚ್ಚರ ತುಂಬುವವರೆಗೆ ಕೈಕಾಲಿಗೆ ಮಿತಿ ಮೇರೆ ಹಾಕಿಕೊಂಡರೆ ಒಳಿತು ಬೇಕಾದಷ್ಟು ಅಡ್ಡ ತಿಡ್ಡ ವಿಚಾರ ಮಾಡಿ. ನಾಲ್ಕೂ ನಿಟ್ಟಿನಿಂದ ವಿಚಾರ ಮಾಡಿ. ವಿಚಾರದ ಕತ್ತರಿಯಿಂದ ಧರ್ಮವನ್ನು ಕತ್ತರಿಸಿ. ವಿಚಾರದ ಕತ್ತರಿಗೆ ತುಂಡಾಗುವ ಧರ್ಮ ಕೆಲಸಕ್ಕೆ ಬಾರದುದು, ತಿಳಿ. ಕತ್ತರಿಸಿ ಬಿದ್ದ ತುಂಡು ಹೋಗಲಿ. ತುಂಡಾಗದೆ ಉಳಿದ ಭಾಗ, ನಿನ್ನ ಕತ್ತರಿಯೇ ತುಂಡಾಗುವ ಗಟ್ಟಿಭಾಗ ಇದೆಯಲ್ಲ, ಅದೇ ನಿಜವಾದ ಧರ್ಮ. ಧರ್ಮಕ್ಕೆ ವಿಚಾರದ ಭೀತಿಯಿಲ್ಲ. ವಿಚಾರ ಮಾಡಿ. ಆದರೆ ಒಮ್ಮೆಗೇ ಕೃತಿ ಮಾಡದಿರಿ. ಅರೆಜಾಗೃತಿಯಲ್ಲಿ ತಡವಿದರೆ ಎಡವಿ ಬೀಳುವುದೇ! ವಿಚಾರ ವೇಗವಾಗಿ ನಡೆದರೂ ಅವಸರದ

ಆಚರಣೆ ಬೇಡ. ಕೃತಿಯಲ್ಲಿ ಸಂಯಮವಿರಲಿ. ಪೂರ್ವ ಪುಣ್ಯವನ್ನು ಕಳೆಯದಿರಿ.

## ೯೮. ಗೀತೆಯ ಅವಿರೋಧಿ – ಜೀವನ ಯೋಜನೆ

ಆಹಾರದ ಶುದ್ಧಿಯಿಂದ ಚಿತ್ತ ಶುದ್ಧಿಯಾದೀತು. ಶರೀರಕ್ಕೆ ಬಲ ಬಂದೀತು. ಸಮಾಜ ಸೇವೆಯನ್ನು ಸರಿಯಾಗಿ ಮಾಡಲು ಆದೀತು. ಚಿತ್ತದೊಳಗೆ ಹಿಗ್ಗಿದ್ದೀತು. ಸಮಾಜದಲ್ಲಿ ಸಂತೋಷ ಹರಡೀತು. ಯಜ್ಞ – ದಾನ– ತಪ ಕ್ರಿಯೆಗಳು ವಿಧ್ಯುಕ್ತವಾಗಿ ಮಂತ್ರಸಹಿತವಾಗಿ ನಡೆವ ಸಮಾಜದಲ್ಲಿ ವಿರೋಧ ಹುಟ್ಟುವುದಿಲ್ಲ. ಕನ್ನಡಿಗಳನ್ನು ಒಂದಕ್ಕೊಂದು ಇದಿರಾಗಿ ಇಟ್ಟರೆ ಇದರಲ್ಲಿ ಅದರೊಳಗಿನದು, ಅದರಲ್ಲಿ ಇದರೊಳಗಿನದು ಕಾಣುವಂತೆ, ವ್ಯಕ್ತಿ ಸಮಾಜಗಳಲ್ಲಿ ಬಿಂಬ – ಪ್ರತಿಬಿಂಬ ನ್ಯಾಯದಿಂದ ಸಂತೋಷ ಪ್ರಕಟವಾಗುತ್ತದೆ. ನನ್ನ ಸಂತೋಷ ಸಮಾಜದ್ದು, ಸಮಾಜದ ಸಂತೋಷ ನನ್ನದು. ಉಭಯ ಸಂತೋಷ ಗಳನ್ನೂ ತೂಗಿ ನೋಡಿದರೆ ಎರಡೂ ಒಂದೇ ರೂಪ ಎಂಬುದು ಕಾಡಿತು. ಎಲ್ಲೆಡೆಯೂ ಅದ್ವೈತದ ಅನುಭವವಾದೀತು. ದ್ವೈತ, ದ್ರೋಹಗಳು ಮುಳುಗಿಹೋದಾವು. ಯಾವ ಯೋಜನೆಯಲ್ಲಿ ಇಂಥ ಸುವ್ಯವಸ್ಥೆ ಇರಬಲ್ಲದೋ ಅಂಥ ಯೋಜನೆಯನ್ನು ಗೀತೆ ಹೇಳುತ್ತದೆ. ನಿಮ್ಮ ದಿನದ ಕಾರ್ಯಕ್ರಮವನ್ನು ಗೀತೆಯ ಯೋಜನೆಯ ಪ್ರಕಾರ ಏರ್ಪಡಿಸಿಕೊಂಡರೆ ಎಷ್ಟು ಸರಳ, ಸುರಕ್ಷಿತ?

ಇಂದು ವ್ಯಕ್ತಿಜೀವನ ಸಮಾಜಜೀವನಗಳಲ್ಲಿ ಜಗಳ ತಲೆಹಾಕಿದೆ. ಈ ಜಗಳವನ್ನು ಹೇಗೆ ದೂರಮಾಡಬೇಕೆಂದು ಎಲ್ಲೆಲ್ಲೂ ಚರ್ಚೆ. ವ್ಯಕ್ತಿ – ಸಮಾಜ ಇಲ್ಲಿ ಯಾವುದು ಎಲ್ಲೆ? ವ್ಯಕ್ತಿ ಗೌಣವೆ, ಸಮಾಜದ ಗೌಣವೆ? ಯಾರು ಶ್ರೇಷ್ಠ? ಕೆಲವರು ವ್ಯಕ್ತಿವಾದವನ್ನು ಪುರಸ್ಕರಿಸಿ ಸಮಾಜ ಜಡವೆನ್ನುತ್ತಾರೆ. ತನ್ನ ಬಳಿಗೆ ದಂಡಾಳು ಒಬ್ಬ ಬಂದರೆ ದಳವಾಯಿ ಗೌರವವಾಗಿ ಮಾತಾಡಿಸಿಯಾನು, ಸೌಮ್ಯಭಾಷೆ ಬಳಸಿಯಾನು. ಆದರೆ ದಂಡಿಗೆ ಮಾತ್ರ ಮನಸ್ಸಿಗೆ ಬಂದಂತೆ ಅಪ್ಪಣೆ ಕೊಟ್ಟಾನು. ದಂಡು ಅಚೇತನ, ಮರದ ದಿಮ್ಮಿ, ಅದನ್ನು ಇತ್ತಿಂದತ್ತ, ಅತ್ತಿಂದಿತ್ತ

ಸರಿದಾಡಿಸುತ್ತಾನೆ. ವ್ಯಕ್ತಿ ಚೈತನ್ಯಮಯ; ಸಮಾಜ ಜಡ. ಇದರ ಅನುಭವ ಇಲ್ಲೇ ಬರುತ್ತದೆ, ನೋಡಿ ನನ್ನೆದುರಿಗೆ ೨೦೦–೩೦೦ ಜನ ಇದೀರಿ. ನಿಮಗೆ ರುಚಿಸಲಿ ರುಚಿಸದಿರಲಿ, ನಾನೇನೋ ಹೇಳುತ್ತಿದೇನೆ. ನನಗೆ ಹೊಳೆದುದನ್ನು ಹೇಳುತ್ತೇನೆ. ನೀವು ಜಡವಿದ್ದಂತೆ. ಅದೇ ಒಬ್ಬನೇ ವ್ಯಕ್ತಿ ಇದಿರಿಗೆ ಬಂದರೆ ಅವನು ಹೇಳುವುದನ್ನು ಕೇಳಬೇಕಾದೀತು. ವಿಚಾರಮಾಡಿ ಉತ್ತರ ಕೊಡಬೇಕಾದೀತು. ಆದರೆ ಇಲ್ಲಿ ನಿಮ್ಮನ್ನು ಗಂಟೆಗಟ್ಟಲೆ ಕೂಡಿಸುತ್ತಿದೇನೆ.

ಸಮಾಜ ಜಡ, ವ್ಯಕ್ತಿ ಚೈತನ್ಯಮಯ ಎಂದು ವ್ಯಕ್ತಿಚೈತನ್ಯವಾದವನ್ನು ಒಬ್ಬರು ಪ್ರತಿಪಾದಿಸಿದರೆ, ಒಬ್ಬ ಸಮುದಾಯಕ್ಕೆ ಮಹತ್ವ ಕೊಡುತ್ತಾನೆ. ನನ್ನ ಕೂದಲು ಉದುರಿತು, ಕೈ ಮುರಿಯಿತು, ಕಣ್ಣು ಹೋದವು, ಹಲ್ಲು ಬಿದ್ದವು; ಇಷ್ಟೆಲ್ಲ ಆದರೂ, ಒಂದು ಶ್ವಾಸಕೋಶವೇ ಹೋದರೂ ನಾನು ಬದುಕಿರುತ್ತೇನೆ. ಒಂಟೊಂಟಿ ಅವಯವ ಜಡ. ಯಾವುದಾದರೊಂದು ಅವಯವ ನಷ್ಟವಾದರೆ ಸರ್ವ ನಾಶವಾಗದು. ಸಾಮುದಾಯಿಕ ಶರೀರ ನಡೆದೇ ಇರುತ್ತದೆ. ಹೀಗೆ ಎರಡು ಪರಸ್ಪರ ವಿರುದ್ಧ ವಿಚಾರಸರಣಿ ಇವೆ. ನೀನು ಯಾವ ದೃಷ್ಟಿಯಿಂದ ನೋಡಬೇಕೋ ಅದಕ್ಕೆ ತಕ್ಕಂತೆ ವಾದ. ಕನ್ನಡಕಕ್ಕೆ ಯಾವ ಬಣ್ಣವಿದ್ದರೆ ಸೃಷ್ಟಿಗೆ ಅದೇ ಬಣ್ಣ.

ಕೆಲವರು ವ್ಯಕ್ತಿಗೆ ಮಹತ್ವ ಕೊಡುತ್ತಾರೆ; ಕೆಲವರು ಸಮಾಜಕ್ಕೆ. ಸಮಾಜದಲ್ಲಿ 'ಜೀವನಕ್ಕಾಗಿ ಜಗಳ' ಎಂಬ ಕಲ್ಪನೆ ಬಂದಿರುವುದೇ ಇದಕ್ಕೆ ಕಾರಣ. ಆದರೆ ಜಗಳಕ್ಕಾಗಿ ಜೀವನವೆ? ಏಕೆ? ಅದಕ್ಕಿಂತ ಸಾಯಬಾರದೇಕೆ? ಜಗಳ ಸಾವಿಗಾಗಿಯೆ. ಸ್ವಾರ್ಥಪರಮಾರ್ಥಗಳಲ್ಲಿ ಭೇದವಿದೆ ಎಂದು ಮೊದಲು ಕಂಡುಹಿಡಿದ ಮನುಷ್ಯನಿಗೆ ಧನ್ಯವಾದ! ಇಲ್ಲದ ವಸ್ತುವನ್ನು ಇದ್ದಂತೆ ಭಾಸಗೊಳಿಸುವ ಬುದ್ಧಿಸಾಮರ್ಥ್ಯವುಳ್ಳವರಿಗೆ ಏನಾದರೂ ಮಾಡಿ ಬೆರಗುಗೊಳಿಸುವ ಬಯಕೆ ಹುಟ್ಟುತ್ತದೆ. ಇಲ್ಲವೇ ಇಲ್ಲದ ಭೇದವನ್ನು ಹುಟ್ಟಿಸಿ, ಜನರನ್ನು ನಂಬಿಸುವುದು ಆಶ್ಚರ್ಯಕರ! ಚೀನಿ ಭಿತ್ತಿಯ ಹಾಗಿದೆ ಇದು. ಕ್ಷಿತಿಜಕ್ಕೆ ಒಂದು ಎಲ್ಲೆ ನಿರ್ಮಿಸಿ, ಅದರಾಚೆಗೆ ಏನೂ ಇಲ್ಲ ಎಂದಂತಿದೆ ಈ ಮಾತು. ಇದಕ್ಕೆಲ್ಲ ಕಾರಣ

ಯಜ್ಞಮಯ ಜೀವನದ ಅಭಾವ. ಅದರಿಂದ ವ್ಯಕ್ತಿ – ಸಮಾಜಗಳ ನಡುವೆ ಈ ಭೇದ ತಲೆದೋರಿದೆ.

ವ್ಯಕ್ತಿ – ಸಮಾಜಗಳ ನಡುವೆ ನಿಜವಾಗಿ ಭೇದವಿಲ್ಲ. ಒಂದು ಕೊರಡಿಯಲ್ಲಿ ಎರಡು ಭಾಗ ಮಾಡಲಿಕ್ಕೆಂದು ಒಂದು ಪರದೆ ಹಾಕಿದಾರೆ. ಗಾಳಿ ಬೀಸಿದಾಗ ಆ ಪರದೆ ಹಿಂದಕ್ಕೊ ಮುಂದಕ್ಕೊ ಸರಿದು ಒಮ್ಮೆ ಆ ಭಾಗ ದೊಡ್ಡದಾಗಿ, ಒಮ್ಮೆ ಈ ಭಾಗ ದೊಡ್ಡದಾಗಿ ಕಾಣುತ್ತದೆ. ಗಾಳಿಯ ಲಹರಿಯಂತೆ ಈ ವಿಭಾಗ. ಆ ವಿಭಾಗ ಖಚಿತವಲ್ಲ. ಗೀತೆಗೆ ಈ ಜಗಳ ಗೊತ್ತಿಲ್ಲ. ಇದು ಕಾಲ್ಪನಿಕ ಜಗಳ. ಅಂತಃಶುದ್ಧಿಯ ನಿಯಮವನ್ನು ಪಾಲಿಸು ಎನ್ನುತ್ತದೆ ಗೀತೆ. ಆಗ ವ್ಯಕ್ತಿಹಿತ – ಸಮಾಜ ಹಿತಗಳಲ್ಲಿ ವಿರೋಧವೆ ಹುಟ್ಟದು. ಒಂದರಿಂದ ಒಂದರ ಹಿತಕ್ಕೆ ಬಾಧೆ ಬಾರದು. ಈ ಬಾಧೆಯನ್ನು ಈ ವಿರೋಧವನ್ನು ನಿವಾರಿಸುವುದೇ ಗೀತೆಯ ಕೌಶಲ. ಗೀತೆಯ ಈ ನಿಯಮವನ್ನು ಅನುಸರಿಸುವ ವ್ಯಕ್ತಿ ಒಬ್ಬನೇ ಒಬ್ಬ ಹುಟ್ಟಿಕೊಂಡರೂ ಸರಿಯೆ, ಅವನಿಂದ ಇಡೀ ರಾಷ್ಟ್ರವೆ ಸಂಪನ್ನವಾದೀತು. ರಾಷ್ಟ್ರವೆಂದರೆ ರಾಷ್ಟ್ರದೊಳಗಿನ ವ್ಯಕ್ತಿಗಳು. ಇಂಥ ಜ್ಞಾನಸಂಪನ್ನ ಆಚಾರಸಂಪನ್ನ ವ್ಯಕ್ತಿಗಳೇ ಇಲ್ಲದ ರಾಷ್ಟ್ರವನ್ನು ರಾಷ್ಟ್ರವೆಂಬುದು ಹೇಗೆ? ಹಿಂದುಸ್ಥಾನ ಎಂದರೇನು? ಹಿಂದುಸ್ಥಾನವೆಂದರೆ ರವೀಂದ್ರನಾಥ ಕವಿ, ಹಿಂದುಸ್ಥಾನವೆಂದರೆ ಗಾಂಧೀಜಿ. ಇಂಥ ಹೆಸರು ಇನ್ನೂ ಹತ್ತು. ಹೊರಗಣ ಲೋಕಕ್ಕೆ ಹಿಂದುಸ್ಥಾನದ ಕಲ್ಪನೆ ಈ ಹಲವು ವ್ಯಕ್ತಿಗಳಿಂದಲೇ ತಾನೆ! ಪ್ರಾಚೀನ ಕಾಲದಿಂದ ಒಬ್ಬಿಬ್ಬರು ವ್ಯಕ್ತಿಗಳು, ಮಧ್ಯಕಾಲದ ನಾಲ್ಕಾರು ವ್ಯಕ್ತಿಗಳು, ಇಂದಿನ ಎಂಟು ಹತ್ತು, ಇದಕ್ಕೆ ಹಿಮಾಲಯ, ಗಂಗೆಗಳನ್ನು ಸೇರಿಸಿದರೆ ಆಯಿತು ಹಿಂದುಸ್ಥಾನ – ಇದೇ ಹಿಂದುಸ್ಥಾನದ ಅರ್ಥ. ಉಳಿದುದೆಲ್ಲ ಅದರ ಭಾಷ್ಯ. ಭಾಷ್ಯವೆಂದರೆ ಸೂತ್ರದ ವಿಸ್ತಾರ. ಹಾಲಿನಿಂದ ಮೊಸರು, ಮೊಸರಿನಿಂದ ಮಜ್ಜಿಗೆ, ಬೆಣ್ಣೆ. ಹಾಲು ಮೊಸರು ಮಜ್ಜಿಗೆ ಬೆಣ್ಣೆಗಳಿಗೆ ಜಗಳವಿಲ್ಲ. ಎಷ್ಟು ಬೆಣ್ಣೆ ಬರುತ್ತದೆ ಎಂಬುದು ಹಾಲಿನ ಪರೀಕ್ಷೆ. ಹಾಗೆಯೆ ಸಮಾಜದ ಪರೀಕ್ಷೆ. ವ್ಯಕ್ತಿಗಳ ಮೂಲಕ. ವ್ಯಕ್ತಿ – ಸಮಾಜಗಳಲ್ಲಿ ವಿರೋಧವಿಲ್ಲ. ವಿರೋಧ ಇದ್ದೀತು ಹೇಗೆ? ವ್ಯಕ್ತಿ ವ್ಯಕ್ತಿಗಳ ನಡುವೆಯೂ ವಿರೋಧವಿರಲಾಗದು.

ಒಬ್ಬನಿಗಿಂತ ಇನ್ನೊಬ್ಬ ಸಂಪನ್ನನಾದ ಮಾತ್ರಕ್ಕೆ ಏನು ಕೆಟ್ಟಿತು? ಯಾರೂ ವಿಪನ್ನರಾಗಿರದಿದ್ದರೆ ಸರಿ. ಸಿರಿವಂತನ ಸಿರಿಯನ್ನು ಸಮಾಜಕ್ಕಾಗಿ ಬಳಸಿದರೆ ಆಯಿತು. ಎಡಗಡೆ ಜೇಬಿನಲ್ಲಿದ್ದರೇನು, ಬಲಗಡೆ ಜೇಬಿನಲ್ಲಿದ್ದರೇನು ಹಣ? ಎರಡೂ ನನ್ನ ಜೇಬೇ. ಯಾರಾದರೂ ಸಂಪನ್ನರಾದರೆ ನಾನೂ ಸಂಪನ್ನನಾದೆ. ರಾಷ್ಟ್ರವೂ ಸಂಪನ್ನವಾಯಿತು. ಇಂಥ ಯುಕ್ತಿಯನ್ನು ಸಾಧಿಸಲಾದೀತು.

ಆದರೆ ನಾವು ಭೇದ ಮಾಡುತ್ತೇವೆ. ರುಂಡ ಮುಂಡ ಬೇರೆ ಬೇರೆ ಯಾದರೆ ಎರಡೂ ಸಾಯುತ್ತವೆ. ವ್ಯಕ್ತಿ – ಸಮಾಜಗಳಲ್ಲಿ ಭೇದವೆಣಿಸದಿರಿ. ಒಂದೇ ಕ್ರಿಯೆಯನ್ನು ಸ್ವಾರ್ಥ – ಪರಮಾರ್ಥ ಎರಡಕ್ಕೂ ಅವಿರೋಧವಾಗಿ ಮಾಡುವುದು ಹೇಗೆಂಬುದನ್ನು ಗೀತೆ ತಿಳಿಸುತ್ತದೆ. ನನ್ನ ಕೊರಡಿಯೊಳಗಣ ಗಾಳಿ, ಹೊರಗಿನ ಗಾಳಿ ಇವೆರಡರಲ್ಲಿ ವಿರೋಧವಿಲ್ಲ. ವಿರೋಧ ಕಲ್ಪಿಸಿ, ನನ್ನ ಕೊಠಡಿಯ ಬಾಗಿಲು ಬಿಗಿದುಕೊಂಡರೆ ನಾನು ಉಸಿರುಗಟ್ಟಿ ಸತ್ತೇನು. ಅವಿರೋಧವನ್ನು ಕಲ್ಪಿಸಿಕೊಂಡು ಬಾಗಿಲು ತೆರೆದರೆ ಅನಂತ ವಾದ ಗಾಳಿ ಬರುತ್ತದೆ. ನನ್ನ ಸ್ವಂತ ಜಮೀನು ಸ್ವಂತ ಮನೆ ಎಂದು ತುಂಡರಿಸಿಕೊಂಡ ಗಳಿಗೆಯೇ ಅನಂತ ಸಂಪತ್ತಿಯಿಂದ ದೂರವಾಗುತ್ತಾನೆ. ನನ್ನ ಚಿಕ್ಕ ಮನೆ ಸುಟ್ಟರೆ, ಬಿದ್ದರೆ ನನ್ನ ಸರ್ವಸ್ವವೂ ಹೋಯಿತೆಂದು ಅಳುತ್ತೇನೆ. ಆದರೆ ಹಾಗೇಕೆ ಹೇಳಬೇಕು, ಅಳಬೇಕು? ಕಿರುಕಲ್ಪನೆ ಮಾಡುವುದು, ಆಮೇಲೆ ಅಳುವುದು! ಈ ೫೦೦ ರೂಪಾಯಿ ನನ್ನದು ಎಂದರೆ ಸೃಷ್ಟಿಯ ಅಪಾರ ಸಂಪತ್ತಿನಿಂದ ನಾ ದೂರವಾದೆ. ಇವರಿಬ್ಬರು ನನ್ನ ತಮ್ಮಂದಿರು ಎಂದಾಗ ಅಸಂಖ್ಯ ಸೋದರರು ದೂರವಾದರು. ಇದರ ಭಾಸ ನಮಗಿಲ್ಲ. ಮನುಷ್ಯ ಎಷ್ಟು ಸಂಕೋಚಮಾಡುತ್ತಾನೆ! ಮನುಷ್ಯನ ಸ್ವಾರ್ಥವೇ ಪರಾರ್ಥವಾಗಬೇಕು. ವ್ಯಕ್ತಿ – ಸಮಾಜಗಳ ಸಹಕಾರ ಹೇಗಾದೀತೆಂಬ ಸಕಲ ಸುಂದರ ಮಾರ್ಗವನ್ನು ಗೀತೆ ತೋರಿಸುತ್ತದೆ. ನಾಲಗೆ ಹೊಟ್ಟೆಗಳ ನಡುವೆ ಏನು ವಿರೋಧ? ಹೊಟ್ಟೆಗೆ ಎಷ್ಟು ಬೇಕೋ ಅಷ್ಟು ಅನ್ನವನ್ನು ನಾಲಗೆ ಕೊಡಬೇಕು. ಹೊಟ್ಟೆ ಸಾಕು ಎಂದೊಡನೆ ನಾಲಗೆ ನಿಲ್ಲಿಸಿಬಿಡಬೇಕು. ಹೊಟ್ಟೆ ಒಂದು ಸಂಸ್ಥೆ. ನಾಲಗೆ ಒಂದು ಸಂಸ್ಥೆ. ಈ ಸರ್ವ ಸಂಸ್ಥೆಗಳಿಗೆ ನಾನು ಸಾಮ್ರಾಟ್. ಇವೆಲ್ಲ ಸಂಸ್ಥೆಗಳಲ್ಲೂ

ಅದ್ವೈತ. ಎಲ್ಲಿಂದ ತಂದಿರಿ ಈ ಹಾಳು ವಿರೋಧ? ಒಂದು ದೇಹದಲ್ಲಿ ಈ ಸಂಸ್ಥೆಗಳ ವಿರೋಧವಿಲ್ಲದೆ ಸಹಕಾರ ಇರುವಂತೆ ವ್ಯಕ್ತಿ–ಸಮಾಜಗಳೂ ಇರಬೇಕು. ಸಮಾಜದಲ್ಲಿ ಈ ಸಹಕಾರ ಬೆಳೆಯಲೆಂದು ಗೀತೆ ಚಿತ್ತಶುದ್ಧಿ ಪೂರ್ವಕವಾದ ಯಜ್ಞ ದಾನ ತಪಗಳನ್ನು ಮಾಡಲು ಹೇಳುತ್ತದೆ. ಆ ಕರ್ಮದಿಂದ ವ್ಯಕ್ತಿ–ಸಮಾಜ ಎರಡರ ಹಿತವೂ ಸಾಧಿಸೀತು.

ಯಾರದು ಯಜ್ಞಮಯ ಜೀವನವೋ ಅವರು ಸರ್ವರಿಗೂ ಸೇರಿದವರು. ತನ್ನ ಮೇಲೆ ತಾಯಿಗೆ ಪ್ರೀತಿ ಎಂದು ಪ್ರತಿಯೊಬ್ಬ ಹುಡುಗನಿಗೂ ಅನಿಸುತ್ತದೆ. ಅದೇ ರೀತಿ ಯಜ್ಞಮಯಪುರುಷ ನಮ್ಮವನೆನಿಸುತ್ತಾನೆ. ಇಡೀ ಲೋಕಕ್ಕೇ ಅವನು ಬೇಕು. ಅಂಥ ಪುರುಷ ತಮ್ಮ ಪ್ರಾಣ, ತಮ್ಮ ಮಿತ್ರ, ಸಖ ಎಂದು ಎಲ್ಲರಿಗೂ ಅನಿಸುತ್ತದೆ.

**ಇದ್ದರಿರಬೇಕಿಂಥ ಪುರುಷ**
**ಲೋಕಕ್ಕೆ ಬೇಕೆನಿಸಿ ಮನುಷ * —**

ಹೀಗೆ ಸಮರ್ಥ ರಾಮದಾಸರು ಹೇಳಿದಾರೆ. ಇಂಥ ಜೀವನ ನಡೆಸುವ ಯುಕ್ತಿಯನ್ನು ಗೀತೆ ನಮಗೆ ಹೇಳಿದೆ.

## ೯೯. ಸಮರ್ಪಣೆಯ ಮಂತ್ರ

ಯಜ್ಞಮಯ ಜೀವನ ನಡೆಸಿ, ಪುನಃ ಅದೆಲ್ಲವನ್ನು ಈಶ್ವರಾರ್ಪಣ ಮಾಡಿ ಎಂಬುದು ಗೀತೆಯ ಸಂದೇಶ. ಜೀವನ ಸೇವಾಮಯವಾಗದಿದ್ದರೆ ಈಶ್ವರಾರ್ಪಣವೇನು ಬಂತು? ಆದರೆ ಸರ್ವಜೀವನವೂ ಸೇವಾಮಯವಾಗಬೇಕೆಂದು ಹೇಳುವುದು ಸುಲಭ, ಮಾಡುವುದು ಕಷ್ಟ. ಅನೇಕ ಜನ್ಮಗಳೆತ್ತಿದ ಮೇಲೆ ಏನೋ ಸ್ವಲ್ಪ ಸಾಧಿಸೀತು. ಒಂದು ವೇಳೆ ಎಲ್ಲ ಕರ್ಮವೂ ಸೇವಾಮಯವಾದರೂ ಪೂಜಾಮಯವಾದಂತಲ್ಲ. ಆದುದರಿಂದ ಓಂ ತತ್ ಸತ್ ಮಂತ್ರದಿಂದ ಸರ್ವ ಕರ್ಮವನ್ನೂ ಈಶ್ವರಾರ್ಪಣ ಮಾಡಬೇಕು.

ಸೇವಾಕರ್ಮ ಸಂಪೂರ್ಣವಾಗಿ ಸೇವಾಮಯವಾಗುವುದು ಕಠಿಣ. ಪರಾರ್ಥದಲ್ಲಿ ಸ್ವಾರ್ಥವೂ ಬಂದುಹೋಗುತ್ತದೆ. ಕೇವಲ ಪರಾರ್ಥ

* ಐಸಾ ಪುರುಷ ತೋ ಪಹಾವಾ । ಜನಾಂಸ ವಾಟೇ ಹಾ ಅಸಾವಾ ॥

ಸಂಭವವಿಲ್ಲ. ಲೇಶಮಾತ್ರವೂ ಸ್ವಾರ್ಥವಿಲ್ಲ ಎನ್ನಲು ಬರುವಂತಿಲ್ಲ. ಆದುದರಿಂದ ದಿನೇದಿನೇ ಹೆಚ್ಚು ನಿಸ್ವಾರ್ಥ ನಿಷ್ಕಾಮ ಸೇವೆ ನನ್ನಿಂದಾಗಲಿ ಎಂದು ಇಚ್ಛಿಸುತ್ತಾ ನಡೆಯಬೇಕು. ಸೇವೆ ಉತ್ತರೋತ್ತರ ಹೆಚ್ಚು ಶುದ್ಧವಾಗಲಿ ಎಂಬುದಿದ್ದರೆ ಎಲ್ಲಾ ಕ್ರಿಯೆಯನ್ನು ಈಶ್ವರನಿಗರ್ಪಿಸು. ಜ್ಞಾನದೇವರು ಹೇಳಿದಂತೆ

'ನಾಮಾಮೃತ ಸವಿದರೋ ವೈಷ್ಣವರು
ಜೀವನಕಲೆ ಸಾಧಿಸಿದರು ಯೋಗಿಗಳು'

ನಾಮಾಮೃತದ ಸವಿ ಬೇರೆ, ಜೀವನದ ಕಲೆ ಬೇರೆ ಅಲ್ಲ. ನಾಮದ ಆಂತರಿಕ ಘೋಷ – ಬಾಹ್ಯಜೀವನದ ಕಲೆ, ಎರಡರಲ್ಲೂ ಮೇಳವುಂಟು. ಯೋಗಿ, ವೈಷ್ಣವ ಇಬ್ಬರೂ ಒಂದೇ. ಪರಮೇಶ್ವರನಿಗೆ ಕ್ರಿಯೆಯನ್ನು ಅರ್ಪಿಸಿದರೆ ಸ್ವಾರ್ಥ, ಪರಾರ್ಥ, ಪರಮಾರ್ಥಗಳು ಏಕರೂಪವಾಗುತ್ತವೆ. ಮೊದಲು ನಾನು ನೀನು ಎಂಬುದನ್ನು ಒಂದೇ ಮಾಡಬೇಕು. ನಾನು ನೀನು ಸೇರಿ ನಾವು ಆದೇವು. ಈಗ ನಾವು – ಅವರು ಎಂಬುದನ್ನು ಒಂದು ಮಾಡಬೇಕು. ಮೊದಲು ನನ್ನ – ಈ ಸೃಷ್ಟಿಯ ಮೇಳ ಕೂಡಬೇಕು. ಆಮೇಲೆ ಪರಮೇಶ್ವರನೊಡನೆ. ಇದನ್ನೇ ಓಂ ತತ್ ಸತ್ ಮಂತ್ರ ಸೂಚಿಸುತ್ತದೆ.

ಪರಮಾತ್ಮನಿಗೆ ಅನಂತ ನಾಮಗಳಿವೆ. ಅವೆಲ್ಲವನ್ನೂ ಸೇರಿಸಿ ವ್ಯಾಸರು ವಿಷ್ಣುಸಹಸ್ರನಾಮ ರಚಿಸಿದಾರೆ. ಯಾವ ಯಾವ ಹೆಸರನ್ನು ನಾವು ಕಲ್ಪಿಸಬಹುದೋ ಅವೆಲ್ಲವೂ ಅದರಲ್ಲಿದೆ. ಯಾವ ಹೆಸರನ್ನು ನೆನೆಯಬೇಕೋ ಅದನ್ನು ಆ ಅರ್ಥದಲ್ಲಿ ಸೃಷ್ಟಿಯೊಳಗೆ ನೋಡಬೇಕು. ತದನುರೂಪವಾಗಿ ಬದುಕನ್ನು ಕಟ್ಟಬೇಕು. ಪರಮೇಶ್ವರನ ಹೆಸರನ್ನು ಮನಸ್ಸಿನಲ್ಲಿ ನೆನೆದು, ಸೃಷ್ಟಿಯಲ್ಲಿ ಕಂಡು, ನಾವು ಅದರಂತೆ ಆಗಬೇಕು. ಇದನ್ನು ನಾನು ತ್ರಿಪದಾ ಗಾಯತ್ರಿ ಎನ್ನುತ್ತೇನೆ. ಉದಾಹರಣೆಗಾಗಿ, ಪರಮೇಶ್ವರನ ದಯಾಮಯ ನಾಮವನ್ನು ನೆನೆವರೆ, ರಹೀಮ್ ಇದೆ. ದಯಾಳು ದೇವರನ್ನು ಸೃಷ್ಟಿಯಲ್ಲಿ ಕಣ್ತೆರೆದು ಕಾಣಬೇಕು. ಪ್ರತಿಯೊಂದು ಮಗುವಿಗೂ ಸೇವೆಗೆಂದು ತಾಯಿಯನ್ನು ಕೊಟ್ಟಿದಾನೆ ಪರಮೇಶ್ವರ. ಮಗು ಬದುಕಲು ಗಾಳಿ ಕೊಟ್ಟಿದಾನೆ. ಹೀಗೆ ಆ ದಯಾಮಯ

ಸೃಷ್ಟಿಯೊಳಗಿನ ಅನಂತ ದಯೆಯನ್ನು ಕಂಡು ನಮ್ಮ ಬದುಕನ್ನು ದಯಾಮಯವಾಗಿಸಬೇಕು. ಭಗವದ್ಗೀತೆಯ ಕಾಲದಲ್ಲಿ ಪರಮೇಶ್ವರನಿಗೆ ಇದ್ದ ಪ್ರಸಿದ್ಧನಾಮವನ್ನು ಗೀತೆ ಸೂಚಿಸಿದೆ : ಅದೇ ಓಂ ತತ್ ಸತ್.

ಓಂ ಎಂದರೆ ಹೌದು, ದೇವರು ಇದಾನೆ. ಈ ೨೦ನೇ ಶತಮಾನ ದಲ್ಲೂ ಪರಮೇಶ್ವರನಿದಾನೆ. ' ಸ ಏವ ಅದ್ಯ ಸ ಉ ಶ್ವಃ ' ಅವನೇ ಇಂದು ಇದಾನೆ. ಅವನೇ ನಿನ್ನೆ ಇದ್ದ. ಅವನೇ ನಾಳೆ ಇರುತ್ತಾನೆ. ಅವನು ಸ್ಥಿರ. ಈ ಸೃಷ್ಟಿಯೂ ಸ್ಥಿರ. ನಡುಕಟ್ಟಿ ಸಾಧಿಸಲು ನಾನು ಸಿದ್ಧ. ನಾನು ಸಾಧಕ, ಅವನು ದೇವ, ಈ ಸೃಷ್ಟಿ ಪೂಜಾದ್ರವ್ಯ – ಪೂಜಾಸಾಧನೆ. ಈ ಭಾವನೆಯಿಂದ ನಾನು ತುಂಬಿದಾಗಲಿ ಓಂ ಎಂಬ ಅಕ್ಷರ ಗಂಟಲೊಳಗೆ ಇಳಿದಂತೆ ಅವನೂ ನಾನೂ ನನ್ನ ಸಾಧನ ಎಲ್ಲವೂ ಇದೆ ಎಂಬ ಭಾವನೆ ಯನ್ನು ಓಂಕಾರ ಮೈಗೂಡಿಸಬೇಕು. ಯಾವಾಗ ನೋಡಿದರೂ ಸೂರ್ಯ ಕಿರಣಸಹಿತನೇ. ಯಾವಾಗಲೂ ಕಿರಣಗಳನ್ನು ಬಿಟ್ಟಿಲ್ಲ. ಅವನು ಕಿರಣಗಳನ್ನು ಮರೆಯ. ಅದೇ ರೀತಿ ಯಾವುದರಲ್ಲಿ ನೋಡಿದರೂ ನಮ್ಮ ಸಾಧನೆಯೇ ಕಾಣಬೇಕು. ಹಾಗಾದರೇನೇ ಓಂ ಅಕ್ಷರವನ್ನು ನಾವು ಅರಗಿಸಿಕೊಂಡೆವೆನ್ನಲು ಬಂದೀತು.

ಆಮೇಲೆ ಸತ್. ಪರಮೇಶ್ವರನು ಸತ್ – ಎಂದರೆ ಶುಭ, ಮಂಗಳ. ಈ ಭಾವನೆಯನ್ನು ಮನದೊಳಗೆ ಮೂಡಿಸಿ, ಅದರ ಮಾಂಗಲ್ಯವನ್ನು ಸೃಷ್ಟಿಯಲ್ಲಿ ಅನುಭವಿಸಿ ನೀರಿನ ಒಂದೇ ಸಮ ಮಟ್ಟವನ್ನು ನೋಡಿ. ನೀರಿನಲ್ಲಿ ಒಂದು ಕೊಡ ತುಂಬಿಕೊ. ಒಂದು ಗಳಿಗೆಯಲ್ಲಿ ಆ ತಗ್ಗು ತುಂಬುತ್ತದೆ. ಎಷ್ಟು ಮಂಗಲತೆ, ಎಷ್ಟು ಪ್ರೀತಿ ಇದು ! ಹೊಳೆ ತಗ್ಗನ್ನು ಸೈರಿಸದು. ಅದನ್ನು ತುಂಬಲು ಧಾವಿಸುತ್ತದೆ. ' ನದೀ ವೇಗೇನ ಶುದ್ಧ್ಯತಿ.' ಸೃಷ್ಟಿರೂಪ ನದಿ ವೇಗದಿಂದ ಶುದ್ಧವಾಗುತ್ತದೆ. ಸೃಷ್ಟಿ ಎಂದೇ ಎಲ್ಲವೂ ಶುಭ, ಮಂಗಳ. ನನ್ನ ಕರ್ಮವೂ ಹಾಗೇ ಆಗಲಿ. ಪರಮೇಶ್ವರನ ಈ ' ಸತ್ ' ನಾಮವನ್ನು ಅರಗಿಸಿಕೊಳ್ಳಲು ನಮ್ಮ ಸರ್ವಕ್ರಿಯೆಯೂ ನಿರ್ಮಲವೂ ಭಕ್ತಿಮಯವೂ ಆಗಬೇಕು. ಸೋಮರಸವನ್ನು ಪವಿತ್ರಕ ದಿಂದ ಸೋಸಿಕೊಳ್ಳುವಂತೆ ನಮ್ಮ ಸರ್ವ ಕರ್ಮಗಳನ್ನೂ ನಿತ್ಯವೂ ಪರೀಕ್ಷೆ ಮಾಡಿ ಅದನ್ನು ನಿರ್ದೋಷಮಯವಾಗಿ ಮಾಡಬೇಕು.

ಉಳಿದುದು ' ತತ್ '. ತತ್ ಎಂದರೆ ಅದು. ಏನೋ ಪ್ರತ್ಯೇಕ ವಾದುದು, ಈ ಸೃಷ್ಟಿಯಿಂದ ಅಲಿಪ್ತವಾದುದು. ಪರಮಾತ್ಮ ಈ ಸೃಷ್ಟಿ ಯಿಂದ ಬೇರೆ; ಎಂದರೆ ಅಲಿಪ್ತ. ಸೂರ್ಯ ಮೂಡಿದರೆ ಕಮಲ ಅರಳು ತ್ತದೆ, ಹಕ್ಕಿ ಹಾರುತ್ತವೆ, ಕತ್ತಲು ಕಳೆಯುತ್ತದೆ. ಸೂರ್ಯ ಮಾತ್ರ ಎಲ್ಲೋ ದೂರ ಇರುತ್ತಾನೆ. ಇದೆಲ್ಲ ಪರಿಣಾಮದಿಂದ ಪ್ರತ್ಯೇಕವಾಗಿರು ತ್ತಾನೆ. ನಿಮ್ಮ ಕರ್ಮದಲ್ಲಿ ಅನಾಸಕ್ತಿಯಿರಬೇಕು, ಅಲಿಪ್ತತೆಯನ್ನುಂಟು ಮಾಡಬೇಕು ಎಂದರೆ ಬಾಳಿನಲ್ಲಿ ಆ ' ತತ್ ' ಇಳಿದು ಬಂದಂತೆ.

ಹೀಗೆ ' ಓಂ ತತ್ ಸತ್ ' ಎಂಬ ವೈದಿಕ ಮಂತ್ರವನ್ನು ಜಪಿಸುತ್ತ ಸರ್ವಕ್ರಿಯೆಯನ್ನೂ ಪರಮೇಶ್ವರಾರ್ಪಣ ಮಾಡುವುದನ್ನು ಗೀತೆ ಕಲಿಸು ತ್ತದೆ. ಸರ್ವಕರ್ಮವನ್ನೂ ಪರಮೇಶ್ವರನಿಗೆ ಅರ್ಪಿಸುವ ವಿಚಾರ ಒಂಬತ್ತನೆಯ ಅಧ್ಯಾಯದಲ್ಲಿಯೇ ಬಂದಿದೆ. ' ಯತ್ಕರೋಷಿ ಯದಶ್ನಾಸಿ ' ಎಂಬ ಶ್ಲೋಕದಲ್ಲಿ ಇದನ್ನೇ ಹೇಳಿದೆ. ಅದನ್ನೆ ಹದಿನೇಳನೆಯ ಅಧ್ಯಾಯ ದಲ್ಲೂ ಹೇಳಿದೆ. ಪರಮೇಶ್ವರನಿಗೆ ಅರ್ಪಿಸುವ ಕ್ರಿಯೆ ಸಾತ್ವಿಕವಾಗ ಬೇಕು. ಹಾಗಿದ್ದರೇನೇ ಅದು ಅರ್ಪಣ ಯೋಗ್ಯ. ಇದನ್ನು ಒತ್ತಿ ಹೇಳಿದಾರೆ ಇಲ್ಲಿ.

## ೧೦೦. ಪಾಪಾಪಹಾರಿ ಹರಿನಾಮ

ಇದೆಲ್ಲವೂ ನಿಜ. ಆದರೆ ಒಂದು ಪ್ರಶ್ನೆ. ' ಓಂ ತತ್ ಸತ್ ' ಮಂತ್ರ ವನ್ನು ಪವಿತ್ರಪುರುಷ ಅರಗಿಸಿಕೊಂಡಾನು. ಪಾಪಿ ಏನು ಮಾಡಬೇಕು? ಪಾಪಿಯ ಬಾಯಲ್ಲಿ ಶೋಭಿಸುವಂಥ ಹೆಸರು ಒಂದಾದರೂ ಇದೆಯೋ ಇಲ್ಲವೋ? ಓಂ ತತ್ ಸತ್ ಮಂತ್ರದಲ್ಲಿ ಈ ಶಕ್ತಿಯಿದೆ. ಅಸತ್ಯದಿಂದ ಸತ್ಯದ ಕಡೆ ಒಯ್ಯುವ ಶಕ್ತಿ ಈಶ್ವರನ ಯಾವ ಹೆಸರಿಗಾದರೂ ಇದೆ. ಪಾಪದಿಂದ ನಿಷ್ಪಾಪದ ಕಡೆ ಅದು ಒಯ್ಯಬಲ್ಲದು. ಬಾಳನ್ನು ಮೆಲ್ಲಮೆಲ್ಲನೆ ಶುದ್ಧಿಗೊಳಿಸಬೇಕು. ಪರಮಾತ್ಮ ಖಂಡಿತವಾಗಿ ನಿನಗೆ ನೆರವಾದಾನು. ನಿನ್ನ ದೌರ್ಬಲ್ಯದ ಸಮಯದಲ್ಲಿ ನಿನ್ನ ಕೈ ಹಿಡಿದಾನು.

ಒಂದು ಕಡೆ ಪುಣ್ಯಮಯವಾದರೂ ಅಹಂಕಾರದ ಬದುಕು, ಇನ್ನೊಂದು ಕಡೆ ಪಾಪಮಯವಾದರೂ ನಮ್ರ ಜೀವನ. ಇವೆರಡರಲ್ಲಿ

ಒಂದನ್ನು ಆರಿಸಿಕೊ ಎಂದರೆ ಬಾಯಿಂದ ಹೇಳಲಾಗದಿದ್ದರೂ ಮನಸ್ಸಿನಲ್ಲಿಯೇ ಅಂದುಕೊಂಡೇನು : 'ಯಾವ ಪಾಪದಲ್ಲಿ ಪರಮೇಶ್ವರನ ಸ್ಮರಣೆಯಿದೆಯೋ ಆ ಪಾಪವೇ ನನಗಿರಲಿ.' ಪುಣ್ಯಮಯ ಜೀವನದಿಂದ ಪರಮೇಶ್ವರನ ಮರವು ಆಗುವುದಿದ್ದರೆ, ಅವನು ನೆನಪಾಗುವ ಪಾಪಮಯ ಜೀವನವೇ ಇರಲಿ ಎಂದು ನನ್ನ ಮನಸ್ಸು ಹೇಳೀತು. ಪಾಪಮಯ ಜೀವನವನ್ನು ನಾನು ಸಮರ್ಥಿಸುತ್ತೇನೆಂದು ಇದರ ಅರ್ಥವಲ್ಲ. ಆದರೆ ಪುಣ್ಯದ ಅಹಂಕಾರದಷ್ಟು ಪಾಪವಲ್ಲ, ಇಂಥ ಪಾಪ!

ಅಂಜಿದೆನಯ್ಯ ಜಾಣತನ, ಅಡ್ಡ ಬೇಡ ನಾರಾಯಣ *

ಎಂದು ತುಕಾರಾಮರು ಹೇಳಿದಾರೆ. ಆ ದೊಡ್ಡಸ್ತಿಕೆ ಬೇಡ. ಅದಕ್ಕಿಂತ ಪಾಪಿ, ದುಃಖಿ ಆಗಿದ್ದರೂ ಲೇಸು. ಜಾಣ ಮಗು ತಾಯಿಗೂ ದೂರವೇ. ಜಾಣನಲ್ಲದ ಮಗುವನ್ನು ತಾಯಿ ಮಡಿಲಲ್ಲಿ ಎತ್ತಿಕೊಂಡಾಳು. ಸ್ವಾವಲಂಬಿ – ಪುಣ್ಯವಂತನಾಗುವುದು ನನಗೆ ಬೇಡ. ಪರಮೇಶ್ವರಾವಲಂಬಿಯಾದ ಪಾಪಿಯಾಗಿರುವುದೇ ನನಗೆ ಪ್ರಿಯ. ನನ್ನ ಪಾಪವನ್ನು ತೊಳೆದುಹಾಕಿಯೂ ಉಳಿಯುವಷ್ಟಿದೆ ಪರಮಾತ್ಮನ ಪಾವಿತ್ರ್ಯ. ಪಾಪ ಮಾಡದಿರಲು ಪ್ರಯತ್ನಿಸೋಣ. ಅದು ಕೈಲಾಗದಿದ್ದರೆ ನಮ್ಮ ಹೃದಯವಾದರೂ ಗೋಳಾಡೀತು. ಮನಸ್ಸು ತಳಮಳಿಸೀತು. ಆಮೇಲೆ ಪರಮೇಶ್ವರನ ಗುರುತು ಆದೀತು. ಅವನು ವಿನೋದ ನೋಡುತ್ತ ನಿಂತಿದಾನೆ. ಅವನಿಗೆ ಹೇಳು : 'ನಾನು ಪಾಪಿ. ಅದಕ್ಕೇ ನಿನ್ನ ಬಾಗಿಲಿಗೆ ಬಂದೆ.' ಭಗವಂತನ ಸ್ಮರಣೆಯ ಅಧಿಕಾರ ಪುಣ್ಯವಂತನಿಗಿದೆ. ಏಕೆಂದರೆ ಅವನು ಪುಣ್ಯವಂತ. ಭಗವಂತನ ಸ್ಮರಣೆಯ ಅಧಿಕಾರ ಪಾಪಿಗೂ ಇದೆ. ಏಕೆಂದರೆ ಅವನು ಪಾಪಿ!

ಭಾನುವಾರ,
೧೨-೬-೧೯೩೨.

* ಬಹುಭಿತೋ ಜಾಣಪಣಾ। ಆಡ ನ ಯೋ ನಾರಾಯಣಾ ॥

## ೧೦೧. ಅರ್ಜುನನ ಕಟ್ಟಕಡೆಯ ಪ್ರಶ್ನೆ

ಈಶ್ವರನ ಕೃಪೆಯಿಂದ ನಾವು ಇಂದು ಹದಿನೆಂಟನೆ ಅಧ್ಯಾಯಕ್ಕೆ ಬಂದಿದೇವೆ. ಕ್ಷಣಕ್ಷಣಕ್ಕೂ ಬದಲುತ್ತಾ ಇರುವ ಈ ಲೋಕದಲ್ಲಿ ಯಾವ ಸಂಕಲ್ಪ ಈಡೇರುವುದೂ ದೇವರ ಕೈಯಲ್ಲೇ ಇದೆ. ನೆರೆಮನೆಯಲ್ಲಂತೂ ಹೆಜ್ಜೆಹೆಜ್ಜೆಗೂ ಅನಿಶ್ಚಿತತೆ ಅನುಭವವಾಗುತ್ತದೆ. ಇಲ್ಲಿ ಏನಾದರೊಂದು ಕೆಲಸ ಮೊದಲಿಟ್ಟು ಅದನ್ನು ಮುಗಿಸೇವೆಂದು ಬಯಸುವುದು ಕಷ್ಟ. ಈ ಗೀತಾ—ಪ್ರವಚನ ಕೊನೆಗಂಡೀತೆಂದು ಪ್ರಾರಂಭದಲ್ಲಿ ಎಣಿಸುವಂತಿರಲಿಲ್ಲ. ದೇವರ ಇಚ್ಛೆಯಿತ್ತು ಎಂದು ನಾವು ಕೊನೆಗೆ ಬಂದು ಮುಟ್ಟಿದೇವೆ.

೧೪ನೇ ಅಧ್ಯಾಯದಲ್ಲಿ ಸಾತ್ವಿಕ, ರಾಜಸ, ತಾಮಸ ಎಂದು ಜೀವನವನ್ನು, ಕರ್ಮವನ್ನು ಮೂರು ಬಗೆಯಾಗಿ ವಿಂಗಡಿಸಿತು. ಅದರಲ್ಲಿ ರಾಜಸ ತಾಮಸಗಳನ್ನು ಕಿತ್ತೊಗೆದು ಸಾತ್ವಿಕವನ್ನು ಸ್ವೀಕರಿಸಬೇಕೆಂದು ಹೇಳಿತು. ಆಮೇಲೆ ೧೭ನೇ ಅಧ್ಯಾಯದಲ್ಲಿ ಬೇರೊಂದು ರೀತಿಯಲ್ಲಿ ಆ ಮೂರು ಬಗೆಯನ್ನು ಕಂಡೆವು: ಯಜ್ಞ, ದಾನ, ತಪ. ಒಂದೇ ಶಬ್ದದಲ್ಲಿ ಹೇಳಬೇಕೆಂದರೆ ಯಜ್ಞವೇ ಜೀವನದ ಸಾರ. ಯಜ್ಞಕ್ಕೆ ಉಪಯುಕ್ತವಾದ ಆಹಾರಾದಿ ಕರ್ಮ ಸಾತ್ವಿಕವಿರಬೇಕು. ಅದನ್ನು ಯಜ್ಞರೂಪದಲ್ಲಿ ತೆಗೆದುಕೊಳ್ಳಬೇಕು. ಯಜ್ಞರೂಪವಾದ ಸಾತ್ವಿಕ ಕರ್ಮ ಸರಿ ; ಉಳಿದುವೆಲ್ಲ ವರ್ಜ್ಯ ಎಂಬ ಧ್ವನಿ ೧೭ನೇ ಅಧ್ಯಾಯದಲ್ಲಿ ಕೇಳಿಬಂತು. ಓಂ ತತ್ ಸತ್ ಮಂತ್ರವನ್ನೇಕೆ ಜಪಿಸಬೇಕೋ ತಿಳಿಯಿತು. ಓಂ ಎಂದರೆ ಸಾತತ್ಯ, ತತ್ ಎಂದರೆ ಅಲಿಪ್ತತೆ, ಸತ್ ಎಂದರೆ ಸಾತ್ವಿಕತೆ. ಇವು ಮೂರೂ ಇದ್ದರೇನೇ ಆ ಸಾಧನೆ ಪರಮೇಶ್ವರನಿಗೆ ಅರ್ಪಿಸಲು ಯೋಗ್ಯ. ಇದೆಲ್ಲ ಪ್ರಸ್ತಾಪದಿಂದ ಕೆಲವು ಕರ್ಮ ತ್ಯಾಜ್ಯ, ಕೆಲವು ಕರ್ಮ ಅತ್ಯಾಜ್ಯ ಎಂಬುದು ತಿಳಿಯಿತು.

ಗೀತೆಯ ಸಮಸ್ತ ಬೋಧನೆಯನ್ನೂ ನೋಡಿದರೆ ಕರ್ಮತ್ಯಾಗ ಮಾಡಬೇಡ ಎಂದು ಎಲ್ಲ ಕಡೆಯಲ್ಲೂ ಹೇಳಲಾಗಿದೆ. ಗೀತೆ ಹೇಳುವುದು ಕರ್ಮಫಲ ತ್ಯಾಗ. ಕರ್ಮವನ್ನು ಸತತ ಮಾಡಬೇಕು, ಫಲವನ್ನು ಬಿಡಬೇಕು ; ಈ ಸಂದೇಶ ಎಲ್ಲೆಲ್ಲೂ ಇದೆ ಗೀತೆಯಲ್ಲಿ. ಇದು ಒಂದು ಪಕ್ಷ.

ಇನ್ನೊಂದು ಕಡೆ ಕೆಲವು ಕರ್ಮಗಳನ್ನು ಬಿಡಬೇಕು, ಕೆಲವನ್ನು ಮಾಡಬೇಕು ಎಂದು ಕಾಣುತ್ತದೆ. ಆದುದರಿಂದ ಕಡೆಯ ಅಧ್ಯಾಯದ ಆರಂಭದಲ್ಲಿ ಅರ್ಜುನ ಕೇಳಿದಾನೆ: 'ಫಲತ್ಯಾಗಪೂರ್ವಕವಾಗಿ ಕರ್ಮ ಮಾಡು ಎನ್ನುತ್ತೀ. ಮತ್ತೆ ಕೆಲವನ್ನು ಅಗತ್ಯವಾಗಿ ಬಿಡಬೇಕು, ಕೆಲವನ್ನು ಮಾಡಬೇಕು ಎನ್ನುತ್ತೀ. ಇವನ್ನು ಮೇಳಗೂಡಿಸಲು ಸಾಧ್ಯವೆ?' ಬಾಳಿನ ನಿಟ್ಟು ಯಾವುದೋ ಸ್ಪಷ್ಟವಾಗಲಿ ಎಂದು ಈ ಪ್ರಶ್ನೆ ಬಂದಿದೆ ಫಲತ್ಯಾಗದ ಮರ್ಮ ಮನಸ್ಸಿಗೆ ನಾಟಲಿ ಎಂದು. ಸಂನ್ಯಾಸವೆಂದು ಶಾಸ್ತ್ರ ಹೇಳುವ ಧರ್ಮದಲ್ಲಿ ಸ್ವರೂಪತಃ ಕರ್ಮವನ್ನು ಬಿಡಬೇಕಾಗುತ್ತದೆ. ಕರ್ಮದ ಸ್ವರೂಪ ಬಿಡಬೇಕು. ಫಲತ್ಯಾಗದಲ್ಲಿ ಕರ್ಮದ ಫಲ ಬಿಡಬೇಕು. ಗೀತೆಯ ಫಲತ್ಯಾಗದಲ್ಲಿ ಪ್ರತ್ಯಕ್ಷ ಕರ್ಮತ್ಯಾಗವೂ ಅಗತ್ಯವೆ? ಇದು ಪ್ರಶ್ನೆ. ಫಲತ್ಯಾಗದ ಒರೆಗಲ್ಲಿನಮೇಲೆ ಸಂನ್ಯಾಸದ್ದೇನು ಉಪಯೋಗ? ಸಂನ್ಯಾಸದ ಮಿತಿ ಎಲ್ಲಿಯವರೆಗೆ? ಸಂನ್ಯಾಸ ಫಲತ್ಯಾಗಗಳ ಎಲ್ಲೆ ಏನು? ಹೇಗೆ ಗೊತ್ತು? ಇದು ಅರ್ಜುನನ ಪ್ರಶ್ನೆ.

## ೧೦೨. ಫಲತ್ಯಾಗ — ಸಾರ್ವಭೌಮ ಪರೀಕ್ಷೆ

ಇದಕ್ಕೆ ಉತ್ತರ ಹೇಳುತ್ತ ಭಗವಂತ ಒಂದು ಮಾತನ್ನು ಸ್ಪಷ್ಟವಾಗಿ ಹೇಳಿದ: ಫಲತ್ಯಾಗದ ಒರೆಗಲ್ಲು ಸಾರ್ವಭೌಮ ವಸ್ತು. ಫಲತ್ಯಾಗದ ತತ್ತ್ವವನ್ನು ಸರ್ವತ್ರವೂ ಅನ್ವಯಿಸಬಹುದು. ಸರ್ವಕರ್ಮದ ಫಲತ್ಯಾಗ ಮಾಡಬೇಕೆಂಬ ಮಾತಿಗೂ ರಾಜಸ ತಾಮಸ ಕರ್ಮ ತ್ಯಾಗಮಾಡಬೇಕೆಂಬುದಕ್ಕೂ ವಿರೋಧವಿಲ್ಲ. ಫಲತ್ಯಾಗದ ಯುಕ್ತಿ ಮಾಡಿದರೆ ಕೆಲವು ಕರ್ಮ ತಾವಾಗಿಯೆ ಬಿದ್ದುಹೋಗುತ್ತವೆ. ಅವುಗಳ ಸ್ವರೂಪವೆ ಅಂಥದು. ಫಲತ್ಯಾಗಪೂರ್ವಕ ಕರ್ಮ ಮಾಡು ಎಂದರೆ ಕೆಲವು ಕರ್ಮಗಳನ್ನು ಬಿಡು ಎಂದು ಅರ್ಥವಾಗುತ್ತದೆ. ಫಲತ್ಯಾಗಪೂರ್ವಕ ಕರ್ಮ ಮಾಡೆಂದರೆ ಹಲವು ಕರ್ಮಗಳ ತ್ಯಾಗ ಪ್ರತ್ಯಕ್ಷವಾಗಿ ಅದರಲ್ಲಿ ಬಂದೇ ತೀರುತ್ತದೆ

ಈ ಮಾತನ್ನು ಸ್ವಲ್ಪ ಕಣ್ಣಾರಳಿಸಿ ನೋಡೋಣ. ಫಲತ್ಯಾಗಪೂರ್ವಕ ಮಾಡೆಂದಾಗ ಕಾಮ್ಯಕರ್ಮ, ಕಾಮನೆಯೇ ಬೀಜವಾದ ಕರ್ಮ, ನಾಶವಾಗಿಹೋಯಿತು. ಫಲತ್ಯಾಗದ ಇದಿರು ಕಾಮ್ಯಕರ್ಮ, ನಿಷಿದ್ಧ

ಕರ್ಮಗಳು ತಲೆಯೆತ್ತಿ ನಿಲ್ಲಲಾರವು. ಫಲತ್ಯಾಗಪೂರ್ವಕ ಕರ್ಮವೆಂದರೆ ಕೇವಲ ಕೃತ್ರಿಮ, ತಾಂತ್ರಿಕ, ಯಾಂತ್ರಿಕ ಕ್ರಿಯೆಯಲ್ಲ. ಈ ಒರೆಗಲ್ಲಿನಿಂದಲೇ ಯಾವುದನ್ನು ಮಾಡಬೇಕು, ಯಾವುದನ್ನು ಬಿಡಬೇಕು ಎಂಬುದು ತನ್ನಿಂದ ತಾನೆ ನಿರ್ಧರವಾಗುತ್ತದೆ. 'ಗೀತೆ ಫಲತ್ಯಾಗ ಪೂರ್ವಕ ಕರ್ಮ ಮಾಡೆನ್ನುತ್ತದೆ. ಇಂಥದನ್ನು ಮಾಡು ಎಂದು ಹೇಳಿಲ್ಲ' ಎಂದಾರು. ಹಾಗೆ ಅನಿಸೀತು. ಆದರೆ ಅದು ಸರಿಯಲ್ಲ. ಫಲತ್ಯಾಗ ಪೂರ್ವಕ ಮಾಡಬೇಕು ಎಂಬುದರಲ್ಲೆ ಯಾವುದನ್ನು ಮಾಡಬೇಕು, ಯಾವುದನ್ನು ಬಿಡಬೇಕು ಎಂಬುದು ತಿಳಿದುಬರುತ್ತದೆ. ಹಿಂಸಾತ್ಮಕ ಕರ್ಮ, ಅಸತ್ಯಮಯ ಕರ್ಮ, ಚೋರಕರ್ಮ ಇವನ್ನು ಫಲತ್ಯಾಗ ಪೂರ್ವಕ ಮಾಡಲು ಬರುವಂತಿಲ್ಲ. ಫಲತ್ಯಾಗದ ಒರೆಗಲ್ಲಿಗೆ ತಿಕ್ಕಿದೊಡನೆಯೆ ಈ ಕರ್ಮಗಳು ಉರುಳಿಬೀಳುತ್ತವೆ. ರವಿಯ ಪ್ರಭೆ ಹರಡಿದರೆ ಎಲ್ಲವೂ ಬೆಳಕಾಗಿ ಕಾಣುತ್ತದೆ. ಆದರೆ ಕತ್ತಲು ಬೆಳಕಾಗಿ ಕಂಡೀತೆ? ಅದು ಮಾಯವಾಗುತ್ತದೆ. ನಿಷಿದ್ಧಕರ್ಮ, ಕಾಮ್ಯ ಕರ್ಮಗಳ ಸ್ಥಿತಿಯೂ ಅದೇ ರೀತಿ. ಎಲ್ಲ ಕರ್ಮವನ್ನೂ ಫಲತ್ಯಾಗದ ಒರೆಗಲ್ಲಿಗೆ ಉಜ್ಜಿ ನೋಡಬೇಕು. ಅನಾಸಕ್ತಿಪೂರ್ವಕ, ಫಲಾಪೇಕ್ಷೆ ಲವಲೇಶವೂ ಇಲ್ಲದೆ, ಕರ್ಮ ಮಾಡಲು ನನಗೆ ಸಾಧ್ಯವೆ ಎಂಬುದನ್ನು ಮೊದಲು ನೋಡಬೇಕು. ಫಲತ್ಯಾಗವೆ ಕರ್ಮ ಮಾಡುವುದರ ಒರೆಗಲ್ಲು. ಆದುದರಿಂದ ಕಾಮ್ಯಕರ್ಮ ತನಗೆ ತಾನೇ ತ್ಯಾಜ್ಯವಾಗುತ್ತದೆ. ಅದರ ಸಂನ್ಯಾಸವೇ ಯೋಗ್ಯ. ಉಳಿದುದು ಶುದ್ಧ ಸಾತ್ವಿಕ ಕರ್ಮ. ಅದನ್ನು ಅಹಂಕಾರ ಬಿಟ್ಟು ಅನಾಸಕ್ತ ರೀತಿಯಲ್ಲಿ ಮಾಡಬೇಕು. ಕಾಮ್ಯಕರ್ಮವನ್ನು ತ್ಯಜಿಸುವುದೇ ಒಂದು ಕರ್ಮ. ಫಲತ್ಯಾಗದ ಕತ್ತರಿಯನ್ನು ಅಲ್ಲೂ ಆಡಿಸಬೇಕು. ಕಾಮ್ಯಕರ್ಮ ತ್ಯಾಗ ಸಹಜ ವಾಗಬೇಕು.

ಹೀಗೆ ಮೂರು ಸಂಗತಿ ನೋಡಿದೆವು. ಮೊದಲು : ಮಾಡಬೇಕಾದ ಕರ್ಮವನ್ನು ಫಲತ್ಯಾಗಪೂರ್ವಕ ಮಾಡಬೇಕು. ಎರಡನೆಯದು : ರಾಜಸ-ತಾಮಸ ಕರ್ಮ, ಕಾಮ್ಯ-ನಿಷಿದ್ಧಕರ್ಮಗಳು ಫಲತ್ಯಾಗದ ಕತ್ತರಿ ಹಿಡಿದರೆ ತಾವೇ ಕತ್ತರಿಸಿಬೀಳುತ್ತವೆ. ಮೂರನೆಯದು : ಮಾಡಿದ

ತ್ಯಾಗವನ್ನು ಕತ್ತರಿಯ ಬಾಯಿಗೆ ಹಿಡಿದು, ಇಂತಿಷ್ಟು ತ್ಯಾಗಮಾಡಿದೆ ನಾನು ಎಂಬ ಅಹಂಕಾರ ಹುಟ್ಟದಂತೆ ಮಾಡಬೇಕು.

ರಾಜಸ ತಾಮಸ ಕರ್ಮವೇಕೆ ತ್ಯಾಜ್ಯ? ಅವು ಶುದ್ಧವಲ್ಲವಾದುದರಿಂದ. ಶುದ್ಧವಲ್ಲದುದರಿಂದ ಮಾಡುವವನ ಮನಸ್ಸಿಗೇ ಆ ಕರ್ಮಲೇಪ ಬಳಿಯುತ್ತದೆ. ಹೆಚ್ಚು ವಿಚಾರಮಾಡಿದರೆ ಸಾತ್ವಿಕ ಕರ್ಮವೂ ಸದೋಷ ಎನಿಸುತ್ತವೆ. ಕರ್ಮವೆಂಬುದರಲ್ಲೆಲ್ಲ ದೋಷವಿದ್ದೇ ಇದೆ. ರೈತನ ಸ್ವಧರ್ಮವನ್ನೇ ತೆಗೆದುಕೊಳ್ಳಿ. ಅದು ಶುದ್ಧ ಸಾತ್ವಿಕ ಕ್ರಿಯೆ. ಈ ಯಜ್ಞಮಯ ಸ್ವಧರ್ಮರೂಪ ವ್ಯವಸಾಯದಲ್ಲೂ ಹಿಂಸೆಯಿದೆ. ಉಳುವಾಗ ಬೇಸಾಯ ಮಾಡುವಾಗ ಎಷ್ಟೋ ಜೀವ ಜಂತು ಸಾಯುತ್ತವೆ. ಬಾವಿಯ ಬಳಿ ಕೆಸರಾದೀತಲ್ಲ ಎಂದು ಕಲ್ಲು ಚಪ್ಪಡಿ ಹಾಸುವಾಗ ಎಷ್ಟೋ ಪ್ರಾಣಿಗಳು ಸಾಯುತ್ತವೆ. ಬೆಳಿಗ್ಗೆ ಬಾಗಿಲು ತೆಗೆದು ಸೂರ್ಯನ ಬೆಳಕನ್ನು ಮನೆಯೊಳಗೆ ಹರಿಸಿದರೆ ಅಸಂಖ್ಯ ಜಂತು ಸಾಯುತ್ತವೆ. ನಾವು ಶುದ್ಧೀಕರಣವೆಂಬುದು ಮಾರಣಕ್ರಿಯೆಯೇ. ಹೀಗೆ ಸಾತ್ವಿಕ ಸಧರ್ಮರೂಪ ಕ್ರಿಯೆಯಲ್ಲಿ ದೋಷವಿದ್ದರೆ ಹೇಗೆ ಮಾಡಬೇಕು?

ನಾನು ಮೊದಲು ಹೇಳಿದ್ದೆ: ಸಮಸ್ತ ಗುಣಗಳೂ ಇನ್ನೂ ವಿಕಾಸವಾಗಬೇಕಾಗಿವೆ. ಜ್ಞಾನ, ಭಕ್ತಿ, ಸೇವೆ, ಅಹಿಂಸೆ, ಇವುಗಳ ಬಿಂದು ಮಾತ್ರವೆ ಅನುಭವವಾಗಿವೆ. ಸರ್ವಾನುಭವವೂ ಆಗಲೇ ಆಗಿಹೋಗಿಲ್ಲ. ಅನುಭವ ಪಡೆಪಡೆಯುತ್ತ ಜಗತ್ತು ಮುಂಬರಿಯುತ್ತಿದೆ. ಕೃಷಿಕರ್ಮದಲ್ಲಿ ಹಿಂಸೆಯಿದೆ, ಅಹಿಂಸಕ ಜನ ಅದನ್ನು ಮಾಡಬಾರದು ಎಂಬ ವಿಚಾರ ಮಧ್ಯಯುಗದಲ್ಲಿ ಹುಟ್ಟಿತು. ಅಂಥವರು ವ್ಯಾಪಾರ ಮಾಡಲಿ. ಧಾನ್ಯ ಬೆಳೆಯುವುದು ಪಾಪ, ಮಾರುವುದು ಪಾಪವಲ್ಲ. ಹೀಗೆ ಕ್ರಿಯೆಯನ್ನು ಕೈಬಿಟ್ಟರೆ ಹಿತವಾಗದು. ಹಾಗೆ ಕರ್ಮಸಂಕೋಚ ಮಾಡಮಾಡುತ್ತ ನಡೆದರೆ ಕಡೆಗೆ ಆತ್ಮನಾಶವಾದೀತು. ಕರ್ಮವನ್ನು ತಪ್ಪಿಸಿಕೊಳ್ಳಲು ಎಷ್ಟೆಷ್ಟು ವಿಚಾರಮಾಡಿದರೆ ಅಷ್ಟಷ್ಟು ಕರ್ಮದ ಜಾಲ ಬೆಳೆದೀತು. ನಿನ್ನ ಧಾನ್ಯದ ವ್ಯಾಪಾರಕ್ಕಾಗಿ ಯಾರಾದರೂ ಬೇಸಾಯ ಮಾಡಬೇಕೋ ಇಲ್ಲವೋ? ಅದರಲ್ಲಿ ಆಗುವ ಹಿಂಸೆಗೆ ನೀನು ಪಾಲುಗಾರನಲ್ಲವೆ? ಹತ್ತಿ ಬೆಳೆಯುವುದು ಪಾಪವಾದರೆ ಬೆಳೆದುದನ್ನು ಮಾರುವುದೂ ಪಾಪವೇ.

ಹತ್ತಿ ಬೆಳೆಯುವುದು ಸದೋಷವೆಂದು ಅದನ್ನು ಕೈಬಿಡುವುದು ಬುದ್ಧಿದೋಷ. ಎಲ್ಲ ಕರ್ಮಗಳನ್ನೂ ಬಹಿಸ್ಕರಿಸಿ, ಈ ಕರ್ಮ ಬೇಡ, ಆ ಕರ್ಮ ಬೇಡ ಎಂದು ಯಾವುದನ್ನೂ ಮಾಡದಿರುವುದರಲ್ಲಿ ದಯಾಭಾವವಿಲ್ಲ. ದಯೆ ಅಲ್ಲಿ ಅಳಿದಿದೆ. ಚಿಗುರು ತರಿದರೆ ಗಿಡ ಒಣಗದು. ಇನ್ನೂ ಸೊಂಪಾಗಿ ಬೆಳೆದೀತು. ಕ್ರಿಯಾಸಂಕೋಚ ಮಾಡಿದರೆ ಆತ್ಮಸಂಕೋಚವೇ ಆದೀತು.

## ೧೦೩. ಕ್ರಿಯೆಯಿಂದ ಬಿಡಿಸಿಕೊಳ್ಳುವ ನಿಜ ರೀತಿ

ಸಮಸ್ತ ಕ್ರಿಯೆಯೂ ದೋಷಸಹಿತವಾಗಿದ್ದರೆ ಎಲ್ಲಾ ಕ್ರಿಯೆಯನ್ನೂ ಏಕೆ ಬಿಡಬಾರದು ? ಹೀಗಿದೆ ಈ ತೊಡಕು. ಮೊದಲೇ ಒಮ್ಮೆ ಇದಕ್ಕೆ ಉತ್ತರ ಕೊಟ್ಟಾಗಿದೆ. ಸರ್ವ ಕರ್ಮವನ್ನೂ ತ್ಯಜಿಸುವ ಕಲ್ಪನೆಯೇನೋ ಬಹಳ ಸೊಗಸು. ಬಹಳ ಮೋಹಕರ ವಿಚಾರ. ಆದರೆ ಈ ಅಸಂಖ್ಯ ಕರ್ಮವನ್ನು ಬಿಡುವುದು ಹೇಗೆ ? ರಾಜಸ ತಾಮಸ ಕರ್ಮವನ್ನು ಬಿಡುವ ರೀತಿ ಸಾತ್ವಿಕ ಕರ್ಮಕ್ಕೂ ಅನ್ವಯಿಸುತ್ತದೇನು ? ಹಾಗಾದರೆ ಸದೋಷವಾದ ಸಾತ್ವಿಕ ಕರ್ಮವನ್ನು ತಡೆವುದು ಹೇಗೆ ? 'ಸೇಂದ್ರಾಯ ತಕ್ಷಕಾಯ ಸ್ವಾಹಾ' ಎಂದಾಗ ಇಂದ್ರನಂತೂ ಅಮರ, ಆದುದರಿಂದ ಅವನೂ ಸಾಯದೆ ಅವನ ಜೊತೆಗೆ ತಕ್ಷಕನೂ ಸಾಯದೆ ಗಟ್ಟಿಯಾಗಿ ಉಳಿದಾನು ! ಇದೊಂದು ವಿಚಿತ್ರ. ಸಾತ್ವಿಕ ಕರ್ಮದಲ್ಲಿ ಪುಣ್ಯವೂ ಇದೆ, ಸ್ವಲ್ಪ ದೋಷವೂ ಇದೆ. ಸ್ವಲ್ಪ ದೋಷವಿದೆಯೆಂದು ಪುಣ್ಯವನ್ನು ಬಲಿ ಕೊಟ್ಟರೆ ಪುಣ್ಯಕ್ರಿಯೆಯೇನೂ ಸಾಯದು; ಅದಕ್ಕೆ ಜಿಗಟಿದೆ. ದೋಷಕ್ರಿಯೆ ಮಾತ್ರ ಹೆಚ್ಚಾದೀತು. ಈ ಬಗೆಯ ವಿವೇಕಹೀನ ತ್ಯಾಗದಿಂದ ಪುಣ್ಯರೂಪದ ಇಂದ್ರನಂತೂ ಸಾಯುವುದಿಲ್ಲ; ಸಾಯ ಬೇಕಾದ ದೋಷರೂಪ ತಕ್ಷಕನೂ ಸಾಯುವುದಿಲ್ಲ. ಹೀಗಾದರೆ ಅದನ್ನು ತ್ಯಜಿಸುವುದು ಹೇಗೆ ? ಬೆಕ್ಕು ಹಿಂಸೆ ಮಾಡುತ್ತವೆಂದು ಅದನ್ನು ಓಡಿಸಿದರೆ ಇಲಿಗಳು ಹಿಂಸೆ ಮಾಡಿಯಾವು. ಹಾವು ಹಿಂಸೆ ಮಾಡುತ್ತದೆಂದು ಅದನ್ನು ಓಡಿಸಿದರೆ ಹೊಲದಲ್ಲಿ ನೂರಾರು ಜಂತುಗಳ ಹಿಂಸೆ ನಡೆದೀತು. ಹೊಲದಲ್ಲಿ ಬೆಳೆ ನಾಶವಾದರೆ ಸಾವಿರಾರು ಜನ ಸತ್ತಾರು. ಅಂತೇ ವಿವೇಕಯುಕ್ತ ತ್ಯಾಗ ಬೇಕು.

ಮತ್ಸ್ಯೇಂದ್ರನಾಥರು ಗೋರಖನಾಥರಿಗೆ ಹೇಳಿದರು : 'ಈ ಹುಡುಗನನ್ನು ಮಡಿಮಾಡಿಸಿಕೊಂಡು ಬಾ.' ಆತ ಅವನನ್ನು ಚೆನ್ನಾಗಿ ಬಂಡೆಗೆ ಅಪ್ಪಳಿಸಿ ಬೇಲಿಯ ಮೇಲೆ ಹರವಿದ. 'ಮಡಿಮಾಡಿಸಿ ತಂದೆಯಾ ಹುಡುಗನನ್ನು' ಎಂದು ಮತ್ಸ್ಯೇಂದ್ರನಾಥರು ಕೇಳಿದರು. ಶಿಷ್ಯ ತಾನು ಮಾಡಿದುದನ್ನು ಹೇಳಿದ. ಹುಡುಗನಿಗೆ ಮಡಿಮಾಡಿಸುವುದು ಹೀಗೆಯೆ? ಬಟ್ಟೆ ಮಡಿಮಾಡುವುದೂ, ಮನುಷ್ಯರನ್ನು ಮಡಿಮಾಡುವುದೂ ಒಂದೇ ಬಗೆಯಲ್ಲ. ಅವೆರಡರಲ್ಲಿ ಭೇದವಿದೆ. ಹಾಗೇ ರಾಜಸ ತಾಮಸ ಕರ್ಮತ್ಯಾಗಕ್ಕೂ ಸಾತ್ವಿಕ ಕರ್ಮತ್ಯಾಗಕ್ಕೂ ಭೇದವಿದೆ. ಸಾತ್ವಿಕ ಕರ್ಮವನ್ನು ಬಿಡುವ ರೀತಿ ಬೇರೆ.

ವಿವೇಕಹೀನ ಕರ್ಮವೆಸಗಿದರೆ ಅದು ಹೆಡೆಮರಳಿ ಕೂತರೂ ಕೂತೀತು.

'ತ್ಯಾಗದ ಹೊಟ್ಟೆಲಿ ಭೋಗವು ನೊಳೆತರೆ
ದೇವನೆ ನಾನು, ಗೈವೆನು ಏನು ?' *

ಎನ್ನುತ್ತಾರೆ ತುಕಾರಾಮರು. ಅಲ್ಪವಾದುದೊಂದು ತ್ಯಾಗಮಾಡಲು ಹೋದರೆ ದೊಡ್ಡದೊಂದು ಭೋಗವೆ ಎದೆಯಮೇಲೆ ಬಂದು ಕೂತುಕೊಳ್ಳುತ್ತದೆ. ಆಗ ಆ ಅಲ್ಪತ್ಯಾಗ ಮಿಥ್ಯೆಯಾಗುತ್ತದೆ. ಸೂಕ್ಷ್ಮವಾದ ತ್ಯಾಗವನ್ನು ಪೂರ್ಣಗೊಳಿಸಲು ದೊಡ್ಡದೊಡ್ಡ ಇಂದ್ರಭವನ ಕಟ್ಟುತ್ತೇವೆ. ಅದರ ಬದಲು ಚಿಕ್ಕ ಗುಡಿಸಲೇ ಒಳಿತು ಅಷ್ಟೇ ಸಾಕು. ಲಂಗೋಟಿ ತೊಟ್ಟು ಸರ್ವವಿಲಾಸವನ್ನೂ ಸುತ್ತಲೂ ಹರಡಿಕೊಳ್ಳುವುದಕ್ಕಿಂತ ಪೈರಣು ಅಂಗಿ ಲೇಸು. ಆದುದರಿಂದ ಸಾತ್ವಿಕ ಕರ್ಮಗಳ ತ್ಯಾಗದ ರೀತಿಯನ್ನು ಪ್ರತ್ಯೇಕವಾಗಿ ಹೇಳಿದಾನೆ ಭಗವಂತ. ಎಲ್ಲ ಸಾತ್ವಿಕ ಕರ್ಮವನ್ನೂ ಮಾಡಬೇಕು; ಅದರ ಫಲವನ್ನು ಮಾತ್ರ ಬಿಡಬೇಕು ಕೆಲವು ಕರ್ಮ ಸಮೂಲವಾಗಿ ಬಿಡತಕ್ಕವು. ಕೆಲವಕ್ಕೆ ಫಲ ಬಿಟ್ಟರಾಯಿತು. ಮೈಮೇಲೆ ಹೊಲಸು ಬಿದ್ದರೆ ತೊಳೆಯಲು ಸಾಧ್ಯ ಸಹಜವಾಗಿಯೆ ಮೈಬಣ್ಣ ಕಪ್ಪಿದ್ದರೆ ಸುಣ್ಣ ಬಳಿಯಲಾದೀತೆ? ಆ ಕಪ್ಪು ಹಾಗೇ ಇರಲಿ. ಅದನ್ನು ನೋಡಲೇಬೇಡ. ಅದನ್ನು ಅಮಂಗಳವೆನ್ನಬೇಡ.

---

* ತ್ಯಾಗೇ ಭೋಗ ಮಾಝ್ಯಾ ಯೇತೀಲ ಅಂತರಾ
ಮಗ ಮೀ ದಾತಾರಾ ಕಾಯ ಕರೂಂ ॥

ಒಬ್ಬ ಮನುಷ್ಯನಿದ್ದ. ಅವನಿಗೆ ತನ್ನ ಮನೆ ಅಮಂಗಳವೆನಿಸಿ ಅದನ್ನು ಬಿಟ್ಟು ಹಳ್ಳಿಗೆ ಹೋದ. ಅಲ್ಲೂ ಅವನಿಗೆ ಹೊಲಸೆನಿಸಿತು. ಅಡವಿಗೆ ಹೋದ. ಅಲ್ಲೊಂದು ಮಾವಿನಮರದ ಕೆಳಗೆ ಕುಳಿತ. ಮೇಲಿಂದ ಪಕ್ಷಿಯೊಂದು ಅವನ ತಲೆಯಮೇಲೆ ಹೇಸಿಗೆ ಮಾಡಿತು. ಈ ಅಡವಿಯೂ ಅಮಂಗಳವೆಂದು ಹೊಳೆಗೆ ಹೋಗಿ ಕುಳಿತ. ಅಲ್ಲಿ ದೊಡ್ಡ ಮೀನು ಚಿಕ್ಕ ಮೀನನ್ನು ತಿನ್ನುತ್ತಿತ್ತು. ಇದನ್ನು ನೋಡಿಯಂತೂ ಅವನಿಗೆ ಅಸಹ್ಯ ವಾಯಿತು. ಸೃಷ್ಟಿಯೆಲ್ಲವೂ ಅಮಂಗಳ, ಇಲ್ಲಿರದೆ ಪ್ರಾಣಬಿಡುವುದೇ ಲೇಸು ಎಂದು ಚಿತೆ ಮಾಡಿದ. ಆಗೊಬ್ಬ ಗೃಹಸ್ಥ ಬಂದು ಹೀಗೇಕೆ ಪ್ರಾಣ ಬಿಡುತ್ತೀ ಎಂದ. 'ಈ ಜಗತ್ತು ಅಮಂಗಳವಾದುದರಿಂದ.' 'ನಿನ್ನ ಅಮೇಧ್ಯಮಯ ಶರೀರ, ಅದರ ಕೊಬ್ಬು, ಇಲ್ಲಿ ಸುಟ್ಟರೆ ಎಷ್ಟು ಹೊಲಸಾದೀತು. ನಾವು ಸಮೀಪದಲ್ಲೇ ಇದ್ದೇವೆ. ನಾವೆಲ್ಲಿ ಹೋಗೋಣ? ಒಂದು ಕೂದಲು ಸುಟ್ಟರೆ ಎಷ್ಟೋ ಹೊಲಸು ನಾತ. ನಿನ್ನ ಇಡೀ ಕೊಬ್ಬು ಸುಡಬೇಕಲ್ಲ. ಎಷ್ಟು ದುರ್ಗಂಧವಾದೀತೋ ಯೋಚಿಸು' ಎಂದ ಆ ಗೃಹಸ್ಥ. ಅದಕ್ಕೆ ಇವನು ಸಿಟ್ಟಾಗಿ 'ಈ ಲೋಕದಲ್ಲಿ ಬದುಕಲಿಕ್ಕೂ ದಾರಿಯಿಲ್ಲ, ಸಾಯಲಿಕ್ಕೂ ಇಲ್ಲ ಏನು ಮಾಡಬೇಕು?' ಎಂದ.

ಅಮಂಗಳ ಅಮಂಗಳ ಎಂದು ಎಲ್ಲವನ್ನೂ ಕೈಬಿಟ್ಟರೆ ನಡೆಯದು. ಚಿಕ್ಕ ಕರ್ಮವನ್ನು ಬಿಟ್ಟರೆ ದೊಡ್ಡ ಗುಡ್ಡವೇ ಬಂದು ಕುಳಿತೀತು. ಹೊರಗಿನಿಂದ ಬಿಟ್ಟರೆ ಬಿಡುವಂಥದಲ್ಲ ಕರ್ಮದ ಸ್ವಭಾವ ಓಘದಲ್ಲಿ ಸಹಜ ಪ್ರಾಪ್ತವಾದ ಕರ್ಮದ ವಿರುದ್ಧ ಹೋಗಲು ತನ್ನ ಶಕ್ತಿಯನ್ನು ಉಪಯೋಗಿಸಿದರೆ. ಪ್ರವಾಹಕ್ಕೆ ಇದಿರಾಗಿ ಹೋಗಬಯಸಿದರೆ, ಕಡೆಗೆ ಅವನು ಸೋತು ಪ್ರವಾಹದಲ್ಲಿ ಕೊಚ್ಚಿಹೋದಾನು. ಪ್ರವಾಹಕ್ಕೆ ಅನುಕೂಲವಾದ ಕ್ರಿಯೆಮಾಡಿ ತನ್ನ ತಾರಣೋಪಾಯ ಹುಡುಕಬೇಕು. ಅದರಿಂದ ಮನದ ಮೇಲಿನ ಲೇಪ ಕಡಮೆಯಾದೀತು. ಚಿತ್ತ ಶುದ್ಧ ವಾದೀತು. ಮುಂದೆ ಕ್ರಿಯೆ ತಾನೇ ಸಡಲಿಬಿಟ್ಟೀತು. ಕರ್ಮತ್ಯಾಗ ವಿಲ್ಲದೆಯೆ ಕ್ರಿಯೆ ಜಾರೀತು. ಕರ್ಮವಂತೂ ಬಿಡುವುದೇ ಇಲ್ಲ. ಕ್ರಿಯೆ ಬಿದ್ದುಹೋದೀತು.

ಕ್ರಿಯೆ ಬೇರೆ, ಕರ್ಮ ಬೇರೆ. ಭೇದವಿದೆ. ಉದಾಹರಣಾರ್ಥ: ಒಂದು ಕಡೆ ಬಹಳ ಗದ್ದಲವಿದೆ, ಅದನ್ನು ನಿಲ್ಲಿಸಬೇಕು. ಒಬ್ಬ ಸಿಪಾಯಿ ಬಂದು 'ನಿಲ್ಲಿಸಿ' ಎಂದು ತಾನೇ ಗಟ್ಟಿಯಾಗಿ ಕೂಗುತ್ತಾನೆ. ಅಲ್ಲಿಯ ಮಾತಿನ ಗದ್ದಲ ನಿಲ್ಲಿಸಲು ಗಟ್ಟಿಯಾಗಿ ಕೂಗುವ ತೀವ್ರ ಕರ್ಮವನ್ನು ಅವನು ಮಾಡಬೇಕಾಯಿತು. ಇನ್ನೊಬ್ಬ ಬಂದು ನಿಂತು ಸುಮ್ಮನೆ ಬೊಟ್ಟುಮಾಡಿಯಾನು. ಅಷ್ಟಕ್ಕೇ ಜನ ಸುಮ್ಮನಾದಾರು. ಮೂರನೆ ಯವನು ಸುಮ್ಮನೆ ಅಲ್ಲಿ ಬಂದು ಕಾಣಿಸಿಕೊಂಡರಾಯಿತು. ಒಬ್ಬನದು ತೀವ್ರಕ್ರಿಯೆ, ಇನ್ನೊಬ್ಬನದು ಸೌಮ್ಯಕ್ರಿಯೆ, ಮೂರನೆಯವನದು ಸೂಕ್ಷ್ಮಕ್ರಿಯೆ. ಕ್ರಿಯೆ ಕಡಮೆಯಾಗುತ್ತ ಬಂತು. ಆದರೆ ಜನರನ್ನು ಸುಮ್ಮನಾಗಿಸುವ ಕರ್ಮ ಮಾತ್ರ ಸಮ. ಚಿತ್ತಶುದ್ಧಿ ಹೆಚ್ಚಾದ ಹಾಗೆಲ್ಲ ಕ್ರಿಯೆಯ ತೀವ್ರತೆ ಕಡಮೆಯಾಗುತ್ತದೆ. ತೀವ್ರದಿಂದ ಸೌಮ್ಯ, ಸೌಮ್ಯದಿಂದ ಸೂಕ್ಷ್ಮ, ಸೂಕ್ಷ್ಮದಿಂದ ಶೂನ್ಯ-ಆದೀತು. ಕರ್ಮ ಬೇರೆ, ಕ್ರಿಯೆ ಬೇರೆ. ಕರ್ತನಿಗೆ ಇಷ್ಟವಾದುದೇ ಕರ್ಮ. ಇದು ಅದರ ವ್ಯಾಖ್ಯೆ. ಕರ್ಮಕ್ಕೆ ಪ್ರಥಮಾ ದ್ವಿತೀಯಾ ವಿಭಕ್ತಿ ಇದೆ. ಕ್ರಿಯೆಗೆ ಒಂದು ಸ್ವತಂತ್ರ ಕ್ರಿಯಾಪದವೇ ಬೇಕು. ಕರ್ಮ ಬೇರೆ, ಕ್ರಿಯೆ ಬೇರೆ ಎಂಬುದನ್ನು ತಿಳಿದುಕೊ. ಸಿಟ್ಟು ಬಂದರೆ ಒಬ್ಬ ಬಹಳ ಕೂಗುತ್ತಾನೆ, ಇನ್ನೊಬ್ಬ ಮಾತೇ ಆಡ. ಜ್ಞಾನಿ ಲೇಶಮಾತ್ರವೂ ಕ್ರಿಯೆ ಮಾಡ. ಆದರೆ ಅನಂತ ಕರ್ಮ ಮಾಡುತ್ತಾನೆ. ಅವನ ಅಸ್ತಿತ್ವವೇ ಅಪಾರ ಲೋಕಸಂಗ್ರಹ ಮಾಡುತ್ತದೆ. ಜ್ಞಾನಿ ಇದ್ದರೆ ಸಾಕು. ಅವನ ಕೈಕಾಲು ಕೆಲಸ ಮಾಡ ದಿದ್ದರೂ ಅವನು ಕೆಲಸ ಮಾಡುತ್ತಾನೆ. ಕ್ರಿಯೆ ಸೂಕ್ಷ್ಮವಾದಷ್ಟೂ ಕರ್ಮ ಹೆಚ್ಚಾಗುತ್ತದೆ. ವಿಚಾರದ ಈ ಧಾರೆ ಮುಂಬರಿದರೆ, ಚಿತ್ತ ಪರಿಪೂರ್ಣ ಶುದ್ಧವಾದರೆ, ಕಡೆಗೆ ಕ್ರಿಯೆ ಶೂನ್ಯವಾಗಿ ಅನಂತ ಕರ್ಮ ನಡೆಯುತ್ತ ಲಿದ್ದೀತು ಎನ್ನಬಹುದು. ಮೊದಲು ತೀವ್ರ, ತೀವ್ರದಿಂದ ಸೌಮ್ಯ, ಸೌಮ್ಯ ದಿಂದ ಸೂಕ್ಷ್ಮ, ಸೂಕ್ಷ್ಮದಿಂದ ಶೂನ್ಯ. ಹೀಗೆ ಈ ಓಘದಿಂದಲೆ ಕ್ರಿಯಾ ಶೂನ್ಯತ್ವ ಲಭಿಸೀತು. ಆಮೇಲೆ ಅನಂತಕರ್ಮ ತಾನಾಗಿಯೇ ಆದೀತು.

ಮೇಲೆ ಮೇಲೆ ಕರ್ಮವನ್ನು ದೂರ ಮಾಡಿದರೆ ದೂರವಾಗದು. ನಿಷ್ಕಾಮತಾಪೂರ್ವಕವಾಗಿ ಮಾಡುತ್ತ ಮೆಲ್ಲಮೆಲ್ಲನೆ ಅದರ ಅನುಭವ

ಬಂದೀತು. ಬ್ರೌನಿಂಗ್ ಕವಿ—'ಮೋಸಗಾರ ಪೋಪ್' ಎಂಬ ಕವಿತೆ ಬರೆದಿದಾನೆ. ಆ ಪೋಪನಿಗೆ ಒಬ್ಬ ಹೇಳಿದ—'ನೀನು ನಟನೆ ಮಾಡುತ್ತೀಯೇಕೆ? ಈ ಕಪನಿಯೇಕೆ? ವೇಷವೆಲ್ಲ ಏಕೆ? ಈ ಗಂಭೀರ ಮುದ್ರೆ ಏಕೆ?' ಆಗ ಅವನು ಹೇಳಿದ—'ನಾನೇಕೆ ಮಾಡುತ್ತೇನೋ ಕೇಳು. ಈ ನಾಟಕ ಮಾಡಮಾಡುತ್ತ ತಿಳಿಯದೆಯೆ ಶ್ರದ್ಧಾಸ್ಪರ್ಶವಾಗುವ ಸಂಭವವಿದೆ' ಅಂತೇ ನಿಷ್ಕಾಮಕ್ರಿಯೆ ಮಾಡುತ್ತಿರಬೇಕು. ಮೆಲ್ಲಮೆಲ್ಲನೆ ನಿಷ್ಕ್ರಿಯತ್ವ ಮೈಗೂಡೀತು.

## ೧೦೪. ಸಾಧಕನಿಗೆ ಸ್ವಧರ್ಮದ ಉಪಾಯ

ಸಾರಾಂಶ—ರಾಜಸ ತಾಮಸ ಕರ್ಮಗಳನ್ನು ಪೂರ್ತಿಯಾಗಿ ಬಿಡಬೇಕು. ಸಾತ್ವಿಕ ಕರ್ಮ ಮಾಡಬೇಕು. ಸಹಜ ಪ್ರಾಪ್ತವಾದ ಸಾತ್ವಿಕ ಕರ್ಮ ಸದೋಷವಾದರೂ ಅದನ್ನು ಬಿಡಬಾರದು ಎಂಬ ವಿವೇಕ ಬೇಕು. ದೋಷವಿದ್ದರೆ ಇರಲಿ. ಅದನ್ನು ನಿವಾರಿಸಹೋದರೆ ಇನ್ನೂ ಅಸಂಖ್ಯ ದೋಷ ಬಂದು ಬಿದ್ದಾವು. ನಿನಗೆ ಮೊಂಡಮೂಗು ಇದ್ದರೆ ಹಾಗೇ ಇರಲಿ. ಅದನ್ನು ಕುಯಿದು ಅಂದವಾಗಿ ಮಾಡಬಯಸಿದರೆ ಮತ್ತಷ್ಟು ವಿಕಾರವಾದೀತು ಇದ್ದಷ್ಟೇ ಚೆನ್ನು. ಸದೋಷವಾದರೂ ಸಾತ್ವಿಕ ಕರ್ಮ ಓಘಪ್ರಾಪ್ತವಾದುದರಿಂದ ಬಿಡಬಾರದು. ಅದನ್ನು ಮಾಡಬೇಕು. ಆದರೆ ಅದರ ಫಲವನ್ನು ಬಿಡಬೇಕು.

ಇನ್ನೊಂದು ಮಾತು ಹೇಳಬೇಕು. ಓಘಪ್ರಾಪ್ತವಲ್ಲದ ಕರ್ಮವನ್ನು ಎಷ್ಟು ಚೆನ್ನಾಗಿ ಮಾಡಬಲ್ಲೆ ಎಂದು ನಿನಗನಿಸಿದರೂ ಅದನ್ನು ಮಾಡಬೇಡ. ಓಘದಲ್ಲಿ ಬಂದುದಷ್ಟೇ ಸಾಕು. ಪ್ರಯಾಸಪಟ್ಟು ಮತ್ತೊಂದನ್ನು ಮೈಮೇಲೆ ಹಾಕಿಕೊಳ್ಳಬೇಡ. ಪಟಾಟೋಪಮಾಡಿ ನಡಸಬೇಕಾದ ಕರ್ಮ ಎಷ್ಟು ಚೆಂದವಿದ್ದರೂ ದೂರವಿರಲಿ. ಅದರ ಮೋಹ ಬೇಡ. ಓಘಪ್ರಾಪ್ತವಾದುದರಲ್ಲಿಯೆ ಫಲತ್ಯಾಗ ಸಂಭವ. ಈ ಕರ್ಮ ಲೇಸು, ಆ ಕರ್ಮ ಲೇಸು ಎಂಬ ಲೋಭದಿಂದ ಎಲ್ಲ ಕಡೆಗೆ ಹಾರಾಡಿದರೆ ಫಲತ್ಯಾಗವೆಲ್ಲಿ? ಬಾಳು ಪೂರಾ ಛಿದ್ರಛಿದ್ರವಾಗಿ ಹೋದೀತು. ಫಲಾಶೆಯಿಂದಲೇ ಆದರೂ ಪರಧರ್ಮರೂಪ ಕರ್ಮ ಮಾಡಿದರೆ ಫಲ ಕೈಗೆ

ಸಿಗದು. ಬಾಳಿನಲ್ಲಿ ಸ್ಥಿರತೆ ಕೈಗೂಡದು. ಆ ಕರ್ಮದ ಆಸಕ್ತಿ ಚಿತ್ತದ ಮೇಲೆ ಅಮರೀತು. ಸಾತ್ವಿಕ ಕರ್ಮದ ಆಸೆಯೂ ಸಹ ಕೂಡದು. ಅದನ್ನು ದೂರಮಾಡಬೇಕು. ನಾನಾ ಬಗೆಯ ಸಾತ್ವಿಕ ಕರ್ಮಗಳನ್ನು ಮಾಡಲು ಬಯಸಿದರೆ ಅದರಲ್ಲೂ ರಾಜಸತೆ, ತಾಮಸತೆ ಹುಟ್ಟುತ್ತವೆ. ಆದುದರಿಂದ ನಿನಗೆ ಓಘಪ್ರಾಪ್ತವಾಗಿ ಬಂದ ಸಾತ್ವಿಕ ಕರ್ಮವನ್ನಷ್ಟೆ ನೀನು ಮಾಡು.

ಸ್ವಧರ್ಮದಲ್ಲಿ ಸ್ವದೇಶಿಧರ್ಮ, ಸ್ವಜಾತಿಧರ್ಮ, ಸ್ವಕಾಲೀನ ಧರ್ಮಗಳು ಬರುತ್ತವೆ. ಈ ಮೂರರಿಂದ ಸ್ವಧರ್ಮವಾಗುತ್ತದೆ. ನನ್ನ ವೃತ್ತಿಗೆ ಯಾವುದು ಅನುಕೂಲ, ಅನುರೂಪ; ಯಾವ ಕರ್ತವ್ಯ ನನಗೆ ಪ್ರಾಪ್ತವಾಗಿದೆ, ಈ ಎಲ್ಲ ಸ್ವಧರ್ಮವೂ ತಾನೇ ತಿಳಿಯುತ್ತದೆ. ನಿನ್ನಲ್ಲಿ ನಿನ್ನ – ತನವೇನೋ ಇದೆ ಎಂತಲೇ ನೀನು ನೀನಾಗಿದೀಯೆ. ಪ್ರತಿಯೊಬ್ಬರಲ್ಲೂ ಏನೋ ವಿಶೇಷವಿರುತ್ತದೆ. ಕುರಿಯ ವಿಕಾಸ ಕುರಿಯಾಗಿರುವುದರಲ್ಲೇ. ಕುರಿಯಾಗಿದ್ದೇ ಅದು ವಿಕಾಸಮಾಡಿಕೊಳ್ಳಬೇಕು. ಕುರಿ ತಾನು ಹಸುವಾಗುತ್ತೇನೆ ಎಂದರೆ ಸಾಧ್ಯವಿಲ್ಲ. ಸ್ವಯಂಪ್ರಾಪ್ತವಾದ ಕುರಿತನವನ್ನು ತ್ಯಾಗಮಾಡಲಿಕ್ಕೆ ಬಾರದು. ಅದಕ್ಕಾಗಿ ದೇಹವನ್ನೆ ಬಿಡಬೇಕಾದೀತು. ಹೊಸ ಧರ್ಮಕ್ಕಾಗಿ ಹೊಸ ಜನ್ಮವನ್ನೆ ತಳೆಯಬೇಕಾದೀತು. ಈ ಜನ್ಮದಲ್ಲಿ ಕುರಿತನವೇ ಪವಿತ್ರ. ಎತ್ತು – ಕಪ್ಪೆಯ ಕತೆ ಇದೆಯಲ್ಲ. ಕಪ್ಪೆಯ ಮೈಯುಬ್ಬರಕ್ಕೆ ಮಿತಿಯಿದೆ. ಅದು ಎತ್ತಿನಂತೆ ಆಗಬೇಕೆಂದರೆ ಸತ್ತೀತು. ಮತ್ತೊಂದರ ರೂಪವನ್ನು ನಕಲು ಮಾಡುವುದು ಯೋಗ್ಯವಲ್ಲ. ಅಂತೆಯೆ ಪರಧರ್ಮ ಭಯಾವಹವೆಂದು ಹೇಳಿದೆ.

ಸ್ವಧರ್ಮದಲ್ಲೂ ಎರಡು ವಿಭಾಗ. ಒಂದು ಬದಲಾಗುವ ವಿಭಾಗ, ಇನ್ನೊಂದು ಬದಲಾಗದುದು. ಇವೊತ್ತಿನ ನಾನು ನಾಳೆ ಇಲ್ಲ. ನಾಳೆಯದು ನಾಡಿದ್ದಿಲ್ಲ. ದಿನವೂ ಬದಲಾಗುತ್ತಲೇ ಇದೇನೆ. ಎಳೆಯ ಮಗುವಾಗಿದ್ದಾಗ ನನ್ನ ಸ್ವಧರ್ಮ ಕೇವಲ ಸಂವರ್ಧನ. ತಾರುಣ್ಯದಲ್ಲಿ ನನ್ನೊಳಗೆ ಕರ್ಮಶಕ್ತಿ ತುಂಬಿರುವುದರಿಂದ ಸಮಾಜಸೇವೆ. ಪ್ರೌಢದಶೆಯಲ್ಲಿ ನನ್ನ ಜ್ಞಾನದ ಲಾಭ ಇತರರಿಗಾದೀತು. ಹೀಗೆ ಸ್ವಧರ್ಮ ಬದಲುತ್ತದೆ. ಬದಲಾಗದುದೂ

ಇದೆ. ಇದಕ್ಕೇ ಪೂರ್ವಕಾಲದ ಶಾಸ್ತ್ರಸಂಜ್ಞೆ ಕೊಟ್ಟರೆ – ಮನುಷ್ಯನಿಗೆ ವರ್ಣಧರ್ಮವೂ ಇದೆ, ಆಶ್ರಮಧರ್ಮವೂ ಇದೆ. ವರ್ಣಧರ್ಮ ಬದಲಾಗದು. ಆಶ್ರಮಧರ್ಮ ಬದಲಾಗುತ್ತದೆ. ಹೇಗೆಂದರೆ ನಾನು ಬ್ರಹ್ಮ ಚಾರಿತ್ವವನ್ನು ಸಾರ್ಥಕಗೊಳಿಸಿ ಗೃಹಸ್ಥನಾಗುತ್ತೇನೆ. ಮುಂದೆ ವಾನಪ್ರಸ್ಥ, ಸಂನ್ಯಾಸಿ ಆಗುತ್ತೇನೆ. ಆಶ್ರಮಧರ್ಮ ಹೀಗೆ ಬದಲಾದರೂ ವರ್ಣಧರ್ಮ ಬದಲಾಗದು. ನನ್ನ ನೈಸರ್ಗಿಕ ಮರ್ಯಾದೆ ಹೇಗೆ ತೊಲಗೀತು? ಆ ಪ್ರಯತ್ನ ಮಿಥ್ಯೆ. ನಿನ್ನೊಳಗಿನ ನಿನ್ನತನವನ್ನು ಬಿಡಲು ಆಗದು. ಈ ಕಲ್ಪನೆಯ ಯೋಜನೆ ವರ್ಣಧರ್ಮ. ವರ್ಣಧರ್ಮದ ಕಲ್ಪನೆ ಸವಿ. ಆದರೆ ಈ ವರ್ಣಧರ್ಮ ಅಷ್ಟು ದೃಢವೆ? ಕುರಿಗೆ ಕುರಿತನ, ಹಸುವಿಗೆ ಹಸುತನ ಇದ್ದಂತೆ ಬ್ರಾಹ್ಮಣನ ಬ್ರಾಹ್ಮಣತ್ವ, ಕ್ಷತ್ರಿಯನ ಕ್ಷತ್ರಿಯತ್ವ ಇದೆಯೆ? ವರ್ಣಧರ್ಮ ಅಷ್ಟು ಗಟ್ಟಿಯಲ್ಲ; ಒಪ್ಪುತ್ತೇನೆ. ಈ ಮಾತನ್ನು ಸ್ವಾರಸ್ಯವಾಗಿ ಅರ್ಥಮಾಡಬೇಕು. ಸಾಮಾಜಿಕ ವ್ಯವಸ್ಥೆಗಾಗಿ ಮಾಡಿದ ಯುಕ್ತಿ ವರ್ಣಧರ್ಮ ಎಂದುಕೊಂಡರೆ ಅದರಲ್ಲಿ ಅಪವಾದ ಸಿದ್ಧ. ಅಪವಾದವನ್ನು ಲೆಕ್ಕಹಿಡಿದೇ ನಡೆಯಬೇಕು. ಅದನ್ನೂ ಲೆಕ್ಕ ಹಿಡಿದಿದೆ ಗೀತೆ. ಈ ಎರಡೂ ಬಗೆಯ ಧರ್ಮವನ್ನು ಕಂಡುಕೊಂಡು ಅವಾಂತರ ಧರ್ಮ ಎಷ್ಟೇ ಅಂದ, ಆಕರ್ಷಕ ಆಗಿದ್ದರೂ ಅದನ್ನು ಬಿಡು ಎಂದಿದೆ.

## ೧೦೫. ಫಲತ್ಯಾಗದ ಫಲಿತಾರ್ಥ

ಫಲತ್ಯಾಗದ ಕಲ್ಪನೆಯನ್ನು ಅರಳಿಸುತ್ತ ಬಂದಿದೇವಲ್ಲ, ಅದರಲ್ಲಿ ಮುಂದೆ ಹೀಗೆ ಬಂತು ಅರ್ಥ :

೧. ರಾಜಸ ತಾಮಸ ಕರ್ಮಗಳ ಸರ್ವಸ್ವೀ ತ್ಯಾಗ.

೨. ಆ ತ್ಯಾಗದ ಫಲತ್ಯಾಗ. ಅದರಲ್ಲೂ ಅಹಂಕಾರ ಕೂಡದು.

೩. ಸಾತ್ವಿಕ ಕರ್ಮವನ್ನು ಸ್ವರೂಪತಃ ತ್ಯಾಗಮಾಡದೆ ಫಲತಃ ತ್ಯಾಗಮಾಡಬೇಕು.

೪. ಫಲತ್ಯಾಗಪೂರ್ವಕ ಮಾಡಬೇಕಾದ ಸಾತ್ವಿಕ ಕರ್ಮವನ್ನು ಅದು ಸದೋಷವಾಗಿದ್ದರೂ ಮಾಡಬೇಕು.

೫. ಸತತ ಫಲತ್ಯಾಗಪೂರ್ವಕ ಸಾತ್ವಿಕ ಕರ್ಮವನ್ನು ಮಾಡುತ್ತ ಚಿತ್ತಶುದ್ಧಿಯಾದೀತು. ತೀವ್ರದಿಂದ ಸೌಮ್ಯ, ಸೌಮ್ಯ ದಿಂದ ಸೂಕ್ಷ್ಮ, ಸೂಕ್ಷ್ಮದಿಂದ ಶೂನ್ಯ. ಹೀಗೆ ಸರ್ವಕ್ರಿಯೆಯೂ ಸಡಲಿಬಿದ್ದೀತು.

೬. ಕ್ರಿಯೆ ಜಾರೀತು, ಕರ್ಮ–ಲೋಕಸಂಗ್ರಹ ಕರ್ಮ–ನಡದೇ ಇದ್ದೀತು.

೭. ಸಹಜಪ್ರಾಪ್ತವಾದ ಸಾತ್ವಿಕ ಕರ್ಮವನ್ನೇ ಮಾಡಬೇಕು. ಸಹಜಪ್ರಾಪ್ತವಲ್ಲದುದು ಎಷ್ಟೇ ಸೊಗಸಾದರೂ ಅದನ್ನು ದೂರ ಇಡಬೇಕು. ಅದರ ಮೋಹ ಬೇಡ.

೮. ಸಹಜಪ್ರಾಪ್ತ ಸ್ವಧರ್ಮದಲ್ಲೂ ಎರಡು ಬಗೆ : ಬದಲು ವುದು, ಬದಲಾಗದುದು. ವರ್ಣಧರ್ಮ ಬದಲಾಗದು. ಆಶ್ರಮ ಧರ್ಮ ಬದಲುತ್ತದೆ. ಬದಲುವ ಸ್ವಧರ್ಮ ಬದಲಾಗುತ್ತ ಇರಬೇಕು. ಅದರಿಂದ ಪ್ರಕೃತಿ ವಿಶುದ್ಧವಾಗುತ್ತದೆ.

ಪ್ರಕೃತಿ ಸದಾ ಹರಿಯುತ್ತಿರಬೇಕು. ಹೊಳೆ ಹರಿಯದೆ ಮಲವಾದರೆ ದುರ್ಗಂಧ ಬರುತ್ತದೆ. ಆಶ್ರಮಧರ್ಮವೂ ಹೀಗೆಯೇ. ಮನುಷ್ಯ ಮೊಟ್ಟ ಮೊದಲು ಕುಟುಂಬವನ್ನು ಸ್ವೀಕರಿಸುತ್ತಾನೆ. ತನ್ನ ಸ್ವಂತ ವಿಕಾಸಕ್ಕಾಗಿ ಕುಟುಂಬದ ಬಂಧನವನ್ನು ತನಗೇ ತೊಡಿಸಿಕೊಳ್ಳುತ್ತಾನೆ. ಅದರಲ್ಲಿ ಬಹು ವಿಧ ಅನುಭವ ಆಗುತ್ತದೆ. ಆದರೆ ಕುಟುಂಬದಲ್ಲೇ ಸ್ಥಿರವಾಗಿ ನೆಟ್ಟು ಕೊಂಡು ಕುಳಿತರೆ ವಿನಾಶವೇ. ಮೊದಲು ಧರ್ಮವಾಗಿದ್ದ ಕುಟುಂಬ ಜೀವನ ಆಮೇಲೆ ಅಧರ್ಮವಾದೀತು. ಏಕೆಂದರೆ, ಆ ಧರ್ಮ ಬಂಧನ ವಾಯಿತು. ಬದಲಿಸಬೇಕಾದ ಧರ್ಮವನ್ನು ಆಸಕ್ತಿಯ ದೆಸೆಯಿಂದ ಬಿಡದಿದ್ದರೆ ಪರಿಣಾಮ ಭಯಾನಕವಾದೀತು. ಒಳ್ಳೆಯ ವಸ್ತುವಿನಲ್ಲೂ ಆಸಕ್ತಿ ಬೇಡ. ಆಸಕ್ತಿಯಿಂದ ಘೋರ ಅನರ್ಥ. ಶ್ವಾಸಕೋಶದೊಳಕ್ಕೆ ತಪ್ಪಿಯಾದರೂ ಒಂದು ಕ್ಷಯಕ್ರಿಮಿ ಹೋಗಲಿ, ಇಡೀ ಬದುಕೇ ಬಾಡಿ ಹೋಗುತ್ತದೆ. ಸಾತ್ವಿಕ ಕರ್ಮಕ್ಕೆ ಮೆಲ್ಲನೆ ಆಸಕ್ತಿಯ ಹುಳು ಹಿಡಿದರೆ ಸ್ವಧರ್ಮ ಹಳಸುತ್ತದೆ. ಆ ಸಾತ್ವಿಕ ಸ್ವಧರ್ಮದಲ್ಲಿ ರಾಜಸ–ತಾಮಸದ ವಾಸನೆ ಬಂದೀತು. ಕುಟುಂಬ ಬದಲಾಗುವ ಧರ್ಮ. ಯಥಾ ಸಮಯದಲ್ಲಿ

ಅದನ್ನು ಬಿಡಬೇಕು. ರಾಷ್ಟ್ರಧರ್ಮವೂ ಹಾಗೆಯೆ. ರಾಷ್ಟ್ರಧರ್ಮದಲ್ಲಿ ಆಸಕ್ತಿ ಹುಟ್ಟಿದರೆ, ನಮ್ಮ ರಾಷ್ಟ್ರವನ್ನಷ್ಟು ನೋಡಿದರಾಯಿತು ಎಂದು ಕೊಂಡರೆ, ಆ ರಾಷ್ಟ್ರಭಕ್ತಿ ಭಯಪ್ರದ. ಅಂಥದರಲ್ಲಿ ಆತ್ಮವಿಕಾಸ ನಿಂತೀತು. ಚಿತ್ತದಲ್ಲಿ ಆಸಕ್ತಿ ತುಂಬಿ ಭಾರವಾಗಿ ಅಧಃಪಾತವಾದೀತು.

## ೧೦೩. ಸಾಧನೆಯ ಪರಾಕಾಷ್ಠೆಯೇ ಸಿದ್ಧಿ

ಸಾರಾಂಶವಿದು: ಜೀವನದ ಫಲಿತ ಕೈಗೆ ಸಿಗಬೇಕೆಂದಿದ್ದರೆ ಫಲ ತ್ಯಾಗದ ಚಿಂತಾಮಣಿಯನ್ನು ಕೈಗೆ ತೆಗೆದುಕೊ. ಅದು ನಿನಗೆ ದಾರಿ ತೋರೀತು. ಫಲತ್ಯಾಗದ ತತ್ವ ನಿನ್ನ ಸ್ವಂತದ ಮಿತಿಯನ್ನು ಹೇಳುತ್ತದೆ. ಈ ಅಳತೆಗೋಲು ಬಳಿಯಲ್ಲಿದ್ದರೆ ಯಾವ ಕರ್ಮ ಮಾಡಬೇಕು, ಯಾವು ದನ್ನು ಮಾಡಬಾರದು, ಯಾವುದನ್ನು ಯಾವಾಗ ಬದಲಿಸಬೇಕು, ಎಲ್ಲವೂ ತಿಳಿಯುತ್ತದೆ. ಇರಲಿ, ವಿಚಾರಕ್ಕಾಗಿ ನೋಡೋಣ: ಕಟ್ಟಕಡೆಗೆ ಸಂಪೂರ್ಣ ಕ್ರಿಯೆ ಸಡಲಿ ಬೀಳುತ್ತದಲ್ಲ, ಆ ಸ್ಥಿತಿಯನ್ನಾದರೂ ಲಕ್ಷ್ಯ ದಲ್ಲಿಡಬಹುದೋ ಸಾಧಕ? ಕ್ರಿಯೆ ನಡೆಯದೆ ಜ್ಞಾನಿಯ ಕೈಯಿಂದ ಕರ್ಮ ಆಗುತ್ತಿದ್ದೀತು. ಈ ಜ್ಞಾನಿಯ ಸ್ಥಿತಿಯ ಕಡೆ ಸಾಧಕ ನೋಡು ತ್ತಿರಬೇಡವೆ?

ಕೂಡದು. ಇಲ್ಲೇ ಫಲತ್ಯಾಗದ ಪರೀಕ್ಷೆಯಾಗಬೇಕಾದುದು. ನಮಗೆ ಬೇಕಾದುದು ನಾವು ಗುರಿಯಿಡದೆಯೆ ನಮಗೆ ಸಿಗುತ್ತದೆ. ಅಷ್ಟು ಸುಂದರ ನಮ್ಮ ಜೀವನ! ಜೀವನದ ಸರ್ವಶ್ರೇಷ್ಠ ಫಲಿತವೆಂದರೆ ಮೋಕ್ಷ ಮೋಕ್ಷ ವೆಂದರೆ ಅಕರ್ಮಾವಸ್ಥೆ. ಅದಕ್ಕೂ ಆಸೆ ಬೇಡ. ಅದು ನಮಗೆ ತಿಳಿಯ ದಂತೆಯೇ ಬರುತ್ತದೆ. ಹಠಾತ್ತಾಗಿ ಎರಡು ಗಂಟೆ ಐದು ನಿಮಿಷಕ್ಕೆ ಸರಿಯಾಗಿ ಬರುವಂಥದಲ್ಲ ಸಂನ್ಯಾಸ. ಅದು ಯಾಂತ್ರಿಕವಲ್ಲ. ಯಾವಾಗ ನಿನ್ನ ಬಾಳಿನಲ್ಲಿ ಅದು ಮೂಡೀತೋ, ಹೇಗೆ ಅರಳೀತೋ ನಿನಗೆ ತಿಳಿಯ ಲಾಗದು ನಿನಗೇಕೆ ಮೋಕ್ಷದ ಚಿಂತೆ? ಬಿಡು.

'ನನಗೀ ಭಕ್ತಿಯೇ ಸಾಕು. ಮೋಕ್ಷ, ಆ ಅಂತಿಮಫಲ, ನನಗೆ ಬೇಡ' ಎನ್ನುತ್ತಾನೆ ಭಕ್ತ. ಮುಕ್ತಿ ಒಂದು ಬಗೆಯ ಭುಕ್ತಿಯೆ. ಮೋಕ್ಷ ವೆಂದರೆ ಒಂದು ಬಗೆಯ ಭೋಗ. ಅದೂ ಒಂದು ಫಲ. ಈ ಮೋಕ್ಷ

ಫಲದ ಮೇಲೂ ಫಲತ್ಯಾಗದ ಕತ್ತರಿಯಾಡಿಸು. ಅದರಿಂದ ಮೋಕ್ಷವೇನು ತುಂಡಾಗದು. ಕತ್ತರಿಯೇ ಮುರಿದೀತು. ಫಲ ಮತ್ತಷ್ಟು ನಿಶ್ಚಯ ವಾದೀತು. ಮೋಕ್ಷದ ಆಸೆ ಬಿಟ್ಟರೆ, ಆಗಲೇ ನಮಗೆ ತಿಳಿಯದಂತೆ ಮೋಕ್ಷದ ಕಡೆ ಕಾಲು ಹೋಯಿತು. ತನ್ಮಯತೆಯಿಂದ ಸಾಧನೆ ನಡೆಸು. ಮೋಕ್ಷದ ಮಾತು ಮರೆತೇಹೋಗಲಿ. ಅದೇ ನಿನ್ನನ್ನು ಹುಡುಕಿಕೊಂಡು ಬಂದು ಇದಿರಿಗೆ ನಿಲ್ಲಲಿ. ಸಾಧನೆಯಲ್ಲಿಯೆ ಸಾಧಕ ಬೆರೆತುಹೋಗಬೇಕು. 'ಮಾ ತೇ ಸಂಗೋಽಸ್ತ್ವಕರ್ಮಣಿ' ಅಕರ್ಮದಶೆಯ, ಮೋಕ್ಷದ ಆಸಕ್ತಿ ಬೇಡ ಎಂದು ಭಗವಂತ ಮೊದಲೇ ಹೇಳಿದಾನೆ. ಮತ್ತೆ ಕೊನೆಗೆ ಹೇಳಿದೆ: 'ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ' — ಮೋಕ್ಷಕೊಡಲು ನಾನು ಸಮರ್ಥ. ನಿನಗೇಕೆ ಚಿಂತೆ? ನೀನು ಸಾಧನೆಯ ಚಿಂತೆ ಮಾಡು. ಮೋಕ್ಷವನ್ನು ಮರೆತರೆ ಸಾಧನೆ ಉತ್ಕೃಷ್ಟವಾದೀತು, ಮೋಕ್ಷವೇ ಮೋಹಿಸಿ ನಿನ್ನ ಬಳಿಗೆ ಬಂದೀತು. ಮೋಕ್ಷ–ನಿರಪೇಕ್ಷ ವೃತ್ತಿಯಿಂದ ಸಾಧನೆಯಲ್ಲಿ ತಲ್ಲೀನನಾದವನ ಕುತ್ತಿಗೆಗೇ ಮೋಕ್ಷಲಕ್ಷ್ಮಿ ಮಾಲೆ ಹಾಕುತ್ತಾಳೆ.

ಸಾಧನೆ ಪರಾಕಾಷ್ಠವಾದಲ್ಲಿ ಸಿದ್ಧಿ ಕೈಮುಗಿದು ನಿಂತಿರುತ್ತದೆ. ಮನೆಗೆ ಹೋಗಬೇಕಾದವನು 'ಮನೆ ಮನೆ' ಯೆಂದು ಜಪಿಸುತ್ತ ಕುಳಿತಲ್ಲೆ ಕುಳಿತಿದ್ದರೆ, ಅಡವಿಯಲ್ಲೆ ಇರಬೇಕಾದೀತು. ಮನೆಯ ನೆನಪಿಟ್ಟು ದಾರಿಯಲ್ಲಿ ವಿಶ್ರಾಂತಿ ಪಡೆದಾನು. ಕಡೆಗೆ ವಿಶ್ರಾಂತಿ ಪಡೆಯದೆ ನಡೆದಾನು. ನಡೆದರೆ ಮನೆ ಬಂದೀತು. ಮೋಕ್ಷದ ನೆನಪಿನಿಂದ ನನ್ನ ಉದ್ಯೋಗದಲ್ಲಿ, ನನ್ನ ಸಾಧನೆಯಲ್ಲಿ ಶಿಥಿಲತೆ ಬಂದು ಮೋಕ್ಷ ದೂರವಾದೀತು. ಮೋಕ್ಷ ವನ್ನು ಮರೆತು ಸತತ ಸಾಧನೆಯನ್ನು ಪ್ರಾರಂಭಿಸುವುದೇ ಮೋಕ್ಷವನ್ನು ಪಡೆವ ಉಪಾಯ. ಅಕರ್ಮ ಸ್ಥಿತಿ, ವಿಶ್ರಾಂತಿಗಳ ಹವ್ಯಾಸವೆ ಬೇಡ. ಸಾಧನೆಯನ್ನೆ ಪ್ರೀತಿಸು. ತಪ್ಪದೆ ಮೋಕ್ಷ ದೊರೆತೀತು. ಉತ್ತರ ಉತ್ತರ ಎಂದು ಒದರಿದರೆ ಲೆಕ್ಕದ ಉತ್ತರ ಬಾರದು. ನನಗೆ ಗೊತ್ತಿರುವ ರೀತಿಯಲ್ಲಿ ಒಂದೊಂದು ಹೆಜ್ಜೆಯಾಗಿ ಮಾಡಿದರೆ ಉತ್ತರ ಬಂದೀತು. ಆ ರೀತಿ ಎಲ್ಲಿ ಮುಗಿದರೆ ಅಲ್ಲೇ ಉತ್ತರ. ಮುಗಿಯುವ ಮೊದಲೇ ಹೇಗೆ ಮುಗಿಸಬೇಕು? ರೀತಿಗೆ ಮೊದಲೇ ಉತ್ತರವೆ? ಸಾಧಕಾವಸ್ಥೆಯಲ್ಲೆ

ಸಿದ್ಧಾವಸ್ಥೆ ಹೇಗೆ ಬಂದೀತು? ನೀರೊಳಗೆ ಉಸಿರು ಕಟ್ಟಿದಾಗ ದಡದಲ್ಲಿರುವ ಬಾಳೆಯಹಣ್ಣನ್ನು ನೋಡುತ್ತಿದ್ದರೆ ಆದೀತೇ? ಆಗ ಒಂದೊಂದೇ ಕೈಬೀಸಿ ಮುಂದೆ ಸಾಗುವುದರಲ್ಲೇ ಸರ್ವಲಕ್ಷ್ಯವೂ ಇರಬೇಕು, ಸರ್ವಶಕ್ತಿಯೂ ವಿನಿಯೋಗವಾಗಬೇಕು. ಸಾಧನೆಯನ್ನು ಮುಗಿಸು, ಸಮುದ್ರವನ್ನು ದಾಟು. ಮೋಕ್ಷ ತಾನಾಗಿಯೆ ಬಂದೀತು.

## ೧೦೭. ಸಿದ್ಧಪುರುಷನ ತ್ರಿವಿಧ ಭೂಮಿಕೆ

ಜ್ಞಾನಿಯ ಕಟ್ಟಕಡೆಯ ಅವಸ್ಥೆಯಲ್ಲಿ ಎಲ್ಲ ಕ್ರಿಯೆಯೂ ಸಡಲಿ ಬೀಳುತ್ತದೆ, ಜ್ಞಾನರೂಪವಾಗುತ್ತದೆ. ಹಾಗೆಂದರೆ ಈ ಅಂತಿಮಸ್ಥಿತಿಯಲ್ಲಿ ಕ್ರಿಯೆಯೆ ಇಲ್ಲವೆಂದಲ್ಲ. ಅವನಿಂದ ಕ್ರಿಯೆ ಆದೀತು, ಆಗದಿದ್ದೀತು. ಈ ಅಂತಿಮದಶೆ ಅತ್ಯಂತ ರಮಣೀಯವೂ ಉದಾತ್ತವೂ ಆಗಿದೆ. ಈ ಅವಸ್ಥೆ ಯಲ್ಲಿ ಏನೇನು ಆಗುತ್ತದೆಯೋ ಅದರ ಚಿಂತೆ ಅವನಿಗಿಲ್ಲ. ಆಗುವುದೆಲ್ಲ ಶುಭವೆ ಆದೀತು. ಸರಿಯೆ ಆದೀತು. ಸಾಧನೆಯ ಪರಾಕಾಷ್ಠದಶೆಯಲ್ಲಿ ದಾನೆ ಅವನು. ಅಲ್ಲಿ ಎಲ್ಲ ಕರ್ಮಗಳನ್ನು ಮಾಡಿಯೂ ಅವನು ಏನೂ ಮಾಡ. ಸಂಹಾರಮಾಡಿಯೂ ಸಂಹಾರಮಾಡ. ಕಲ್ಯಾಣವೆಸಗಿಯೂ ಕಲ್ಯಾಣವೆಸಗ.

ಈ ಅಂತಿಮ ಮೋಕ್ಷಾವಸ್ಥೆ ಎಂದರೆ ಸಾಧಕನ ಸಾಧನೆಯ ಪರಾಕಾಷ್ಠೆ. ಹಾಗೆಂದರೆ ಸಾಧಕನ ಸಾಧನೆಯು ಸಹಜಾವಸ್ಥೆ. ನಾನು ಮಾಡುತ್ತೇನೆ ಎಂಬ ಕಲ್ಪನೆಯೆ ಇಲ್ಲಿಲ್ಲ. ಈ ದೆಸೆಯನ್ನು ಸಾಧಕನ ಸಾಧನೆಯ ಅ–ನೈತಿಕತೆ ಎಂದೇನು. ಸಿದ್ಧಾವಸ್ಥೆ ನೈತಿಕವಲ್ಲ. ಎಳೆಯ ಮಗು ನಿಜ ಹೇಳುತ್ತದೆ. ಅದು ನೈತಿಕವಲ್ಲ. ಅದಕ್ಕೆ ಸುಳ್ಳೆಂಬುದೇ ತಿಳಿಯದು. ಸುಳ್ಳು ತಿಳಿದಿದ್ದು ನಿಜವನ್ನು ಹೇಳಿದರೆ ನೈತಿಕ ಕರ್ಮ ವಾದೀತು. ಸಿದ್ಧಾವಸ್ಥೆಯಲ್ಲಿ ಅಸತ್ಯ ವಸ್ತುವೆ ಇರದು. ಕೇವಲ ಸತ್ಯ. ಅಂತೇ ಅಲ್ಲಿ ನೀತಿಯಿಲ್ಲ. ನಿಷಿದ್ಧವಾದುದು ಯಾವುದೂ ಅಲ್ಲಿ ಸುಳಿ ದಾಡದು. ಕೇಳಬಾರದುದು ಕಿವಿಯೊಳಗೆ ಹೋಗುವುದೇ ಇಲ್ಲ. ನೋಡ ಬಾರದುದನ್ನು ಕಣ್ಣು ನೋಡಲೇ ನೋಡದು. ಏನು ಆಗಬೇಕಾಗಿದೆಯೋ ಅದೇ ಕೈಯಿಂದ ಆಗುತ್ತದೆ. ಅದನ್ನು ಮಾಡಬೇಕಾಗುವುದಿಲ್ಲ.. ಯಾವುದನ್ನು

ಬಿಡಬೇಕೊ ಅದನ್ನು ಬಿಡಬೇಕಾಗುವುದಿಲ್ಲ. ತಾನೆ ಬಿಟ್ಟುಹೋಗುತ್ತದೆ. ಹೀಗೆ ಇದು ನೀತಿಶೂನ್ಯ ಅವಸ್ಥೆ. ಈ ಸಾಧನೆಯ ಪರಾಕಾಷ್ಠೆ, ಸಾಧನೆಯ ಸಹಜಾವಸ್ಥೆ ಅಥವಾ ಅನೈತಿಕತೆ, ಅಥವಾ ಅತಿನೈತಿಕತೆ ಎನ್ನಿ; ಈ ಅತಿನೈತಿಕತೆ ನೀತಿಯ ಪರಮೋತ್ಕರ್ಷ. ಅತಿನೈತಿಕತೆ ಎಂಬ ಶಬ್ದ ನನಗೆ ರುಚಿಸಿತು. ಈ ದಶೆಯನ್ನು ಸಾತ್ವಿಕ ಸಾಧನೆಯ ನಿಃಸತ್ವತೆ ಎನ್ನಬಹುದು.

ಈ ಸ್ಥಿತಿಯನ್ನು ವರ್ಣಿಸುವುದು ಹೇಗೆ? ಗ್ರಹಣ ಹಿಡಿವ ಮೊದಲು ಅದರ ಝಳಕು ಹಿಡಿದಂತೆ ದೇಹಪಾತವಾದ ಮೇಲೆ ಬರುವ ಮೋಕ್ಷದ ಝಳ ದೇಹಪಾತಕ್ಕೆ ಮೊದಲೇ ಪ್ರಾರಂಭವಾಗುತ್ತದೆ. ದೇಹಸ್ಥಿತಿಯಲ್ಲಿಯೆ ಭಾವಿ ಮೋಕ್ಷಸ್ಥಿತಿಯ ಅನುಭವ ಬರತೊಡಗುತ್ತದೆ. ಇಂಥ ಸ್ಥಿತಿಯನ್ನು ವರ್ಣಿಸಲು ನಾಲಗೆ ತೊದಲುತ್ತದೆ. ಇಂಥವನು ಎಷ್ಟು ಹಿಂಸೆಮಾಡಿದರೂ ಅವನು ಹಿಂಸೆ ಮಾಡಿದಂತಲ್ಲ. ಅವನ ಕ್ರಿಯೆಗೆ ಒರೆಗಲ್ಲಾವುದು, ಅಳತೆ ಗೋಲೆಲ್ಲಿ? ಅವನು ಏನೇ ಮಾಡಲಿ ಅದೆಲ್ಲವೂ ಸಾತ್ವಿಕಕರ್ಮವೇ ಆದೀತು. ಎಲ್ಲ ಕ್ರಿಯೆಯೂ ಕಳಚಿಬಿದ್ದರೂ ಅವನು ಸರ್ವವಿಶ್ವದ ಲೋಕ ಸಂಗ್ರಹ ಮಾಡುತ್ತಾನೆ. ಏನು ಭಾಷೆ ಬಳಸಬೇಕೋ ಅರ್ಥವಾಗದು.

ಈ ಅಂತಿಮ ಅವಸ್ಥೆಯಲ್ಲಿ ಮೂರು ಭಾವ ಇರುತ್ತವೆ. ಒಂದು ವಾಮದೇವನ ಸ್ಥಿತಿ. ಅವರ ಪ್ರಸಿದ್ಧ ಉದ್ಗಾರವೆ ಇದೆಯಲ್ಲ: 'ಈ ವಿಶ್ವದಲ್ಲಿ ಏನೇನಿದೆಯೋ ಅವೆಲ್ಲವೂ ನಾನು.' ಜ್ಞಾನಿ ನಿರಹಂಕಾರಿ. ಅವನ ದೇಹಾಭಿಮಾನ ಕಳೆದಿರುತ್ತದೆ. ಕ್ರಿಯೆಯೆಲ್ಲವೂ ಕಳಚಿಬೀಳುತ್ತದೆ. ಆಗ ಅವನಿಗೊಂದು ಭಾವಾವಸ್ಥೆ ಪ್ರಾಪ್ತವಾಗುತ್ತದೆ. ಆ ಅವಸ್ಥೆ ಒಂದೇ ಜನ್ಮದಲ್ಲಿ ಲಭಿಸದು. ಭಾವಾವಸ್ಥೆಯೆಂದರೆ ಕ್ರಿಯಾವಸ್ಥೆಯಲ್ಲ. ಭಾವನೆಯ ಉತ್ಕಟತೆಯ ಅವಸ್ಥೆ. ಈ ಭಾವಾವಸ್ಥೆಯನ್ನು ಅಲ್ಪ ಪ್ರಮಾಣದಲ್ಲಿ ನಾವೆಲ್ಲರೂ ಅನುಭವಿಸುತ್ತೇವೆ. ಮಗುವಿನ ದೋಷದಿಂದ ತಾಯಿ ದೋಷಿ ಯಾಗುತ್ತಾಳೆ. ಸುಖದಿಂದ ಗುಣಿಯಾಗುತ್ತಾಳೆ. ಮಗುವಿನ ದುಃಖದಿಂದ ದುಃಖಿಯಾಗುತ್ತಾಳೆ. ಸುಖದಿಂದ ಸುಖಿಯಾಗುತ್ತಾಳೆ. ತಾಯಿಯ ಈ ಭಾವಾವಸ್ಥೆ ಮಗುವಿನ ಪೂರ್ತಿ. ಮಗುವಿನ ದೋಷವನ್ನು ತಾನು ಸ್ವತಃ ಮಾಡದಿದ್ದರೂ ಅನುಭವಿಸುತ್ತಾಳೆ. ಈ ಭಾವನೆಯ

ಉತ್ಕಟತೆಯಿಂದ ಜ್ಞಾನಿ ಸರ್ವಜಗತ್ತಿನ ದೋಷವನ್ನೂ ತಾನು ಅನುಭವಿಸುತ್ತಾನೆ.

ಮೂರು ಲೋಕದ ಪಾಪದಿಂದ ಅವನು ಪಾಪಿಯಾಗುತ್ತಾನೆ; ಪುಣ್ಯದಿಂದ ಪುಣ್ಯವಂತನಾಗುತ್ತಾನೆ. ಇಷ್ಟಾದರೂ ಈ ಮೂರು ಲೋಕದ ಪುಣ್ಯಪಾಪಗಳು ಅವನನ್ನು ಸ್ಪರ್ಶಿಸಲಾರವು. ರುದ್ರಸೂಕ್ತದಲ್ಲಿ ಋಷಿ ಹೇಳುವುದಿಲ್ಲವೆ: "ಯವಾಶ್ಚ ಮೇ ತಿಲಾಶ್ಚ ಮೇ ಗೋಧೂಮಾಶ್ಚ ಮೇ." ನನಗೆ ಜವೆಗೋಧಿ ಕೊಡು, ಎಳ್ಳು ಕೊಡು, ಗೋಧಿ ಕೊಡು ಎಂದು ಬೇಡುತ್ತಾನೆ. ಆ ಋಷಿಯ ಹೊಟ್ಟೆಯಾದರೂ ಎಷ್ಟಿರಬಹುದು? ಅವನು ಬೇಡಿದುದು ಗೇಣು ಹೊಟ್ಟೆಗಾಗಿಯಲ್ಲ. ಅವನ ಆತ್ಮ ವಿಶ್ವಾಕಾರ ತಳೆದು ಈ ಮಾತು ಹೇಳುತ್ತಿದೆ. ಇದನ್ನು ನಾನು ವೈದಿಕ ವಿಶ್ವಾತ್ಮಭಾವ ಎನ್ನುತ್ತೇನೆ. ವೇದಗಳಲ್ಲಿ ಈ ಭಾವನೆಯ ಪರಮೋತ್ಕರ್ಷ ಕಾಣಬರುತ್ತದೆ. ಗುಜರಾತಿನಲ್ಲಿ ಸಂತ ನರಸೀ ಮೇಥಾ ಕೀರ್ತನೆಮಾಡುವಾಗ 'ದೇವರೆ, ನಾನೇನು ಪಾಪ ಮಾಡಿದೆ — ಕೀರ್ತನೆ ಮಾಡುವಾಗ ನಿದ್ದೆ ಒರುತ್ತದೆ?' ಎಂದು ಕೇಳಿದಾನೆ. ನರಸೀ ಮೇಥಾಗೆ ನಿದ್ದೆ ಬರುತ್ತಿತ್ತೆ? ಕೇಳುವವರಿಗೆ ಬರುತ್ತಿತ್ತು. ಆದರೆ ಅವರೊಡನೆ ಏಕರೂಪವಾಗಿ ಮೇಥಾ ಕೇಳುತ್ತಾನೆ. ಇದು ಮೇಥಾನ ಭಾವಾವಸ್ಥೆ. ಜ್ಞಾನಿಯ ಭಾವಾವಸ್ಥೆಯೆ ಹೀಗೆ. ಇದರಲ್ಲಿ ಸರ್ವ ಪಾಪಪುಣ್ಯವೂ ಅವನ ಕೈಯಿಂದಲೇ ಆಗುತ್ತಿದೆಯೆಂದು ನಿನಗೆ ಕಂಡೀತು. ಅವನೂ ಹಾಗೆಯೇ ಅಂದಾನು. ಋಷಿ ಹೇಳಿದನಲ್ಲ — 'ಮಾಡಬಾರದ ಕೆಲಸಗಳನ್ನು ಎಷ್ಟೋ ಮಾಡಿವೇನೆ, ಮಾಡುತ್ತಿದೇನೆ, ಮುಂದೆಯೂ ಮಾಡಿಯೇನು.' ಈ ಭಾವಾವಸ್ಥೆ ಪ್ರಾಪ್ತವಾದರೆ ಆತ್ಮ ಹಕ್ಕಿಯಂತೆ ಹಾರುತ್ತದೆ. ಅದು ಪಾರ್ಥಿವತೆಯನ್ನು ದಾಟಿ ಅತ್ತಕಡೆ ಹೋಗುತ್ತದೆ.

ಈ ಭಾವಾವಸ್ಥೆಯಿದ್ದಂತೆ ಜ್ಞಾನಿಗೆ ಕ್ರಿಯಾವಸ್ಥೆಯೂ ಒಂದು ಇದೆ. ಸ್ವಭಾವತಃ ಜ್ಞಾನಿ ಏನು ಮಾಡಿಯಾನು? ಅವನು ಮಾಡಿದುದೆಲ್ಲ ಸಾತ್ವಿಕವೇ ಆಗಿದ್ದೀತು. ಇನ್ನೂ ನರದೇಹದ ಎಲ್ಲೆಕಟ್ಟು ಇರುವುದರಿಂದ ಅವನ ಇಡೀ ದೇಹ, ಸರ್ವೇಂದ್ರಿಯಗಳು ಸಾತ್ವಿಕವಾದುದರಿಂದ ಅವನ ಸರ್ವ ಕ್ರಿಯೆಯೂ ಸಾತ್ವಿಕವಾಗಿಯೇ ಇದ್ದಾವು. ವ್ಯವಹಾರದ ದೃಷ್ಟಿಯಿಂದ

ನೋಡಿದರೆ ಅವನ ನಡತೆಯಲ್ಲಿ ಸಾತ್ವಿಕತೆಯ ಪರಾಕಾಷ್ಠೆ ಕಂಡುಬಂದೀತು. ಆದರೆ ವಿಶ್ವಾತ್ಮ ದೃಷ್ಟಿಯಿಂದ ನೋಡಿದರೆ ಮೂರು ಲೋಕದ ಪಾಪಪುಣ್ಯ ಗಳನ್ನು ಅವನೇ ಮಾಡುವಂತೆ. ಇಷ್ಟಿದ್ದರೂ ಅವನು ಅಲಿಪ್ತ. ಏಕೆಂದರೆ, ಈ ಅಂಟಿಬಂದ ಮೈಯನ್ನು ಅವನು ಸುಲಿದು ಬಿಸುಟಿದಾನೆ. ಕ್ಷುದ್ರ ದೇಹವನ್ನು ಬಿಸುಟಾಗಲೇ ಅವನು ವಿಶ್ವರೂಪಿ.

ಭಾವಾವಸ್ಥೆ ಕ್ರಿಯಾವಸ್ಥೆಗಳಲ್ಲದೆ ಮೂರನೆಯದೂ ಒಂದು ಇದೆ ಜ್ಞಾನಿಗೆ: ಜ್ಞಾನಾವಸ್ಥೆ. ಇದರಲ್ಲಿ ಅವನು ಪಾಪವನ್ನೂ ಸೈರಿಸ, ಪುಣ್ಯ ವನ್ನೂ ಸೈರಿಸ. ಎಲ್ಲವನ್ನೂ ಗುಡಿಗುಡಿಸಿ ಬಿಸಾಡುತ್ತಾನೆ. ಮೂರು ಲೋಕಕ್ಕೂ ಬೆಂಕಿಯಿಟ್ಟು ಸುಡಲು ಅವನು ಸಿದ್ಧ. ಒಂದಾದರೂ ಕೆಲಸ ವನ್ನು ತನ್ನ ಮೈಮೇಲೆ ತೆಗೆದುಕೊಳ್ಳಲು ಅವನು ಸಿದ್ಧನಲ್ಲ. ಅದರ ಸ್ಪರ್ಶವೇ ಅವನಿಗೆ ಸಹಿಸದು. ಹೀಗೆ ಈ ಮೂರು ಅವಸ್ಥೆ ಜ್ಞಾನಿಯ ಮೋಕ್ಷದಶೆಯಲ್ಲಿ ಸಾಧನೆಯ ಪರಾಕಾಷ್ಠದಶೆಯಲ್ಲಿ ಸಂಭವಿಸುತ್ತವೆ.

ಈ ಅಕ್ರಿಯಾವಸ್ಥೆಯ ಅಂತಿಮದಶೆಯನ್ನು ಮೈಯೊಗ್ಗಿಸಿಕೊಳ್ಳು ವುದು ಹೇಗೆ? ನಾವು ಮಾಡುವ ಕರ್ಮಗಳ ಕರ್ತೃತ್ವವನ್ನು ನಾವು ಗ್ರಹಿಸ ಬಾರದು. ಹೀಗೆ ಅಭ್ಯಾಸಮಾಡಬೇಕು. ನಾನು ಕೇವಲ ನಿಮಿತ್ತಮಾತ್ರ. ಕರ್ಮದ ಕರ್ತೃತ್ವ ನನ್ನದಲ್ಲ ಎಂದು ಮನನಮಾಡಬೇಕು. ಈ ಅಕರ್ತೃತ್ವ ವಾದವನ್ನು ನಮ್ರತೆಯಿಂದ ಸ್ವೀಕರಿಸಬೇಕು. ಆದರೆ ಸಂಪೂರ್ಣಕರ್ತೃತ್ವ ಹೋಗುವುದಿಲ್ಲ. ಮೆಲ್ಲಮೆಲ್ಲನೆ ಈ ಭಾವನೆ ವಿಕಾಸವಾದೀತು. ನಾನು ಕೇವಲ ತುಚ್ಛ, ಅವನ ಕೈಯೊಳಗಿನ ಗೊಂಬೆ, ಅವನು ನನ್ನನ್ನು ಕುಣಿಸು ತ್ತಿದಾನೆ ಎಂದು ಪ್ರಾರಂಭದಲ್ಲಿ ಅನಿಸಲಿ. ಆಮೇಲೆ ಇದೆಲ್ಲವನ್ನೂ ಮಾಡಿ— ಇದೆಲ್ಲವೂ ಈ ದೇಹದ್ದು, ನನಗೆ ಅದರ ಸ್ಪರ್ಶವೇ ಇಲ್ಲ, ಈ ಎಲ್ಲ ಕ್ರಿಯೆಯೂ ಈ ಮೃತದೇಹದ್ದು, ನಾನು ಈ ಮೃತದೇಹವಲ್ಲ, ನಾನು ಶವವಲ್ಲ ಶಿವ, ಹೀಗೆ ಭಾವಿಸುತ್ತಾ ಹೋಗು. ದೇಹದ ಲೇಪದಿಂದ ಲೇಶ ಮಾತ್ರವೂ ಲಿಪ್ತನಾಗಬೇಡ. ದೇಹದ ಸಂಬಂಧವೇ ಇಲ್ಲವೆಂಬಂತಾದರೆ ಜ್ಞಾನಾವಸ್ಥೆ ಬಂದೀತು. ಆ ಅವಸ್ಥೆಯಲ್ಲಿ ಮೇಲೆ ಹೇಳಿದ ಮೂರು ಅವಸ್ಥೆ: ಕ್ರಿಯಾವಸ್ಥೆ: ಅದರಲ್ಲಿ ಅತ್ಯಂತ ನಿರ್ಮಲ, ಆದರ್ಶ ಕ್ರಿಯೆ ಅವನಿಂದ ಆದೀತು; ಭಾವಾವಸ್ಥೆ: ಅದರಲ್ಲಿ ಮೂರು ಲೋಕದ ಸರ್ವ

ಪಾಪ ಪುಣ್ಯವೂ ಅವನದು. ಆದರೆ ಅವನಿಗದರ ಸ್ಪರ್ಶ ಲೇಶಮಾತ್ರವೂ ಇಲ್ಲ; ಜ್ಞಾನಾವಸ್ಥೆ: ಇದರಲ್ಲಿ ತಿಲಮಾತ್ರವೂ ಕರ್ಮ ಬಳಿ ಸುಳಿಯ ಬಾರದು. ಸರ್ವ ಕರ್ಮವೂ ಭಸ್ಮಸಾತ್ ಆದೀತು. ಈ ಮೂರು ಅವಸ್ಥೆಗಳ ಮೂಲಕ ಜ್ಞಾನಿಯ ವರ್ಣನೆ ಮಾಡಬಹುದು.

## ೧೦೮. ನೀನೇ ... ನೀನೇ.... ನೀನೇ !

ಇಷ್ಟು ಹೇಳಿ ಅರ್ಜುನನಿಗೆ ಭಗವಂತ ಹೇಳಿದ: 'ಅರ್ಜುನ, ನಾನು ಹೇಳಿದುದನ್ನೆಲ್ಲ ಸರಿಯಾಗಿ ಕೇಳಿದೆಯಾ? ಈಗ ಪೂರ್ಣ ವಿಚಾರಮಾಡಿ ನಿನಗೆ ತಿಳಿದ ಹಾಗೆ ಮಾಡು.' ಭಗವಂತ ದೊಡ್ಡಸ್ತಿಕೆಯಿಂದ ಅರ್ಜುನನಿಗೆ ಸ್ವಾತಂತ್ರ್ಯನೀಡಿದ. ಭಗವದ್ಗೀತೆಯ ವಿಶೇಷ ಇದು. ಆದರೆ ಭಗವಂತನಿಗೆ ಮತ್ತೆ ಕಳವಳವಾಯಿತು. ನೀಡಿದ ಇಚ್ಛಾಸ್ವಾತಂತ್ರ್ಯವನ್ನು ಮತ್ತೆ ಹಿಂತೆಗೆದುಕೊಂಡ. 'ಅರ್ಜುನ, ನಿನ್ನ ಸಾಧನೆ, ನಿನ್ನ ಇಚ್ಛೆಗಳನ್ನು ಬಿಸುಡು. ನನಗೆ ಶರಣು ಬಾ, ಸಾಕು' ಎಂದ. ತನಗೆ ಶರಣು ಬಾರೆಂದು, ಕೊಟ್ಟ ಇಚ್ಛಾಸ್ವಾತಂತ್ರ್ಯವನ್ನು ಮರಳಿ ಕಿತ್ತುಕೊಂಡ. ಇದರ ಅರ್ಥ ಹೀಗೆ: 'ನಿನಗೆ ಸ್ವಾತಂತ್ರ್ಯದ ಇಚ್ಛೆಯೇ ಆಗದಿರಲಿ. ಸ್ವಂತ ಇಚ್ಛೆಯನ್ನು ನಡೆಯಗೊಡಬೇಡ. ಅವನ ಇಚ್ಛೆ ನಡೆಯುವಂತೆ ಮಾಡು.' ಸ್ವತಂತ್ರತೆ ಬೇಡ ಎನಿಸಲಿ ನಿನಗೆ. ನಾನಿಲ್ಲ, ಇರುವುದೆಲ್ಲ ನೀನೇ ಎಂಬಂತಾಗಲಿ. ಕುರಿ ಬದುಕಿರುವಾಗ 'ಮೇ ಮೇ' ನಾ ನಾ ಎನ್ನುತ್ತದೆ. ಅದು ಸತ್ತು ಅದರ ನರವನ್ನು ಪಿಂಜಾರನ ಬಿಲ್ಲಿಗೆ ಬಿಗಿದಾಗ ಕವಿ ದಾದು ಹೇಳಿದಂತೆ 'ತುಹಿ ತುಹಿ ತುಹಿ' ನೀನೇ ನೀನೇ ನೀನೇ ಎನ್ನುತ್ತದೆ. ಕಟ್ಟಕಡೆಗೆ ಎಲ್ಲವೂ 'ತುಹಿ ತುಹಿ — ನೀನೇ, ನೀನೇ!'

೧೮-೬-೩೨.

**ಪರಿಶಿಷ್ಟ ೧**

# ಶಂಕಾ - ಸಮಾಧಾನ

ಗೀತಾ ಪ್ರವಚನದ ಎರಡನೆ ಅಧ್ಯಾಯದಲ್ಲಿ ರಜೋಗುಣ ತಮೋಗುಣಗಳನ್ನು ಹೋಲಿಸಿದೆ. ಅದನ್ನು ಓದಿ ಒಬ್ಬ ತಮ್ಮ ಒಂದು ಶಂಕೆಯನ್ನು ವಿನೋಬಾಜಿಯ ಬಗ್ಗೆ ಹೊರಗೆಡವಿದ. ವಿನೋಬಾಜಿಯ ಮೂಲಕ ಅದಕ್ಕೆ ಕೊಟ್ಟ ಸಮಾಧಾನವೂ ಮೂಲ ಶಂಕೆಯೂ ಓದುಗರಿಗೆ ಉಪಯೋಗವಾಗುತ್ತವೆ. ಎರಡನ್ನೂ ಇಲ್ಲಿ ಕೊಡಲಾಗಿದೆ.

**ಶಂಕೆ.**—ಗೀತಾಪ್ರವಚನದ ಎರಡನೆ ಅಧ್ಯಾಯದಲ್ಲಿ ಕರ್ಮ ಮಾಡುವವರ ದ್ವಿವಿಧ ವೃತ್ತಿಯನ್ನು ವಿವರಿಸುತ್ತ ತಾವು ರಜೋಗುಣ ತಮೋಗುಣಗಳನ್ನು ಸಮಾನವಾಗಿ ತೋರಿಸಿದೀರಿ. 'ತೆಗೆದುಕೊಂಡರೆ ಫಲಸಮೇತವಾಗಿಯೇ'— ಇದು ರಜೋಗುಣದ ವೃತ್ತಿ, 'ಬಿಟ್ಟರೆ ಕರ್ಮ ಸಮೇತವಾಗಿಯೇ'— ಇದು ತಮೋಗುಣದ ವೃತ್ತಿ ಎಂದು ತೋರಿಸಿದೀರಿ. ಈ ಎರಡು ವೃತ್ತಿಗಳಲ್ಲಿ ಭೇದವಿಲ್ಲವೆಂದೂ ಹೇಳಿದೀರಿ. ನನ್ನ ಅಭಿಪ್ರಾಯದಲ್ಲಿ ಎರಡೂ ವೃತ್ತಿ ರಜೋಗುಣದಲ್ಲಿಯೇ ಸೇರಿವೆ. ೧, ೩, ೯ ರ ಲೆಕ್ಕದಂತೆ ತಮೋಗುಣ, ರಜೋಗುಣ, ಸತ್ವಗುಣ ಒಂದಕ್ಕೊಂದು ದೂರವಾಗಿವೆ. ರಜೋಗುಣ ತಮೋಗುಣಗಳು ಒಂದೇ ವೃತ್ತಿಯ ಭಾವಾತ್ಮಕ (ಪಾಸಿಟಿವ್), ಅಭಾವಾತ್ಮಕ (ನೆಗೆಟಿವ್) ಸ್ವರೂಪಗಳಲ್ಲ. ಕರ್ಮಮಾಡಿ ಫಲವನ್ನು ಬಿಡುವುದು ಸತ್ವಗುಣ. 'ತೆಗೆದುಕೊಂಡರೆ ಫಲಸಮೇತವಾಗಿಯೇ' ಮತ್ತು 'ಬಿಟ್ಟರೆ ಕರ್ಮಸಮೇತವಾಗಿಯೇ'—ಇವೆರಡೂ ವೃತ್ತಿ ರಜೋಗುಣದಲ್ಲೇ ಸೇರಬೇಕು. 'ಫಲವನ್ನು ಮಾತ್ರ ತೆಗೆದುಕೊಳ್ಳುತ್ತೇನೆ, ಕರ್ಮವನ್ನು ಮಾಡುವುದಿಲ್ಲ' ಎಂಬ ವೃತ್ತಿ ತಮೋಗುಣದ್ದು. ಇದಕ್ಕೂ ಭಿನ್ನವಾದ ಅಸಡ್ಡೆಯ ವೃತ್ತಿಯೊಂದು ಇರಬಲ್ಲದು. ಕರ್ಮ ಮಾಡಿದರೆ ಮಾಡಿದೆ, ಆದರೆ ಆಯಿತು. ಫಲದ ಅಪೇಕ್ಷೆ, ಕಾಳಜಿ, ಆವಶ್ಯಕತೆ, ಮೋಹ ಮುಂತಾದುದು ಇಲ್ಲ. ಅದಕ್ಕೆ ವ್ಯತಿರೇಕವಾಗಿ ಫಲ ಬಂದಾಗ ತೆಗೆದುಕೊಂಡ, ಕರ್ಮ ಮಾಡುವ ಅಗತ್ಯ ಜವಾಬ್ದಾರಿ ಏನೂ ಇಲ್ಲ. ಮನಸ್ಸಿನ ಸ್ಥಿತಿಗೆ ಅನುಸಾರವಾಗಿ ಈ ವೃತ್ತಿ ಕದಾಚಿತ್ ಮೂರು ಗುಣಗಳಲ್ಲಿ ಇರಬಹುದು. ಜ್ಞಾನ ಶೂನ್ಯ ಸ್ಥಿತಿಯಲ್ಲಿ ಈ ವೃತ್ತಿ ತಮೋಗುಣಕ್ಕಿಂತಲೂ ಕೆಳಗಿನದಾಗಬಹುದು; ಧ್ಯಾನಮಗ್ನ ಸ್ಥಿತಿಯಲ್ಲಿ ಸಾತ್ವಿಕ ವೃತ್ತಿಗೂ ಮೇಲೇರಬಹುದು.

**ಸಮಾಧಾನ.**—ನಿನ್ನ ಚಿಂತನೆ ಚಲೋ ಎನಿಸಿತು ತ್ರಿಗುಣದ ವಿಷಯವಾಗಿ ಅನೇಕ ಪ್ರಕಾರದ ವಿಚಾರ ಮಾಡಿದಾರೆ; ಮಾಡಬಹುದು. ತಮೋಗುಣಕ್ಕಿಂತ ಕೆಳಗಿನ ಅಥವಾ ಸತ್ವಗುಣಕ್ಕಿಂತ ಮೇಲಿನ ವೃತ್ತಿಯ ಕಲ್ಪನೆಯನ್ನು ಮಾಡಲಾರೆವು. ಇಡೀ ಜಗತ್ತನ್ನೇ ಮೂರು ಗುಣಗಳಲ್ಲಿ ಭಾಗಿಸಬೇಕು. ಈ ಮೂರೂ ಗುಣಗಳಿಂದ ಅಲಿಪ್ತವಾದ ಒಂದು ಅವಸ್ಥೆ ಯಿದೆ. ಅದನ್ನು ಗುಣಾತೀತ ಪುರುಷನ ಭೂಮಿಕೆಯೆಂದು ತಿಳಿಯಬೇಕು. ಅದರಲ್ಲಿ ಯಾವ ಬಗೆಯ ಪ್ರವೃತ್ತಿಯೂ ಇರದು. ಅದನ್ನು ನಿವೃತ್ತಿ ಎನ್ನು ತ್ತಾರೆ. ಆದರೆ ನಿವೃತ್ತಿಯ ಅರ್ಥ ಪ್ರವೃತ್ತಿ ವಿರೋಧವಲ್ಲ. ಪ್ರವೃತ್ತಿ ವಿರೋಧವೂ ಒಂದು ವೃತ್ತಿಯೇ. ಅದನ್ನು ತಮೋಗುಣ ಎನ್ನಬೇಕು.

ಇಷ್ಟು ಪ್ರಾಸ್ತಾವಿಕ ವಿವರಣೆಯ ತರುವಾಯ ಇನ್ನು ಮೂಲಪ್ರಶ್ನೆ ಯನ್ನು ನೋಡೋಣ. ತತ್ವತಃ ತ್ರಿಗುಣಗಳು ಪ್ರಕೃತಿಯ ಅಂಶಗಳು. ಮೂರರ ಆವಶ್ಯಕತೆಯೂ ಪ್ರಕೃತಿಯಲ್ಲಿ ಸಮಾನವಾಗಿದೆ. ಸ್ಥಿತಿ, ಪ್ರಕಾಶ, ಗತಿ ಮೂರೂ ಸೇರಿ ಜೀವನವಾಗುತ್ತದೆ. ಇದು ತಾತ್ವಿಕ ದೃಷ್ಟಿ. ಇದರಲ್ಲಿ ಮೇಲೆ ಕೆಳಗೆ ಎಂಬ ಭೇದವೇನೂ ಇಲ್ಲ.

ಇದಕ್ಕೆ ಭಿನ್ನವಾದ ನೈತಿಕ ದೃಷ್ಟಿಯಿದೆ. ಆ ದೃಷ್ಟಿಯಿಂದ ತಮ, ರಜ, ಸತ್ವಗಳು ಉತ್ತರೋತ್ತರ ಶ್ರೇಷ್ಠ ಗುಣಗಳು. ಸಾಮಾನ್ಯವಾಗಿ ಜನರು ಈ ದೃಷ್ಟಿಯಿಂದ ವಿಚಾರ ಮಾಡುತ್ತಾರೆ.

ಸೃಷ್ಟಿತತ್ವವನ್ನು ಅರಿತುಕೊಳ್ಳುವ ಪ್ರಾಕೃತಿಕ ಅಥವಾ ತಾತ್ವಿಕ ದೃಷ್ಟಿ ಯೊಂದು, ನೈತಿಕದೃಷ್ಟಿ ಇನ್ನೊಂದು. ಎರಡೂ ಅಲ್ಲದೆ ಸಾಧನೆಯ ದೃಷ್ಟಿಯೂ ಒಂದಿದೆ. ಅದರ ಪ್ರಕಾರ ರಜ, ತಮಗಳ ಪರಸ್ಪರ ಪ್ರತಿಕ್ರಿಯಾ ರೂಪ ಅಥವಾ ಪರೀಕ್ಷಣ ರೂಪ ಅಥವಾ ಪೂರಕ. ಎರಡೂ ಸೇರಿ ಒಂದೇ ವಸ್ತು. ರಜೋಗುಣ ಬಳಲಿದಾಗ ತಮೋಗುಣ ಬರುತ್ತದೆ, ತಮೋಗುಣ ಬಳಲಿದಾಗ ರಜೋಗುಣ ಬರುತ್ತದೆ. ಸತ್ವಗುಣ ಎರಡೂ ಅಲ್ಲ, ಬೇರೆ. ಅದೇ ಸಾಧಕರ ಗೆಳೆಯ. ರಜೋಗುಣ, ತಮೋಗುಣ ಸೇರಿ ಆಸುರೀ ಸಂಪತ್ತಿ; ಸತ್ವಗುಣ ದೈವೀಸಂಪತ್ತಿ—ಹೀಗೆ ಘರ್ಷಣೆ ನಡೆಯುತ್ತಿದೆ.

ಗೀತೆಯಲ್ಲಿ ಪ್ರಾಕೃತಿಕ, ನೈತಿಕ, ಸಾಧನಿಕ ಮೂರು ಬಗೆಯ ವಿವೇಚನೆ ಸಿಕ್ಕುತ್ತದೆ. ನಾನು ಪ್ರಾಕೃತಿಕ ವಿಚಾರವನ್ನು ಬಿಟ್ಟು ಮುಖ್ಯವಾಗಿ ನೈತಿಕ, ಸಾಧನಿಕ ದೃಷ್ಟಿಯಿಂದ ವಿಚಾರ ಮಾಡುತ್ತೇನೆ.

ಒಮ್ಮೆ ನೈತಿಕ, ಒಮ್ಮೆ ಸಾಧನಿಕ. ಯಾವ ವಿವೇಚನೆಯ ಬಗ್ಗೆ ಶಂಕೆ ಉಂಟಾಗಿದೆಯೋ ಅದರಲ್ಲಿ ಸಾಧನಿಕ ದೃಷ್ಟಿಯಿದೆ. ಆದುದರಿಂದ ರಜೋಗುಣ ತಮೋಗುಣಗಳ ಏಕತ್ರ ಕಲ್ಪನೆ ಮಾಡಲಾಗಿದೆ.

ಫಲತ್ಯಾಗದ ಬಗ್ಗೆ ಹೆಚ್ಚು ಪರಿಶೀಲನೆಯನ್ನು 'ಸ್ಥಿತಪ್ರಜ್ಞ ದರ್ಶನ' 'ಗೀತಾಯಿಕೋಶ' ಗಳಲ್ಲಿ ಮಾಡಿದೆ.

---

**ಪರಿಶಿಷ್ಟ ೨**

# ಗೀತಾಧ್ಯಾಯ ಸಂಗತಿ

## ಪ್ರಾಸ್ತಾವಿಕ

ಕೋಚರಬ್‌ದಲ್ಲಿ ಆಶ್ರಮ ಪ್ರಾರಂಭವಾದಂದಿನಿಂದಲೂ ವಿನೋಬಾ ನನ್ನ ಸಂಗಾತಿಯಾಗಿದಾನೆ. ನಾನು ಬಯಸಿದುದು ಅಥವಾ ನನಗೆ ಇಷ್ಟವಾದುದು, ಅಂಥ ಬಹಳ ಕೆಲಸ ಮಾಡಿದಾನೆ ಆತ. ಗೀತಾಧ್ಯಾಯ ಸಂಗತಿಯನ್ನೇ ತೆಗೆದುಕೊಳ್ಳೋಣ. ನಾನು ಕೇಳಿದುದು ಬಹಳ ಸ್ವಲ್ಪ, ವಿನೋಬಾ ಕೊಟ್ಟದ್ದು ಬಹಳ ಹೆಚ್ಚಾಗಿ. ೧೪ ದಿನದಲ್ಲಿ ಗೀತಾ ಪಾರಾಯಣ ಮಾಡುವ ಪ್ರಥಮ ಕಲ್ಪನೆ, ಆಮೇಲೆ ೭ ದಿನದಲ್ಲಿ, ಯರವಡಾ ಮಂದಿರದಲ್ಲಿ ಹುಟ್ಟಿತು. ವಾಚಕರಿಗೆ ಇದು ತಿಳಿದಿರಲಿ. ನಾನು ನನ್ನ ಕ್ರಮವನ್ನು ವಿನೋಬಾಗೆ ತೋರಿಸಿ ಆತನ ಒಪ್ಪಿಗೆಯ ಮುದ್ರೆ ಅಥವಾ ಸುಧಾರಣೆ ಕೋರಿದೆ. ಅದಕ್ಕೆ ಬದಲು ಆತ ಗೀತಾಧ್ಯಾಯ ಸಂಗತಿಯನ್ನು ಕಳಿಸಿದ. ಇದನ್ನು ಇದಿರಿಗಿಟ್ಟುಕೊಂಡರೆ ಗೀತೆಯಲ್ಲಿ ಧ್ಯಾನಾವಸ್ಥಿತನಾಗಿ ಅದರ ಶಿಕ್ಷಣವನ್ನು ಜೀವನದಲ್ಲಿ ಉಪಯೋಗ ಮಾಡಬಯಸುವವನಿಗೆ ಲಾಭವಾಗುತ್ತದೆ ಎಂದು ನಾನು ತಿಳಿದಿದೇನೆ.

ಮಹಾಬಲೇಶ್ವರ,<br>
೩೦-೫-೧೯೪೫.

**ಮೋ. ಕ. ಗಾಂಧೀ**

# ಪೂಜ್ಯ ಗಾಂಧೀಜಿಗೆ ಬರೆದ ಪತ್ರ

ಪೂಜ್ಯ ಬಾಪೂ,

ಗೀತೆಯ ಸಾಪ್ತಾಹಿಕ ಪಾಠಕ್ರಮ ಹೇಗಿರಬೇಕೆಂಬ ವಿಷಯದಲ್ಲಿ ತಾವು ಕೆಲವು ಮಾತನ್ನು ನನ್ನೆದಿರಿಗೆ ಇಟ್ಟಿರಿ. ಅದಕ್ಕೆ ಉತ್ತರ ಕೊಡುವ ಪ್ರಯತ್ನ ಮಾಡುತ್ತಿದೇನೆ.

ಗೀತೆಯ ಮೊದಲನೆಯ ಅಧ್ಯಾಯ ಬೀಜರೂಪವಾಗಿದೆ. ಅದರದೇ ಒಂದು ಚಿಕ್ಕ ಕೊಲ್ಲಿ ಎರಡನೆಯ ಅಧ್ಯಾಯದೊಳಗೆ ನುಗ್ಗಿದೆ. ಇದಕ್ಕೆ ಕಾರಣ — ಭಗವಂತನ ಪ್ರಾಥಮಿಕ ಉದ್ಗಾರ (೨: ೨–೩ ಶ್ಲೋಕ) ಅರ್ಜುನನ ಹರಿಶರಣತೆ (೨: ೭ ಶ್ಲೋಕ) ಗಳಿಗೆ ಸ್ವತಂತ್ರ ಸ್ಥಾನ ಕೊಡುವ ಆವಶ್ಯಕತೆ ಕಂಡುಬಂತು. ಪ್ರತ್ಯಕ್ಷ ಗೀತೆಯ ಆರಂಭ ೨: ೧೧ ಶ್ಲೋಕದಿಂದ ಆಯಿತು. ಅಲ್ಲಿಂದ ಹಿಡಿದು ಇಡೀ ಎರಡನೆಯ ಅಧ್ಯಾಯದಲ್ಲಿ ಗೀತೆಯ ಮುಖ್ಯ ವಿಷಯವನ್ನು ಸಂಪೂರ್ಣವಾಗಿ ಸಂಕ್ಷೇಪವಾಗಿ ಕೊಟ್ಟಿದೆ.

೧. ಜೀವನಶಾಸ್ತ್ರ — ಆತ್ಮದ ಅಮರತ್ವ ಮುಂತಾದುದು ; ಇದನ್ನು ಗೀತೆ 'ಸಾಂಖ್ಯಬುದ್ಧಿ' ಎನ್ನುತ್ತದೆ.

೨. ಜೀವನಕಲೆ — ಸಮಭಾವದಿಂದ ಕರ್ಮ ಮಾಡುವುದು ಹೇಗೆ? ಇದನ್ನು ಗೀತೆ 'ಯೋಗಬುದ್ಧಿ' ಎನ್ನುತ್ತದೆ.

೩. ಜೀವನಶಾಸ್ತ್ರ— ಜೀವನಕಲೆ, ಸಾಂಖ್ಯಬುದ್ಧಿ–ಯೋಗಬುದ್ಧಿ, ಎರಡೂ ಯಾವುದರಲ್ಲಿ ಸ್ಥಿರವಾಗಿದೆಯೋ ಅಂಥ ಪರಮ ಆದರ್ಶದ, ಗುರುಮೂರ್ತಿಯ–ಗೀತೆಯ ಭಾಷೆಯಲ್ಲಿ 'ಸ್ಥಿತಪ್ರಜ್ಞ'ನ – ವರ್ಣನೆ.

೪. ಸ್ಥಿತಪ್ರಜ್ಞನ ಅಂತಿಮ ಪರಿಣಾಮ ಬ್ರಹ್ಮನಿರ್ವಾಣ. ಬ್ರಹ್ಮ ನಿರ್ವಾಣ ಸ್ಥಿತಿಯನ್ನು ಮುಟ್ಟಿದ ಮೇಲೆ ವಾಸ್ತವವಾಗಿ ಹೇಳಬೇಕಾದು ದೇನೂ ಉಳಿಯುವುದಿಲ್ಲ.

'ಸ್ಥಿತಪ್ರಜ್ಞ', 'ಬ್ರಹ್ಮನಿರ್ವಾಣ' — ಇವೆರಡೂ ಶಬ್ದ ಗೀತೆಯ ಹೊರತು ಇಡೀ ಸಂಸ್ಕೃತ ವಾಙ್ಮಯದಲ್ಲಿಯೆ, ಎಂದರೆ ಗೀತೆಗೆ ಹಿಂದಿನ ವಾಙ್ಮಯದಲ್ಲಿ ಎಲ್ಲಿಯೂ ಸಿಗುವುದಿಲ್ಲವೆಂಬುದನ್ನು ಇಲ್ಲಿ ತಿಳಿಸಬೇಕಾದುದು ಅಗತ್ಯ. ಇವು ಗೀತೆಯ ಸ್ವತಂತ್ರ, ವಿಶಿಷ್ಟ ಶಬ್ದ. ಭಕ್ತ, ಜ್ಞಾನಿ, ಯೋಗಿ ಹಾಗೂ ಮುಕ್ತಿ, ಪರಮಪದಪ್ರಾಪ್ತಿ, ಅಪುನರಾವೃತ್ತಿ ಮುಂತಾದ ಶಬ್ದ ಗೀತೆಯಲ್ಲಿವೆ. ಆದರೆ ಅವು ಗೀತೆಯ ಸ್ವತಂತ್ರ ಮೌಲಿಕ ಶಬ್ದಗಳಲ್ಲ.

ಇಡೀ ಯಾತ್ರೆ ಸ್ವಲ್ಪದರಲ್ಲಿ ಮುಗಿಯಿತು. ಅರ್ಜುನನ ಪ್ರಶ್ನೆಯಿಂದ ಮೊದಲಿಟ್ಟು ವಿಸ್ತೃತ ರೂಪದಲ್ಲಿ ಅದನ್ನು ಮೂರು, ನಾಲ್ಕು, ಐದನೆಯ ಅಧ್ಯಾಯಗಳಲ್ಲಿ ಪುನರಾವೃತ್ತಿ ಮಾಡಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಅರ್ಜುನ ಕೇಳಿದ ಪ್ರಶ್ನೆಯನ್ನು ಅವನು ಕೇಳಿರದಿದ್ದರೆ, ಖಂಡಿತವಾಗಿಯೂ ಗೀತೆ ಎರಡನೆಯ ಅಧ್ಯಾಯಕ್ಕೇ ಸಮಾಪ್ತಿಯಾಗುತ್ತಿತ್ತು. ಜೀವನದ ತತ್ವಜ್ಞಾನ, ಜೀವನದ ಕಲೆ (ಕೌಶಲಂ) ಆದರ್ಶಗುರು, ಅಂತಿಮ ಫಲಿತ– ಇಷ್ಟು ಹೇಳಿದ ಮೇಲೆ ಇನ್ನು ಉಳಿದುದೇನು ?

ಮೂರನೆಯ ಅಧ್ಯಾಯದಲ್ಲಿ ಕರ್ಮ ಮಾಡುವ ಕಾರಣವನ್ನು ಹೇಳುತ್ತಾನೆ ಭಗವಂತ. ಬುದ್ಧಿ ಶ್ರೇಷ್ಠವೇ ನಿಜ. ಆದರೆ ಕರ್ಮದ ಹೊರತು ಅದು ಪ್ರಾಪ್ತಿಯಾಗುವುದೇ ಇಲ್ಲ. ಇದಕ್ಕೇನು ಉಪಾಯ? ವ್ಯಕ್ತಿಯ ಆಜೀವಿಕೆ (ಶರೀರಯಾತ್ರೆ), ಸಮಾಜಸೇವೆ (ಯಜ್ಞ), ಚಿತ್ತ ಶುದ್ಧಿ (ಸಂಸಿದ್ಧಿ), ಲೋಕಸಂಗ್ರಹ–ಇವು ಕರ್ಮ ಮಾಡಲು ಉತ್ತರೋತ್ತರ ಕಾರಣಗಳು. ಮೂರನೆಯ ಅಧ್ಯಾಯ ಗೀತೆಯ ಬೀಗದಕ್ಕೈ ಎನ್ನುತ್ತೀರಿ ನೀವು. ಸರಿಯೆ. ಅರ್ಜುನ ಪ್ರಶ್ನೆ ಮಾಡಿರದಿದ್ದರೆ ನಮಗೆ ಈ ಬೀಗದಕ್ಕೈ ಸಿಗುತ್ತಿರಲಿಲ್ಲ. ಭಗವಂತ ಯಾವಾಗಲೋ ಬ್ರಹ್ಮನಿರ್ವಾಣದವರೆಗೂ ಸಾಗಿ ಹೋಗಿಬಿಟ್ಟಿದ್ದ.

ಇದಾದ ಮೇಲೆ ನಾಲ್ಕನೆಯ ಅಧ್ಯಾಯದಲ್ಲಿ ಕರ್ಮಕ್ಕೆ ವ್ಯಾಪಕ ವ್ಯಾಖ್ಯೆ ಮಾಡಿದಾರೆ. ಕರ್ಮದ ಅರ್ಥ, ಜೀವನಪ್ರವಾಹದಲ್ಲಿ ಪ್ರಾಪ್ತವಾದ ಬಾಹ್ಯಕರ್ಮ. ಕರ್ಮದ ಈ ವ್ಯಾಖ್ಯೆ ಸರಿಯೇ ; ಆದರೆ ಇದಕ್ಕೆ ಅತಿರಿಕ್ತವಾಗಿ ಆ ಕರ್ಮ ಸಮತ್ವಪೂರ್ವಕ ನಡೆಯಲು ಅಗತ್ಯವಾದ ಅನೇಕ ವಸ್ತುಗಳೆಲ್ಲವೂ–ಇಂದ್ರಿಯನಿಗ್ರಹ, ತಪ, ಸ್ವಾಧ್ಯಾಯ, ಸಂಯಮ ಮುಂತಾದವು –ವ್ಯಾಪಕಾರ್ಥದಲ್ಲಿ ಕರ್ಮವೇ. ಸ್ವಧರ್ಮರೂಪ ಪ್ರತ್ಯಕ್ಷ ಕರ್ಮ, ಅದರ ಸಹಾಯಕ್ಕಾಗಿ ಅಂತಃಶುದ್ಧಿಕಾರಕವಾದ ವ್ಯಾಪಕ ಅಥವಾ ವಿಶೇಷ ಕರ್ಮ, ಹೀಗೆ ದ್ವಿವಿಧಯೋಗ ಕಲಿತರೆ ಕೊನೆಯಲ್ಲಿ ಅಕರ್ಮದಶೆ ಪ್ರಾಪ್ತವಾಗುತ್ತದೆ. ಇದಿಷ್ಟು ನಾಲ್ಕನೆಯ ಅಧ್ಯಾಯದ ವಿಷಯ.

ಆದರೆ ಈ ಅಕರ್ಮದಶೆ ನೋಡಲಿಕ್ಕೆ ಎರಡು ಬಗೆಯಾಗಿ ಕಾಣುತ್ತದೆ. (೧) ಎಲ್ಲಾ ಕರ್ಮವನ್ನು ಮಾಡಿಯೂ ಅದನ್ನು ಮಾಡಲಿಲ್ಲ ಎನ್ನುವಂತೆ ಇರುವುದು (ಯೋಗ), (೨) ಕರ್ಮವನ್ನು ಏನೂ ಮಾಡದೆಯೇ ಎಲ್ಲಾ ಕರ್ಮವನ್ನು ಮಾಡಿದಂತೆ ಇರುವುದು (ಸಂನ್ಯಾಸ)—ಹೀಗೆ ಎರಡು ರೀತಿಯ ಅಕರ್ಮದಶೆಗಳ ಹೋಲಿಕೆಯನ್ನು ಐದನೆಯ ಅಧ್ಯಾಯ ಮಾಡುತ್ತದೆ.

ಯೋಗ, ಸಂನ್ಯಾಸ ಎರಡೂ ತತ್ವತಃ ಒಂದೇ (೫ : ೪-೫). ಆದರೆ ಸಾಧಕನ ದೃಷ್ಟಿಯಿಂದ ಸಂನ್ಯಾಸಕ್ಕಿಂತ ಯೋಗ ಸುಲಭ (೫ : ೬-೧೨). ಸಂನ್ಯಾಸ ಕೇವಲ ಕಟ್ಟಕಡೆಯ ಭೂಮಿಕೆ. ಯೋಗವೋ ಸಾಧಕಾವಸ್ಥೆಯೂ ಹೌದು, ಕಟ್ಟಕಡೆಯ ಅವಸ್ಥೆಯೂ ಆಗಬಹುದು. ಹೀಗೆ ಆಗುತ್ತದೆ ನಿಷ್ಕರ್ಷೆ. ಆಮೇಲೆ ಪೂರ್ಣಯೋಗಿ ಅಥವಾ ಸಂನ್ಯಾಸಿ ಪುರುಷನ ರಮಣೀಯ ವರ್ಣನೆ ಶ್ಲೋಕ ೧೩ ರಿಂದ ೨೬ ರವರೆಗೆ ಬರುತ್ತದೆ. ಕಡೆಯಲ್ಲಿ ೨೪–೨೫–೨೬ ನೆಯ ಶ್ಲೋಕಗಳು, ಯೋಗದ ಅಥವಾ ಸಂನ್ಯಾಸದ ಕಟ್ಟಕಡೆಯ ಗುರಿಯೆಂದು ಯಾವ ಬ್ರಹ್ಮನಿರ್ವಾಣವನ್ನು ಹೇಳಿದೆಯೋ ಗೀತೆ, ಅದನ್ನು ವರ್ಣಿಸುತ್ತವೆ. ಈ ಮೂರು ಶ್ಲೋಕಗಳಲ್ಲಿ ಬ್ರಹ್ಮನಿರ್ವಾಣದ ಉಚ್ಚಾರ ಮೂರು ಸಲ ಆಗಿದೆ. ಇದು ಲಕ್ಷ್ಯದಲ್ಲಿರಬೇಕು. ಸಾರಾಂಶ— ಎರಡನೆಯ ಅಧ್ಯಾಯದಲ್ಲಿ ಯಾವ ನೆಲೆಯನ್ನು ಮುಟ್ಟಿದೆವೋ ಐದನೆಯ ಅಧ್ಯಾಯ ೨೬ ನೆಯ ಶ್ಲೋಕದಲ್ಲಿ ಮತ್ತೆ ಅದೇ ನೆಲೆಯನ್ನೇ ಮುಟ್ಟಿದೆವು.

ಆದರೆ ಇದರ ತರುವಾಯ ಐದನೆಯ ಅಧ್ಯಾಯದ ಕಟ್ಟಕಡೆಯ ಮೂರು ಶ್ಲೋಕ ೨೭, ೨೮, ೨೯ ಏನು ಮಾಡುತ್ತವೆಯೋ ಅದು ಮಹತ್ವದ ಪ್ರಶ್ನೆ. ಈ ಪ್ರಶ್ನೆಯ ಉತ್ತರದಲ್ಲಿ ನಿಮ್ಮ ಪ್ರಶ್ನೆಯ ಉತ್ತರವಿದೆ. ಈ ಪ್ರಶ್ನೆಯ ಉತ್ತರಕ್ಕಾಗಿ ನಾವು ಒಂದೇ ಸಲಕ್ಕೆ ಹನ್ನೆರಡನೆಯ ಅಧ್ಯಾಯಕ್ಕೆ ನೆಗೆಯಬೇಕು. ನನ್ನ ಅಭಿಪ್ರಾಯದಲ್ಲಿ ಹನ್ನೆರಡನೆಯ ಅಧ್ಯಾಯ ಭಕ್ತಿಯ ಭಾಷೆಯಲ್ಲಿ ಹೇಳಿದ ಐದನೆಯ ಅಧ್ಯಾಯ ; ಐದನೆಯ ಅಧ್ಯಾಯ ಕರ್ಮದ ಭಾಷೆಯಲ್ಲಿ ಹೇಳಿದ ಹನ್ನೆರಡನೆಯ ಅಧ್ಯಾಯ ! ಭಕ್ತಿಯ ಭಾಷೆಯಲ್ಲಿ ಹೇಳುವುದಾದರೆ, ಏನೂ ಕರ್ಮ ಮಾಡದೆಯೆ ಎಲ್ಲಾ ಕರ್ಮವನ್ನೂ ಮಾಡುವ ಸಂನ್ಯಾಸದಶೆ ಒಂದು ರೀತಿಯ ನಿರ್ಗುಣ ಉಪಾಸನೆ ; ಎಲ್ಲಾ ಕರ್ಮವನ್ನೂ ಮಾಡಿ ಅಲಿಪ್ತನಾಗಿರುವ ಯೋಗಾವಸ್ಥೆ ಒಂದು ರೀತಿಯ ಸಗುಣ ಉಪಾಸನೆ. ಇವೆರಡೂ ಉಪಾಸನೆಗಳ ತುಲನೆಯೇ ಹನ್ನೆರಡನೆಯ ಅಧ್ಯಾಯದ ವಿಷಯ. ಐದನೆಯ ಅಧ್ಯಾಯದಲ್ಲಿ ಮಾಡಿದ ತುಲನೆಯ ನಿರ್ಣಯದಂತೆಯೇ, ಅದೇ ರೀತಿಯಲ್ಲಿಯೆ, ಈ ತುಲನೆಯ ನಿರ್ಣಯವನ್ನೂ ಕೊಡಲಾಗಿದೆ. ತತ್ವತಃ ಯೋಗ — ಸಂನ್ಯಾಸಗಳೆರಡೂ ಹೇಗೆ ಒಂದೇಯೋ ಹಾಗೆಯೇ ಸಗುಣ–ಉಪಾಸನೆ, ನಿರ್ಗುಣ–ಉಪಾಸನೆಗಳೆರಡೂ ಒಂದೇ. ಏಕೆಂದರೆ, ಎರಡೂ ಈಶ್ವರನ ಕಡೆ ಒಯ್ಯುತ್ತವೆ. ಆದರೆ ಸಾಧಕನ ದೃಷ್ಟಿಯಿಂದ ವಿಚಾರ ಮಾಡಿದರೆ ಯೋಗ ಯಾವ ರೀತಿ ಸುಲಭವೋ ಸಗುಣ–ಉಪಾಸನೆಯೂ

ಅದೇ ರೀತಿ ಸುಲಭ. ಯೋಗದ ಹೊರತು ಪ್ರತಿಯೊಬ್ಬರೂ ಸಂನ್ಯಾಸವನ್ನು ಮುಟ್ಟುವುದು ಅಶಕ್ಯಪ್ರಾಯ (೫ : ೬ ಶ್ಲೋಕ ಪೂರ್ವಾರ್ಧ). ಸಗುಣದ ಹೊರತು ಪ್ರತಿಯೊಬ್ಬರೂ ನಿರ್ಗುಣವನ್ನು ಮುಟ್ಟುವುದೂ ಅದೇ ರೀತಿ ಅಶಕ್ಯ (೧೨ : ೫). ೧೨ : ೫ ಶ್ಲೋಕದ ಉತ್ತರಾರ್ಧವನ್ನೂ ೧೮ : ೧೧ ರ ಪೂರ್ವಾರ್ಧವನ್ನೂ ಹೋಲಿಸಿ ನೋಡುವಂತಿದೆ. ಆಗ ಕರ್ಮ – ಭಕ್ತಿಗಳ ದೃಷ್ಟಿಯಿಂದ ಒಂದೇ ಪ್ರಶ್ನೆ ಹೇಗೆ ಹುಟ್ಟುತ್ತದೆಯೋ, ಅದಕ್ಕೆ ಒಂದೇ ಉತ್ತರ ಯಾವ ರೀತಿಯಿದೆಯೋ ನಮಗೆ ತಿಳಿಯುತ್ತದೆ. ಸಂನ್ಯಾಸ – ನಿರ್ಗುಣೋಪಾಸನೆಗಳಲ್ಲಿ ದೇಹ ವಿಘ್ನರೂಪಿ. ಇದಿಷ್ಟೂ ವಿವೇಚನೆ ಐದನೆಯ ಅಧ್ಯಾಯ ಹನ್ನೆರಡನೆಯ ಅಧ್ಯಾಯಗಳ ಸಂಬಂಧವನ್ನು ತಿಳಿಸಲಿಕ್ಕಾಗಿ. ಆದುದರಿಂದ ಹನ್ನೆರಡನೆಯ ಅಧ್ಯಾಯದಲ್ಲಿ ಫಲತ್ಯಾಗದ ಭಾಷೆ ಬರುತ್ತದೆ (೧೨ . ೧೧–೧೨) ; ಐದನೆಯ ಅಧ್ಯಾಯವನ್ನು ಭಕ್ತಿಯಿಂದ ಮುಗಿಸಿದೆ.

ಈ ಸಗುಣೋಪಾಸನೆ ನಿರ್ಗುಣೋಪಾಸನೆಗಳ ವರ್ಣನೆಯನ್ನು ಮೊದಲು ಎಲ್ಲಾದರೂ ಮಾಡಿ, ಆಮೇಲೆ ಹನ್ನೆರಡನೆಯ ಅಧ್ಯಾಯದಲ್ಲಿ ಈ ತುಲನೆಯನ್ನು ಮಾಡಿದರೋ ಅಥವಾ ಹನ್ನೆರಡನೆಯ ಅಧ್ಯಾಯದಲ್ಲಿ ಈ ವಿಷಯವೆಲ್ಲ ಪೂರಾ ಹೊಸದಾಗಿಯೇ ಬಂದಿದೆಯೇ ? ಇದು ಈಗ ಪ್ರಶ್ನೆ. ಮೊದಲೇ ವರ್ಣಿಸಿದ ವಿಷಯವನ್ನು ಈ ತುಲನೆಯಲ್ಲಿ ಸಮಾಪ್ತ ಮಾಡಲಾಗಿದೆಯೆಂದು ಉತ್ತರ. ಐದನೆಯ ಅಧ್ಯಾಯದ ಹೊತ್ತಿಗೇ ಗೀತೆಯ ಮುಖ್ಯ ವಿಷಯ ಸಮಾಪ್ತವಾಯಿತು. ಆರರಿಂದ ಹದಿನೇಳನೆಯ ಅಧ್ಯಾಯದವರೆಗೆ ನಿಷ್ಕಾಮ ಕರ್ಮದ ಸಿದ್ಧಿಗಾಗಿ ಭಿನ್ನ ಭಿನ್ನ ಸಾಧನಗಳನ್ನು ತಿಳಿಸುತ್ತವೆ. ಹದಿನೆಂಟನೆಯದು ಉಪಸಂಹಾರಾತ್ಮಕ. ಇದರಲ್ಲಿ ಸಾಧನಾಧ್ಯಾಯಗಳ ಅಂತರ್ಗತವಾಗಿ ನಡುವೆ ಆರರಿಂದ ಹನ್ನೆರಡರವರೆಗೆ ಏಳು ಅಧ್ಯಾಯ ಸೇರಿ ಗೀತೆಯ ಉಪಾಸನಾ ಕಾಂಡ. ಇದರಲ್ಲಿ ಮತ್ತೆ ಆರನೆಯ ಅಧ್ಯಾಯದಿಂದ ಎಂಟರವರೆಗೆ ಪ್ರಧಾನವಾಗಿ ಅವ್ಯಕ್ತೋಪಾಸನೆ; ಒಂಬತ್ತರಿಂದ ಹನ್ನೆರಡರವರೆಗೆ ವ್ಯಕ್ತೋಪಾಸನೆ. 'ಪ್ರಧಾನವಾಗಿ' ಎಂದು ಉದ್ದೇಶ್ಯಪೂರ್ವಕ ಹೇಳುತ್ತೇನೆ. ಏಕೆಂದರೆ, ಗೀತೆ ತಾರ್ಕಿಕ ಪದ್ಧತಿಯಂತೆ ತುಂಡುಮಾಡಿ ವರ್ಣಿಸದು. ಸಗುಣದಲ್ಲಿ ನಿರ್ಗುಣ ಬರುತ್ತದೆ, ನಿರ್ಗುಣದಲ್ಲಿ ಸಗುಣ ಬಂದು ಬಿಡುತ್ತದೆ. ಹೀಗಿದೆ ಗೀತೆಯ ದೃಷ್ಟಿ. ಆರನೆಯ ಅಧ್ಯಾಯದಿಂದ ಎಂಟರವರೆಗೆ ಅವ್ಯಕ್ತೋಪಾಸನೆ ಹೇಗೆ? ಒಂಬತ್ತರಿಂದ ಹನ್ನೆರಡರವರೆಗೆ ವ್ಯಕ್ತೋಪಾಸನೆ ಹೇಗೆ? ಈಗ ಇದನ್ನು ವಿಚಾರಮಾಡಬೇಕು. ಅದಕ್ಕೆ ಮೊದಲು

ಐದನೆಯ ಅಧ್ಯಾಯದ ಕಡೆಯ ಮೂರು ಶ್ಲೋಕಗಳ ಕೆಲಸವೇನು ಎಂಬು ದನ್ನು ಹೇಳಬೇಕು. ಐದನೆಯ ಅಧ್ಯಾಯದ ೨೭, ೨೮ ಎರಡೂ ಶ್ಲೋಕ ಅವ್ಯಕ್ತೋಪಾಸನೆಯ ಸಂಕೇತವನ್ನು ಹೇಳುತ್ತವೆ. ೨೯ ನೆಯ ಶ್ಲೋಕ ವ್ಯಕ್ತ ಅಥವಾ ಸಗುಣೋಪಾಸನೆಯ ಸಂಕೇತವನ್ನು ತಿಳಿಸುತ್ತದೆ. ಈ ಕೊನೆಯ ಶ್ಲೋಕ ಐದನೆಯ ಅಧ್ಯಾಯದ ೧೪, ೧೫ ನೆಯ ಶ್ಲೋಕಗಳಿಗೆ ತೀರಾ ವಿರುದ್ಧ ವಾಗಿ ಕಾಣುತ್ತದೆ. ಇದನ್ನು ನೀವು ಗಮನಿಸಿದೀರಿ. ಆದರಿಂದ ಈ ತೋರಿಕೆಯ ವಿರೋಧವನ್ನು ಕಳೆಯಲು ಸಗುಣ–ನಿರ್ಗುಣದ ಸಮನ್ವಯ ಮಾಡುವ ಟಿಪ್ಪಣಿಯನ್ನು 'ಅನಾಸಕ್ತಿಯೋಗ' ದಲ್ಲಿ ೨೯ ನೆಯ ಶ್ಲೋಕದ ಕೆಳಗೆ ಬರೆದಿದ್ದೀರಿ. ಸಾರಾಂಶ—ಐದನೆಯ ಅಧ್ಯಾಯದ ಕಡೆಯಲ್ಲಿ ಬರುವ ಈ ಮೂರು ಶ್ಲೋಕ ಆರರಿಂದ ಹನ್ನೆರಡನೆಯ ಅಧ್ಯಾಯದವರೆಗೆ ಬರುವ ದ್ವಿವಿಧ ಉಪಾಸನೆಗೆ ಪ್ರಸ್ತಾವನೆಯ ಹಾಗೆ ಇವೆ.

ಗೀತೆಯ ನಿರ್ಗುಣೋಪಾಸನೆಯ ಕಲ್ಪನೆಯೇನೋ ತಿಳಿಯಲು ಹನ್ನೆರಡನೆಯ ಅಧ್ಯಾಯದ ೧, ೩, ೪, ೫, ನೆಯ ಶ್ಲೋಕಗಳು ಉಪಯೋಗ ವಾಗುತ್ತವೆ. ಈ ಶ್ಲೋಕಗಳಂತೆ ಗೀತೆ ನಿರ್ಗುಣೋಪಾಸನೆಯನ್ನು 'ಅವ್ಯಕ್ತೋಪಾಸನೆ' ಅಥವಾ 'ಅಕ್ಷರೋಪಾಸನೆ' ಎಂಬ ಸಂಜ್ಞೆಗಳಿಂದ ವರ್ಣಿಸುತ್ತದೆ. (೧೨ : ೧-೩). ಇದರ ಅಂಗವಾಗಿ 'ಸನ್ನಿಯಮ್ಯೇಂದ್ರಿಯ ಗ್ರಾಮಂ ಸರ್ವತ್ರ ಸಮಬುದ್ಧಯಃ' (೧೨ : ೧೪ ಪೂರ್ವಾರ್ಧ ) ಈ ಸಾಧನೆ ಯನ್ನು ಹೇಳಿ, ಈ ಇಡೀ ಮಾರ್ಗ ಹೆಚ್ಚು ಕ್ಲೇಶಕಾರಿ ಎಂದು ಅಭಿಪ್ರಾಯ ಪಡುತ್ತದೆ. 'ಅಕ್ಷರೋಪಾಸನೆ' ಶಬ್ದ ಶ್ಲೇಷಾತ್ಮಕವೆಂಬುದನ್ನು ಅರಿಯ ಬೇಕು. ಅಕ್ಷರ ಎಂದರೆ ಅವಿನಾಶಬ್ರಹ್ಮ ಎಂಬುದು ಒಂದು ಅರ್ಥ. ಅಕ್ಷರ ಎಂದರೆ ಓಂಕಾರ ಎಂಬುದು ಇನ್ನೊಂದು ಅರ್ಥ. ಇದರಲ್ಲಿ 'ಸನ್ನಿಯಮ್ಯೇಂ ದ್ರಿಯ ಗ್ರಾಮಂ ಸರ್ವತ್ರ ಸಮಬುದ್ಧಯಃ' ಎಂಬ ವರ್ಣನೆಯಿಂದ ಇಡೀ ಆರನೆಯ ಅಧ್ಯಾಯವನ್ನೇ ಸೂಚಿಸಿದಂತಾಯಿತು. ಏಳನೆಯ, ಎಂಟನೆಯ ಅಧ್ಯಾಯಗಳಲ್ಲಿ ಅವ್ಯಕ್ತ–ಅಕ್ಷರ–ಉಪಾಸನೆ ಸ್ಪಷ್ಟವಾಗಿದೆ. (೭ : ೨೪– ೮ : ೩, ೨೦, ೩೧ ಆದಿ). ಓಂಕಾರ ರೂಪ ಅಕ್ಷರೋಪಾಸನೆ ೧೩ : ೮ ರಲ್ಲಿದೆ. ಓಂಕಾರೋಪಾಸನೆಯ ಸಾಧನವಾಗಿ ಆರನೆಯ ಅಧ್ಯಾಯದಲ್ಲಿ ಹೇಳಿದ ಸಾಧನೆಯನ್ನು (೮ : ೧೦, ೧೨) ರಲ್ಲಿ ಪುನರುಚ್ಚಾರಮಾಡಲಾಗಿದೆ. ಆರನೆಯ ಅಧ್ಯಾಯದಲ್ಲಿ ಅರ್ಜುನನಿಂದ ಪ್ರಶ್ನೆಮಾಡಿಸಿ 'ಅನೇಕ ಜನ್ಮಸಂಸಿದ್ಧಿಃ' ಮುಂತಾದ ಶಬ ಗಳಿಂದ ಈ ಮಾರ್ಗ ಬಹಳ ಕಠಿನವೆಂದು ಸೂಚಿಸಲಾಗಿದೆ.

ಹೌದು, ನಿರಾಶೆಗೊಳ್ಳುವ ಕಾರಣವಿಲ್ಲವೆಂಬ ಧ್ವನಿ ಅಲ್ಲಿ ಹೊರಡುತ್ತದೆ. ಆದರೆ ಕಠಿನವೆಂಬ ಮಾತೂ ನಿಜ. ಈ ಅವ್ಯಕ್ತೋಪಾಸನೆಯೆಲ್ಲಾ ಪತಂಜಲಿಯ ಯೋಗಶಾಸ್ತ್ರ. ಯೋಗಶಾಸ್ತ್ರದ ಅಂತರ್ಗತವಾದ ಈ ವಿಷಯವನ್ನು ಪತಂಜಲಿಯ ಶಬ್ದಗಳಲ್ಲಿಯೇ ನಡುವಿನ ಸೂತ್ರಗಳನ್ನು ಬಿಟ್ಟು, ಕ್ರಮವನ್ನು ಬಿಡದೆ, ಸಂಗ್ರಹವಾಗಿ ಹೇಳುತ್ತೇನೆ:

(೧) ಅಥ ಯೋಗಾನುಶಾಸನಂ, (೨) ಯೋಗಶ್ಚಿತ್ತವೃತ್ತಿ ನಿರೋಧಃ, (೩) ತದಾ ದ್ರಷ್ಟುಃ ಸ್ವರೂಪೇಽವಸ್ಥಾನಂ, (೪) ಅಭ್ಯಾಸ ವೈರಾಗ್ಯಾಭ್ಯಾಂ ತನ್ನಿರೋಧಃ, (೫) ಈಶ್ವರ ಪ್ರಣಿಧಾನಾದ್ವಾ, (೬) ತಸ್ಯ ವಾಚಕಃ ಪ್ರಣವಃ, (೭) ತಜ್ಜಪಸ್ ತದರ್ಥ ಭಾವನಂ.

ಇದರಲ್ಲಿ ಮೊದಲಿನ ನಾಲ್ಕು ಸೂತ್ರಗಳ ಸಂಪೂರ್ಣ ವಿಷಯ ಗೀತೆಯ ಆರನೆಯ ಅಧ್ಯಾಯ. ಐದನೆಯ ಸೂತ್ರ ಏಳನೆಯ ಅಧ್ಯಾಯ. ಆರನೆಯ–ಏಳನೆಯ ಸೂತ್ರಗಳು ಎಂಟನೆಯ ಅಧ್ಯಾಯ. 'ಈಶ್ವರ ಪ್ರಣಿಧಾನಾದ್ವಾ' ಸೂತ್ರ 'ಅಭ್ಯಾಸ ವೈರಾಗ್ಯಾಭ್ಯಾಂ' ಸೂತ್ರದ ವಿಕಲ್ಪವಲ್ಲ ಎಂಬುದನ್ನು ಇಲ್ಲಿ ತಿಳಿಸಬೇಕು. ಅಭ್ಯಾಸ, ವೈರಾಗ್ಯ ಮಾಡು ಅಥವಾ ಈಶ್ವರ ಪ್ರಣಿಧಾನ ಮಾಡು ಎಂದಲ್ಲ. ಅಭ್ಯಾಸ–ವೈರಾಗ್ಯಗಳೊಂದಿಗೆ ಈಶ್ವರ ಪ್ರಣಿಧಾನವನ್ನು ಜೋಡಿಸಬೇಕು. 'ಈಶ್ವರ ಪ್ರಣಿಧಾನ' ವೆಂದರೆ ಅವ್ಯಕ್ತ ಈಶ್ವರನ ಧ್ಯಾನ.

ಇದೆಲ್ಲ ಯೋಗಶಾಸ್ತ್ರೀಯ ವಿಷಯ ಆರನೆಯ ಅಧ್ಯಾಯದಿಂದ ಎಂಟರ ವರೆಗೆ ಪೂರ್ಣವಾಗಿ ಬಂದಿದೆ. ಇದರ ಜೊತೆಯಲ್ಲಿಯೆ ಅಗ್ನಿಮಾರ್ಗ, ಧೂಮಮಾರ್ಗ ಮುಂತಾದ ಯೋಗಶಾಸ್ತ್ರೀಯ ಪರಿಭಾಷೆಯನ್ನು ಎಂಟನೆಯ ಅಧ್ಯಾಯದಲ್ಲಿ ಕೊಟ್ಟು ಅದನ್ನು ಮುಗಿಸಲಾಗಿದೆ.

ಇನ್ನು ವ್ಯಕ್ತೋಪಾಸನೆಯ ಕಡೆ ತಿರುಗೋಣ. ಗೀತೆಯ ವ್ಯಕ್ತೋಪಾಸನೆ ಅವ್ಯಕ್ತೋಪಾಸನೆಗೆ ವಿರೋಧಿಯಲ್ಲ. ಅವ್ಯಕ್ತದ ಪ್ರಕಾಶ ವ್ಯಕ್ತ ಎಂಬ ಆಶಯ. ಈ ಉಪಾಸನೆಯೇ ಶ್ರೀಮದ್ಭಾಗವತ, ತುಲಸೀರಾಮಾಯಣ ಮುಂತಾದ ಗ್ರಂಥಗಳಲ್ಲಿ ವರ್ಣಿತವಾದ, ಸಾಧುಶರಣರು ಹಾಡಿದ ಸುಪ್ರಸಿದ್ಧ ಭಕ್ತಿಮಾರ್ಗ. ಒಂಬತ್ತರಿಂದ ಹನ್ನೆರಡನೆಯ ಅಧ್ಯಾಯದ ವರೆಗಿನ ವಿಷಯ ಇದು.

ಅವ್ಯಕ್ತೋಪಾಸನೆಯ ಸ್ವರೂಪವನ್ನು 'ಧ್ಯಾನ' ಶಬ್ದದಿಂದ ವ್ಯಕ್ತಪಡಿಸಬಹುದು. ಭಕ್ತಿಮಾರ್ಗವೆಂದರೆ ಪ್ರೇಮ. ಇದನ್ನೇ 'ರಾಜಮಾರ್ಗ' ಅಥವಾ 'ರಾಜವಿದ್ಯೆ' ಎನ್ನುತ್ತಾರೆ (೯ : ೨). ಇದು ಪ್ರತ್ಯಕ್ಷಾವಗಮ;

ಇದೇ ಇದರ ಮುಖ್ಯ ವೈಶಿಷ್ಟ್ಯ (೯ : ೩). ಇದರಲ್ಲಿ ಬರೀ ಶ್ರದ್ಧೆಯದೇ ಕೆಲಸ. ಇದು ಆಚರಣೆಗೆ ಅತ್ಯಂತ ಸುಲಭ (ಸುಸುಖಂ ಕರ್ತುಂ ೯ : ೨). ಅವ್ಯಕ್ತೋಪಾಸನೆಯ ಹಾಗೆ ಕಠಿಣವಲ್ಲ. ಕೇವಲ ಶ್ರದ್ಧೆಯ ಅಭಾವದ ಕಾರಣದಿಂದ ಜನರು ಇದರ ಕಡೆ ತಿರುಗರು. ಎಲ್ಲರೂ ಇದರಲ್ಲಿ ಬರಬಹುದಾದಂಥ ಮಾರ್ಗ ಇದು (೯ : ೩). ಮಾನುಷೀಯ ರೂಪ ಈಶ್ವರನದೇ ಮೂರ್ತಿ. ಇದರ ಸೇವೆಯೇ ಈ ಮಾರ್ಗದ ವೈಶಿಷ್ಟ್ಯ. ಮಾನುಷೀಯ ರೂಪವನ್ನು ತಿರಸ್ಕರಿಸುವುದು ಈಶ್ವರನನ್ನೇ ತಿರಸ್ಕರಿಸಿದಂತೆ (೯ : ೧೧). ಅರ್ಜುನ ಈ ಮಾನುಷೀಯ ರೂಪವನ್ನು ಅವಜ್ಞೆಮಾಡಿದ. ಆದುದರಿಂದ ಅವನು ಪಶ್ಚಾತ್ತಾಪಪಡಬೇಕಾಯಿತು. (೧೧ : ೪೧). ಭಕ್ತಿಯ ಹೊಸ ದೃಷ್ಟಿ ಬಂದ ಮೇಲೆ ಮಾನುಷೀಯ ರೂಪವನ್ನು ನೋಡಿ ಅರ್ಜುನನಿಗೆ ಆನಂದವಾಯಿತು (೧೧:೫೧). ಎಲ್ಲ ಯಜ್ಞಗಳಲ್ಲಿ ಜ್ಞಾನಯಜ್ಞ ಶ್ರೇಷ್ಠವೇ. ಆದರೆ ಹರಿಪ್ರೇಮದಲ್ಲಿ ಮುಳುಗಿದ ಜನರು ಹರಿನಾಮಸ್ಮರಣರೂಪದ ಜಪಯಜ್ಞವನ್ನೇ ಶ್ರೇಷ್ಠವೆಂದು ತಿಳಿಯುತ್ತಾರೆ (೧೦ : ೨೫). ಜ್ಞಾನದಾತ ಭಗವಂತ ಸಮರ್ಥ (೧೦ : ೧೦–೧೧). ಆರನೆಯ ಅಧ್ಯಾಯದಲ್ಲಿ ಹೇಳಿದಂತೆ, ಅದಕ್ಕನುಸಾರವಾಗಿ ಎಲ್ಲಾ ಇಂದ್ರಿಯಗಳನ್ನು ಮನಸ್ಸಿನ ಸಮಸ್ತ ವ್ಯಾಪಾರಗಳನ್ನು ತಡೆಗಟ್ಟುವ ಬದಲು ಅದನ್ನು ಭಕ್ತಿಮಾರ್ಗದಲ್ಲಿ ಈಶ್ವರನಿಗೆ ಅರ್ಪಣೆಮಾಡುತ್ತಾರೆ (೯ : ೨೭). ಪಾಪಯೋನಿ, ಪುಣ್ಯಯೋನಿ ಮುಂತಾದ ಯಾವ ಭೇದವನ್ನೂ ಈ ಮಾರ್ಗ ಅರಿಯದು. ಇದು ಕೇವಲ ಪ್ರೇಮದ ಕೆಲಸ; ಎಲ್ಲಾ ವರ್ಣಗಳವರಿಗೂ ಈ ಧರ್ಮ ಮುಕ್ತ ದ್ವಾರ (೯ : ೩೨). ‘ನಿತ್ಯ ಸೇವೆ, ನಿತ್ಯ ಕೀರ್ತನೆ, ಉತ್ಸವ’ ಇದು ಈ ಮಾರ್ಗದ ಸ್ವರೂಪ (೯ : ೧೪ – ೩೪; ೧೧ : ೩೬, ೩೭, ೩೯, ೪೦). ೯ : ೨ ರ ‘ಧರ್ಮ್ಯಂ’ ಮತ್ತು ೯ : ೩ ರ ‘ಅಶ್ರದ್ದಧಾನಾಃ’ ಶಬ್ದಗಳನ್ನು ೧೨ : ೨೦ರ ‘ಧರ್ಮ್ಯಾಮೃತಂ’ ಮತ್ತು ‘ಶ್ರದ್ದಧಾನಾಃ’ ಶಬ್ದಗಳನ್ನು ಹೋಲಿಸಿದರೆ, ಹನ್ನೆರಡನೆಯ ಅಧ್ಯಾಯದಲ್ಲಿ ಸಮಾಪ್ತಿಗೊಳಿಸಿದ ವಿಷಯಕ್ಕೆ ಒಂಬತ್ತನೆಯ ಅಧ್ಯಾಯದಲ್ಲೇ ಶ್ರೀ ಗಣೇಶ ಮಾಡಿರುವುದು ಕಂಡುಬರುತ್ತದೆ

‘ಯೇ ತು ಧರ್ಮ್ಯಾಮೃತಮಿದಂ’ (೧೨ : ೨೦) ಎಂಬುದರ ಅರ್ಥ, ಹನ್ನೆರಡನೆಯ ಅಧ್ಯಾಯದಲ್ಲಿ ಹೇಳಿದ ಭಕ್ತಲಕ್ಷಣದ ಧರ್ಮ್ಯಾಮೃತವಂತೂ ಇದ್ದೇ ಇದೆ; ಒಂಬತ್ತರಿಂದ ಹನ್ನೆರಡನೆಯ ಅಧ್ಯಾಯದವರೆಗೆ ಹೇಳಿರುವ ಧರ್ಮ್ಯಾಮೃತವೂ ಹೌದು. ಈ ‘ಅಮೃತ’ ಶಬ್ದದೊಡನೆ ೯ : ೩ ರಲ್ಲಿ

ಬಂದಿರುವ 'ಮೃತ್ಯು' ಶಬ್ದವನ್ನು ಹೋಲಿಸಿ ನೋಡಿ. ಹಾಗೇ ಒಂಬತ್ತನೆಯ ಅಧ್ಯಾಯದ ಕಟ್ಟಕಡೆಯ ಶ್ಲೋಕವೇ ಹನ್ನೊಂದನೆಯ ಅಧ್ಯಾಯದ ಕಟ್ಟಕಡೆಯ ಶ್ಲೋಕ. ೧೨ : ೧ ರಲ್ಲಿ ಬಂದ 'ಏವಂ' ಶಬ್ದ ಈ ಎರಡೂ ಶ್ಲೋಕಗಳನ್ನು ಲಕ್ಷ್ಯದಲ್ಲಿಟ್ಟದೆಯೆಂದು ತಿಳಿಯಬೇಕು. ಹೆಚ್ಚು ವಿಸ್ತಾರ ಮಾಡುವುದಿಲ್ಲ. ಸಂಕ್ಷೇಪವಾಗಿ ಇಷ್ಟು ಹೇಳಿದರೆ ಸಾಕು. ೧೦, ೧೧, ೧೨ — ಈ ಮೂರು ಅಧ್ಯಾಯಗಳಿಂದ ಒಂಬತ್ತನೆಯದನ್ನು ಯಾವ ರೀತಿಯಲ್ಲೂ ಬೇರೆಮಾಡುವಂತಿಲ್ಲ. ಒಂಬತ್ತನೆಯ ಅಧ್ಯಾಯ ತಾಯಿ, ೧೦, ೧೨ ಅದರ ಮಕ್ಕಳು. ೧೧ : ೧ ನೆಯ ಶ್ಲೋಕದಲ್ಲಿ ಅರ್ಜುನ 'ನನ್ನ ಮೋಹ ಕಳೆಯಿತು' ಎಂದದ್ದೂ ಒಂಬತ್ತನೆಯ ಅಧ್ಯಾಯವನ್ನು ಲಕ್ಷ್ಯದಲ್ಲಿಟ್ಟೇ. 'ಪರಮಂ ಗುಹ್ಯಂ ಅಧ್ಯಾತ್ಮಸಂಜ್ಞಿತಂ' (೧೧ : ೧) ಎಂಬುದೇ ಒಂಬತ್ತನೆಯ ಅಧ್ಯಾಯದ ರಾಜ ವಿದ್ಯೆ, ರಾಜ ಗುಹ್ಯ. ಅಧ್ಯಾಯ ೬ ರಿಂದ ೮ ರ ವರೆಗೆ ಅವ್ಯಕ್ತೋಪಾಸನೆ, ೯ ರಿಂದ ೧೨ ರ ವರೆಗೆ ಭಕ್ತಿಮಾರ್ಗ — ಇವುಗಳ ಭೇದವನ್ನು ತಿಳಿಸಬೇಕು ಸಂಕ್ಷೇಪವಾಗಿ ಎಂದರೆ, ಓಂಕಾರ, ರಾಮನಾಮಗಳಲ್ಲಿ ಇರುವ ಭೇದಕ್ಕೆ ಸಮಾನ ಅದು.

ನಮ್ಮ ಮುಖ್ಯ ಪ್ರಶ್ನೆಯ ಉತ್ತರ ಇದರಲ್ಲಿ ಬಂದಿದೆ. ಆದರೂ ವಿಷಯ ಪೂರ್ತಿಗಾಗಿ ಮುಂದಿನ ಅಧ್ಯಾಯಗಳ ಸಂಗತಿಯನ್ನೂ ಹೇಳುತ್ತೇನೆ.

ಅಧ್ಯಾಯಗಳು ೧೩, ೧೪, ೧೫ ಜ್ಞಾನಮಾರ್ಗ. ಜ್ಞಾನಮಾರ್ಗ ಬೇರೆ, ಭಕ್ತಿಮಾರ್ಗ ಬೇರೆ ಎಂದು ಹೇಳಬೇಕಾಗಿಲ್ಲ. ಆದರೂ ಗೀತೆಯಲ್ಲಿ ಅದರಲ್ಲೂ ಭಕ್ತಿಯನ್ನು ಬೆರೆಸಿದೆ. 'ಮದ್‌ಭಕ್ತ'—೧೩ : ೧೮, ೧೪: ೨೬, ೧೫ : ೧೧ ನೋಡಿ. ಆದರೆ ಈ ಮಾರ್ಗ ಅವ್ಯಕ್ತೋಪಾಸನೆಯಿಂದಲೂ ಭಿನ್ನ. ಅವ್ಯಕ್ತೋಪಾಸನೆಯಲ್ಲಿ ಧ್ಯಾನ, ಭಕ್ತಿಮಾರ್ಗದಲ್ಲಿ ಪ್ರೇಮ. ಜ್ಞಾನಮಾರ್ಗದಲ್ಲಿ ವಿಚಾರ ಅಥವಾ ವಿವೇಕ ಪ್ರಧಾನವಾಗುತ್ತದೆ. ಧ್ಯಾನಮಾರ್ಗದ ಅರ್ಥ–ಮುಖ್ಯವಾಗಿ ಪತಂಜಲಿ; ಭಕ್ತಿಮಾರ್ಗದ ಅರ್ಥ – ವೈಷ್ಣವ ಸಂಪ್ರದಾಯ ; ಜ್ಞಾನಮಾರ್ಗದ ಅರ್ಥ – ಸಾಂಖ್ಯ, ವೇದಾಂತ. ೧೫ : ೧೫ 'ವೇದಾಂತಕೃತ್' ನೋಡಿ.

ಜ್ಞಾನಮಾರ್ಗವನ್ನು ತೋರಿಸಿದ ತರುವಾಯ ವಾಸ್ತವವಾಗಿ ಗೀತೆ ಮುಗಿಯಿತು. 'ಇತಿ ಗುಹ್ಯತಮಂ ಶಾಸ್ತ್ರಂ' ದ (೧೫ : ೨೦) ಅರ್ಥ ಹದಿನೈದನೆಯ ಅಧ್ಯಾಯ ಮುಗಿಯಿತೆಂದು ಮಾತ್ರವೇ ಅಲ್ಲ, ಇಲ್ಲಿಯವರೆಗೆ ಹೇಳಿದ ಇಡೀ ನೀತಿಶಾಸ್ತ್ರವೇ ಮುಗಿಯಿತು ಎಂದು ತಿಳಿಯುತ್ತೇನೆ.

‘ ಶಾಸ್ತ್ರ’ ಶಬ್ದವನ್ನು ಗೀತೆ ಮೊಟ್ಟಮೊದಲನೇ ಬಾರಿಗೆ ಇಲ್ಲಿ ಉಪಯೋಗಿಸಿದೆ. ಮತ್ತೆ ಇದೇ ಶಬ್ದ ಹದಿನಾರನೆಯ ಅಧ್ಯಾಯದ ಕಡೆಯಲ್ಲಿ, ಹದಿನೇಳನೆಯ ಅಧ್ಯಾಯದ ಆದಿಯಲ್ಲಿ ಬಂದಿದೆ.

ಇದರ ತರುವಾಯ ಹದಿನಾರು, ಹದಿನೇಳನೆಯ ಅಧ್ಯಾಯಗಳನ್ನು ನಾನು ಪರಿಶಿಷ್ಟಗಳೆಂದು ತಿಳಿಯುತ್ತೇನೆ. ಅದರಲ್ಲಿ ಗೀತೆಯ ಸಮಾಜ ಶಾಸ್ತ್ರವೆಲ್ಲವೂ ಬಂದಿದೆ. ಸಮಾಜದ ವ್ಯಕ್ತಿಗಳ ಶುಭವೃತ್ತಿ ಅರ್ಥಾತ್ ಸದ್ಗುಣ (ಅ. ೧೬), ಅದಕ್ಕೆ ಅನುರೂಪವಾದ ಶುಭಕೃತ್ಯ - ಸಾತ್ವಿಕ ಯಜ್ಞ, ದಾನ, ತಪ (ಅಧ್ಯಾಯ ೧೭) ಗಳೇ ಸಮಾಜಶಾಸ್ತ್ರಕ್ಕೆ ಸರ್ವಾಧಾರ. ಇವೆರಡೂ ಅಧ್ಯಾಯ ಒಂಬತ್ತನೆಯ ಅಧ್ಯಾಯಕ್ಕೆ ಪರಿಶಿಷ್ಟ. ಹದಿನಾರನೆಯ ಅಧ್ಯಾಯ ೯ : ೧೨ – ೧೩ ಶ್ಲೋಕಗಳ ಪರಿಶಿಷ್ಟ. ಹದಿನೇಳನೆಯ ಅಧ್ಯಾಯಕ್ಕೂ ಹದಿನಾರಕ್ಕೂ ೧೭ : ೧ ರಲ್ಲಿ ಅರ್ಜುನನ ಪ್ರಶ್ನೆಯಿಂದ ಸಂಬಂಧವನ್ನು ತೋರಿಸಿದೆ. ಇದಲ್ಲದೆ ೯ : ೨೭ ರಲ್ಲಿ ಹೇಳಿದ ಭಕ್ತಿ ಮಾರ್ಗೀಯ ಮುಖ್ಯವಿಧಿಯ ವಿಸ್ತೃತ ಸ್ಪಷ್ಟೀಕರಣ ಮಾಡುವ ಪರಿಶಿಷ್ಟವೂ ಹೌದು.

| | | |
|---|---|---|
| ‘ ಯದಶ್ನಾಸಿ ’— | ಹದಿನೇಳನೆಯ ಅಧ್ಯಾಯದ | ‘ ಆಹಾರ ’ |
| ‘ ಯಜ್ಜುಹೋಷಿ ’— | ,, | ‘ ಯಜ್ಞ ’ |
| ‘ ದದಾಸಿ ’ — | ,, | ‘ ದಾನ ’ |
| ‘ ತಪಸ್ಯಸಿ ’— | ,, | ‘ ತಪ ’ |
| ‘ ತತ್ ಕುರುಷ್ವ ಮದರ್ಪಣಂ ’— | ,, | ‘ ಓಂ ತತ್ ಸತ್’ ಪ್ರಕರಣ |

ಸಮರ್ಪಣವಿಧಿ ಭಕ್ತಿಮಾರ್ಗದ ಆತ್ಮ. ಹಾಗೆಂದ ಮಾತ್ರಕ್ಕೆ ಸಮರ್ಪಣವೆಂದರೆ ಮನಬಂದದ್ದನ್ನೆಲ್ಲಾ ಸಮರ್ಪಿಸುವುದಲ್ಲ. ಶುದ್ಧ ಸಾತ್ವಿಕವಾದುದನ್ನೇ ಸಮರ್ಪಣ ಮಾಡಬೇಕೆಂದು ಹದಿನೇಳನೆಯ ಅಧ್ಯಾಯ ಹೇಳುತ್ತದೆ. ಹದಿನೇಳನೆಯ ಅಧ್ಯಾಯಕ್ಕೆ ಆಶ್ರಮ ದೃಷ್ಟಿಯಿಂದ ‘ ಕಾರ್ಯಕ್ರಮಯೋಗ ’ ವೆಂಬ ಹೆಸರನ್ನು ಕೊಡುತ್ತೇವೆ. ಬೆಳಗ್ಗೆ ಎದ್ದು ಮೊದಲು ಪ್ರಾರ್ಥನೆಮಾಡಿ (ಶ್ರದ್ಧಾ), ಆಮೇಲೆ ಉಪಹಾರ ಮಾಡಿ (ಆಹಾರ), ಸೇವಾಕಾರ್ಯ (ಯಜ್ಞ ದಾನ ತಪ) ಪ್ರಾರಂಭಿಸಬೇಕು. ಕಡೆಯಲ್ಲಿ ಸಂಜೆಯ ಪ್ರಾರ್ಥನೆಯಲ್ಲಿ ಇವೆಲ್ಲವನ್ನೂ ಸಮರ್ಪಣ ಮಾಡಬೇಕು (ಓಂ ತತ್‌ಸತ್).